ಒಂಬತ್ತನೆಯ ವರುಷ : ನಾಲ್ಕನೆಯ ಕಿರಣ

# ಶಕುಂತಲಾ

( ಸಾಮಾಜಿಕ ಕಾದಂಬರಿ )

ಲೇಖಕರು :

**ಪ್ರೊ. ನಾ. ಸೀ. ಫಡಕೆ,** ಎಂ. ಎ.

ಅನುವಾದಕರು :

**ಕು. ಸರೋಜಿನಿ ಮಹಿಷಿ,** ಎಂ. ಎ.

ಪ್ರತಿಭಾ ಗ್ರಂಥಮಾಲೆ, ಧಾರವಾಡ

ಜೂನ್ ೧೯೫೩ ಬೆಲೆ - ೨—೧೨—೦

# ನಮ್ಮೆರೇ ಮೂರು ಮಾತು

ಮರಾಠಿಯಲ್ಲಿ ಹೆಸರಾಂತ ಕಾದಂಬರಿಕಾರರಾದ ಪ್ರೊ. ನಾ. ಸೀ. ಫಡಕೆ, ಎಂ. ಎ. ಅವರ 'ಶಕುಂತಲಾ' ಕಾದಂಬರಿಯನ್ನು ಪ್ರತಿಭಾ ಗ್ರಂಥ ಮಾಲೆಯ ವಾಚಕರಿಗೆ ನೀಡಲು ಆನಂದವೆನಿಸುತ್ತದೆ. ಬಿರುಗಾಳಿಯ ತರುವಾಯ ನಾವು ಕೊಡುತ್ತಿರುವುದು ಇದು ಅವರ ಎರಡನೆಯ ಕೃತಿ. ಅವರ ಪಳಗಿದ ಲೇಖನಿಯ ಬಗೆಗೆ ಹೆಚ್ಚಿಗೆ ಬರೆಯುವುದು ಈಗ ಅನಾವಶ್ಯಕ. ಈ ಕಾದಂಬರಿಯ ಪ್ರಕಟನೆಗೆ ಅನುಮತಿಯಿತ್ತುದಕ್ಕಾಗಿ ಫಡಕೆಯವರಿಗೆ ತುಂಬ ಕೃತಜ್ಞರಾಗಿದ್ದೇವೆ.

ಒಂದು ನಾರೀಜೀವನದ ಮನೋವಿಶ್ಲೇಷಣಾತ್ಮಕವಾದ ಈ ಕಾದಂಬರಿಯನ್ನು ಅನುವಾದಿಸಿದವರು, ಎಂ. ಎ. ಪದವೀಧರರಾದ ಕು. ಸರೋಜಿನಿ ಮಹಿಷಿಯವರು. ಆಳವಾದ ಅಭ್ಯಾಸಿಗಳೂ ಕಿರಿಯ ವಯಸ್ಸಿನಲ್ಲಿಯೇ ಲೇಖನ - ಭಾಷಣ ಕಲೆಗಳಿಂದ ಹೆಸರಾದವರೂ ಆದ ಇವರ ಅನುವಾದಶೈಲಿ ವಾಚಕರ ಮನವನ್ನು ಮೆಚ್ಚಿಸುವದರಲ್ಲಿ ಸಂದೇಹವಿಲ್ಲ. ನಮ್ಮ ಮಾಲೆಯಲ್ಲಿ ಬೆಳಗಿಸಲು ಈ ಕೃತಿಯನ್ನು ಅನುವಾದಿಸಿ ಕೊಟ್ಟಿದ್ದಕ್ಕಾಗಿ ಅವರಿಗೆ ನಮ್ಮ ಅನಂತ ವಂದನೆಗಳು.

ಪುಸ್ತಕದ ಹೊದಿಕೆಗೆ ಅಂದವಾದ ದ್ವಿವರ್ಣ ಚಿತ್ರವನ್ನು ಬರೆದುಕೊಟ್ಟ ಕಲಾವಿದ ಶ್ರೀ. ಮೂರ್ತಿಯವರ ಉಪಕಾರವನ್ನು ಸ್ಮರಿಸುತ್ತೇವೆ.

—**ಸಂಪಾದಕ.**

ಮುದ್ರಕರು ಮತ್ತು ಪ್ರಕಾಶಕರು :
ಭಾಲಚಂದ್ರ ಘಾಣೇಕರ
ಪ್ರತಿಭಾಮುದ್ರಣ, ಭಗತಸಿಂಗ ಬೀದಿ, ಧಾರವಾಡ.



ಸಮೀಪದ, ದೂರದ ಭಿನ್ನ ಭಿನ್ನ ಶಬ್ದಗಳು ಒಂದೊಂದಾಗಿ ಹೆಚ್ಚು ಕಡಿಮೆ ಸ್ಪಷ್ಟವಾಗಿ ಕೇಳಬರತೊಡಗಿದೊಡನೆ, ಅವಳು "ಬೆಳಗಾಯಿತೇನೋ!" ಎಂದು ದಿನಾಲು ಮನಸ್ಸಿನಲ್ಲಿಯೇ ಗುಣುಗುಟ್ಟುತ್ತಿದ್ದಳು; ಆದರೆ ಹಾಸಿಗೆ ಬಿಟ್ಟು ಏಳುತ್ತಿರಲಿಲ್ಲ. ಇನ್ನೊಂದು ತಾಸು ಮಲಗಲೆಂದೇನೋ, ಮುಸುಕನ್ನು ತಲೆಯವರೆಗೂ ಎಳೆದುಕೊಂಡು ಮತ್ತೆ ಮಲಗುತ್ತಿದ್ದಳು. ಇದರಿಂದ ಸೂರ್ಯಪ್ರಕಾಶದ ತೊಂದರೆ ಕಡಿಮೆಯಾಗುತ್ತಿತ್ತು; ಅಲ್ಲದೆ ಚಿತ್ರಪಟದ ಯಾವದೇ ದೃಶ್ಯದಲ್ಲಿ, ಮನುಷ್ಯನ ಮಾತುಗಳೋ [illegible]ವಾ ಇನ್ನಾವ ಶಬ್ದವೋ, ಹಿನ್ನೆಲೆಯಲ್ಲಿ ಸರಿಯುತ್ತ ಸರಿಯುತ್ತ [illegible]ಷ್ಟವಾಗಿ ಹೋದಂತೆ, ಯಾವ ಶಬ್ದಗಂಳಿದ ಅವಳಿಗೆ ಎಚ್ಚರವಾಗಿತ್ತೋ [illegible]ಬ್ದಗಳು ಹೆಚ್ಚೆಚ್ಚು ಅಸ್ಪಷ್ಟವಾಗುತ್ತ ಹೋಗುತ್ತಿದ್ದವು; ಅವಳಿಗೆ ಮತ್ತೆ [illegible]ದ್ರೆ ಹತ್ತಿಬಿಡುತ್ತಿತ್ತು.

ಬೆಳಗಾಗುತ್ತಲೇ ಅವಳನ್ನು ನಿದ್ರೆಯಿಂದೆಬ್ಬಿಸುವ ಅದೆಷ್ಟೋ ಸಪ್ಪಳಗಳಲ್ಲಿ ಮೊದಲನೆಯದು “ ಠಣ್ ಠಣ್...... ಸರ್ರss ”; ಇದು ನಿತ್ಯದ್ದೇ! ಇದನ್ನು ಕೇಳಿದೊಡನೆಯೇ ಬೆಳಗಿನ ಟ್ರಾಮು ಗಾಡಿಗಳು ಸುರುವಾದವೆಂದು ಅವಳಿಗೆ ಗೊತ್ತಾಗುತ್ತಿತ್ತು; ಆದರೂ ಅವಳು ಕಣ್ದೆರೆಯುತ್ತಿದ್ದಿಲ್ಲ; ಹಾಗೇ ಮಲಗಿರುತ್ತಿದ್ದಳು. ಬಳಿಕ ಮತ್ತೆ ಒಂದರ ಹಿಂದೊಂದು ಸಪ್ಪಳಗಳು ಕೇಳಬರುತ್ತಿದ್ದವು. ಅಷ್ಟರಲ್ಲಿ ಒಂದು ದೊಡ್ಡ ‘ ಟ್ರಕ್ ’ ಅಲ್ಲಿಂದ ಹಾಯ್ದು ಹೋದರೆ ಆ ಇಡೀ ಕಟ್ಟಡ— ಯಾವುದರ ಮೂರನೆಯಂತಸ್ತಿನ ಮೇಲೆ ಪೂರ್ವಕ್ಕಿರುವ ಕೋಣೆಯಲ್ಲಿ ಅವಳು ಮಲಗಿದ್ದಳೋ— ಅದು ಕೂಡ ನಡುಗಿದಂತೆ ಭಾಸವಾಗುತ್ತಿತ್ತು. ಆ ಟ್ರಕ್ಕನ್ನು ಅವಳಿಂದೂ ನೋಡಿರಲಿಲ್ಲ; ಆದರೆ ಅದಾರೋ ಅವಳಿಗೆ ಹೇಳಿದ್ದರು— ಬಾಂಧ್ರಾದ ಕಟುಕರ ಅಂಗಡಿಯಿಂದ ಶುಚಿಯಾದ ಮಾಂಸವು ಈ ಟ್ರಕ್ಕಿನಿಂದಲೇ ಮುಂಬಯಿ ಕಡೆಗೆ ಹೋಗುತ್ತದೆ, ಎಂದು; ಅದಕ್ಕೆ ಏನೊ, ಈ ಟ್ರಕ್ಕಿನ ಖಡ್ ಖಡ್ ಸಪ್ಪಳವು ಕೇಳಬರುತ್ತಲೇ, ಸಾವಿರಾರು ಕುರಿಗಳ ದೀನಸ್ವರವನ್ನು ಕೇಳಿದಂತೆ ಎನಿಸುತ್ತಿತ್ತು; ಅವಳ ಮೈಮೇಲೆ ಮುಳ್ಳುಗಳೇಳುತ್ತಿದ್ದವು. ಈ ಟ್ರಕ್ಕಿನ ಸಪ್ಪಳ ದೂರ ದೂರ ಹೋದಂತೆ ಅವಳಿಗೆ ಕೊಂಚ ಸಮಾಧಾನವೆನಿಸುತ್ತಿತ್ತು; ಅವಳ ಲಕ್ಷ್ಯವೂ ಇತರ ಸಪ್ಪಳಗಳ ಕಡೆಗೆ ಹರಿಯುತ್ತಿತ್ತು. ಅವಳಿದ್ದ ಮನೆಯಿಂದ ಎರಡು ಬ್ಲಾಕುಗಳನ್ನು ಬಿಟ್ಟು ಮೂರನೆಯ ಬ್ಲಾಕಿನಿಂದ ನಾಯಿ ಬೊಗಳಿದ ಸಪ್ಪಳ ಕೇಳಿಸುತ್ತಿತ್ತು. ಈ ಬ್ಲಾಕಿನಲ್ಲಿ ಮಧ್ಯಮ ವಯಸ್ಸಿನ ಒಬ್ಬ ಪಾರಶೀ ಗೃಹಸ್ಥ ವಾಸವಾಗಿದ್ದ; ಬೆಳಗಾಗುತ್ತಲೇ ಆ ದೊಡ್ಡ ನಾಯಿಯನ್ನು ಜೊತೆಗೆ ಕರೆದುಕೊಂಡು ತಿರುಗಾಡಲು ಹೋಗುವದು ಅವನ ನಿತ್ಯದ ನಿಯಮವಾಗಿತ್ತು. ಈ ನಾಯಿಯ ಬೊಗಳುವಿಕೆಯಾದರೂ ಕಾಡ ಪಶುವಿನಂತೆ ಒಳ್ಳೇ ಗಂಭೀರವಾಗಿತ್ತು, ಗಡುಸಾಗಿತ್ತು. ಈ ಸಪ್ಪಳ ಕಿವಿಗೆ ಬಿದ್ದೊಡನೆ, ಆ ಗೃಹಸ್ಥನು ಆಗಲೇ ತಿರುಗಾಡಿ ಬಂದಿರುವನೆಂದು ಅವಳು ತಿಳಿಯುತ್ತಿದ್ದಳು ಮೂಲೆಯ ಮೇಲಿನ ಇರಾಣೀ ಹೋಟಲು ಒಂದು ಕೂಗಳತೆಯ ಮೇಲಿದ್ದರೂ, ನಸುಕಿನ ವಾತಾವರಣ ಶಾಂತವಾಗಿದ್ದುದರಿಂದ ಕಪ್ಪು-ಬಸಿಗಳ ಸಪ್ಪಳ ಅಲ್ಲಿಂದಲೂ ಕೇಳಬರುತ್ತಿತ್ತು; ಪೂರ್ವ ದಿಕ್ಕಿನ ಕಿಟಕಿಯ ಕೆಳಗಿನಿಂದ “ ತರಕಾರಿ ss ” ಎಂಬ ಕೂಗು ಬಂದು ಅವಳ ಕಿವಿಯ ಮೇಲೆ ಅಪ್ಪಳಿ

ಸುತ್ತಿತ್ತು; ಅದನ್ನು ಕೇಳಿ "ಇಷ್ಟು ನಸುಕಿನಲ್ಲಿ ಇವರ ಈ ಹಾಳು ತರಕಾರಿ ಅದಾರು ತೆಗೆದುಕೊಳ್ಳಬೇಕೋ ದೇವರೇ ಬಲ್ಲ." ಎಂದು ತನ್ನಷ್ಟಕ್ಕೆ ತಾನೇ ಗುಣಗುಟ್ಟುತ್ತಿದ್ದಳು.

ಅಷ್ಟರಲ್ಲಿ ಕಿಟಿಕೆಯಿಂದ ತಣ್ಣನೆಯ ಗಾಳಿ ಬಂದು ತಗಲುತ್ತಿತ್ತು; ಮೇಲೇರುತ್ತಿದ್ದ ಸೂರ್ಯನ ಕಿರಣಗಳೂ ಕೊಂಚ ಬಿಸಿಯಾಗುತ್ತಿದ್ದವು. ಆದರೆ ಅವಳು ತನ್ನ ಹೊದಿಕೆಯುನ್ನು ಇನ್ನಿಷ್ಟು ಬಿಗಿಯಾಗಿ ಎಳೆದುಕೊಂಡು, ಸೂರ್ಯಪ್ರಕಾಶಕ್ಕೆ ಎಳ್ಳಷ್ಟೂ ಅವಕಾಶ ಕೊಡದೆ, ಇನ್ನೊಂದು ಗಳಿಗೆ ಮಲಗಬೇಕೆಂದು, ಆಚೆಗೆ ಹೊರಳಿ, ನಿದ್ದೆಯಾಗಿ ಮಲಗಿಬಿಡುತ್ತಿದ್ದಳು.

ನಿತ್ಯದಂತೆ ಇಂದೂ ಅವಳು ಆಚೆಗೆ ಹೊರಳಿ ಮಲಗಿದಳು; ಆದರೆ ಅವಳಿಗೆ ನಿದ್ರೆ ಹತ್ತಲಿಲ್ಲ. ಹೊದಿಕೆಯೊಳಗಿಂದಲೇ ಸೂರ್ಯನ ಪ್ರಕಾಶ ಒಳಸೇರತೊಡಗಿತು; ಗಾಳಿಯ ಬಡಿತವೂ ಬಹಳ ತಂಪೆನಿಸತೊಡಗಿತು. ಎಷ್ಟು ಬಿಗಿಯಾಗಿ ಎಳೆದು ಹೊದ್ದರೂ ಚಳಿ ತಪ್ಪಲಿಲ್ಲ! ಕೊನೆಗೆ ಅವಳು ತಲೆಯ ಮೇಲಿನ ಮುಸುಕನ್ನು ಓರೆಮಾಡಿ ಕಣ್ದೆರೆದು ನೋಡಿದಳು; ಗಾಳಿಯ ಬಡಿತದಿಂದ ಕಿಟಕಿಯ ಪಡದೆ ಜೋರಿನಿಂದ ಹೊಯ್ದಾಡುತ್ತಿರಬಹುದೆಂದು ಅವಳು ಎಣಿಸಿದ್ದಳು, ಆದರೆ ಎಲ್ಲಿ? ಕಿಟಕಿಗೆ ಪರದೆಯೇ ಇದ್ದಿರಲಿಲ್ಲವಲ್ಲ! ಕಿಟಕಿಯ ಕಡೆಗೆ ನಟ್ಟ ನೋಟದಿಂದ ನೋಡಿದಳು; ಅದು ಅವಳ ಕೋಣೆಯ ಕಿಟಕಿಯಾಗಿರದೆ, ರೇಲ್ವೆ ಡಬ್ಬಿಯ ಕಿಟಕಿಯಾಗಿತ್ತು!

ಹಾಗಾದರೆ ಇಂದು ಅವಳ ಕಿವಿಗೆ ಬಿದ್ದ ನಿತ್ಯದ ಸಪ್ಪಳಗಳೆಲ್ಲ ಸ್ವಪ್ನದಲ್ಲಿಯೇ? ಆಗಲೇ ಅವಳು ಎಚ್ಚತ್ತದ್ದು ಸ್ವಪ್ನದಲ್ಲಿಯೇ! (ಕನಸು ಕಾಣುವದು ನಿದ್ರೆಯಲ್ಲಿದ್ದಾಗ! ಬಳಿಕ ಆ ಕನಸಿನಲ್ಲಿಯೇ ಮಲಗಿ ಮತ್ತೆ ಎಚ್ಚರವಾದರೆ!) ನಿಜವಾಗಿ ಅವಳು ಎಚ್ಚತ್ತದ್ದು ಈಗ! ಅವಳೀಗ ಮುಂಬಯಿಯ ತನ್ನ ಮನೆಯಲ್ಲಿದ್ದಿರಲಿಲ್ಲ, ಪ್ರವಾಸದಲ್ಲಿದ್ದಳು!

ಮತ್ತೆ ಅವಳು ಹೊದಿಕೆಯನ್ನು ಎಳೆದುಕೊಂಡು ಮಲಗಿದಳು; ಕೊಂಚ ನಡುಗಿದಂತೆ ಭಾಸವಾಯಿತು, ಆದರೆ ಅದು ಚಳಿಯಿಂದಾಗಿರಲಿಲ್ಲ; ಪ್ರವಾಸದಲ್ಲಿದ್ದೇನೆಂದು ನೆನಪಾದೊಡನೆಯೇ ಹಿಂದಿನ ದುಃಖದ ಘಟನೆಗಳನೇಕ ಅವಳ ಸ್ಮೃತಿಪಟಲದ ಮೇಲಿಂದ ಹಾಯ್ದು ಹೋದವು! ಅವುಗಳ ನೆನಪೂ ಕೂಡ ಅವಳಿಗೆ ಬೇಕಾಗಿರಲಿಲ್ಲ! ಅದಕ್ಕಾಗಿ ಮಲಗಿ ಮತ್ತೆ ನಿದ್ರೆ ಹೋಗುವ

ಯತ್ನ ಮಾಡಿದಳವಳು !

ಆದರೆ ಆ ಪ್ರಯತ್ನ ಸಫಲವಾದಂತೆ ತೋರಲಿಲ್ಲ. ಎಂಟು-ಹತ್ತು ನಿಮಿಷ ಮಾತ್ರ ಅವಳು ಹಾಗೆ ಮಲಗಿರಬಹುದು; ಅಷ್ಟರಲ್ಲಿ ಅವಳು ಪೂರ್ಣ ಕಣ್ತೆರೆದು ಹೊದಿಕೆಯನ್ನು ದೂರ ಸರಿಸಿದಳು; ಆದರೆ ಎದ್ದು ಕೂಡಲಿಲ್ಲ. ರೇಲ್ವೆ ಡಬ್ಬಿಯಲ್ಲಿ ಎಷ್ಟು ಜನರು ಕೂಡಬೇಕೆಂಬ ಸಂಖ್ಯೆಯನ್ನು ಬರೆದ ಹಲಗೆ ಬಲಗಡೆಗೆ ಮೇಲೆಯೇ ಕಾಣುತ್ತಿತ್ತು; ಅವಳ ದೃಷ್ಟಿ ಆ ಹಲಗೆಯ ಮೇಲೆ ನೆಟ್ಟಿತ್ತು. ಆದರೆ ಅಕ್ಷರ ಮಾತ್ರ ಅವಳ ಕಣ್ಣಿಗೆ ಕಾಣಿಸಲಿಲ್ಲ. ಬೇರೊಂದು ವಿಚಾರವೇ ಅವಳ ತಲೆಯಲ್ಲಿ ಸುಳಿಯುತ್ತಿತ್ತು. 'ಬಾಳಾ ಸಾಹೇಬರು ಈ ವೇಳೆಯಲ್ಲಿ ಎಲ್ಲಿರಬಹುದು ? ಹಾಸಿಗೆಯ ಮೇಲಿರಬಹುದೇ ಇನ್ನೂ ? ಅಥವಾ ತಮ್ಮ ವೇಷಭೂಷಣಗಳನ್ನೆಲ್ಲ ಧರಿಸಿ ಕೆಲಸದಲ್ಲಿ ತೊಡ ಗಿರಬಹುದೋ ? ಸೈನ್ಯದಲ್ಲಿ ಸೇರಿದರೆ ತೀರ ನಸುಕಿನಲ್ಲಿಯೇ ಏಳಬೇಕಾಗು ವದೆಂದು ಅವಳು ಯಾರಿಂದಲೋ ಕೇಳಿದ್ದಳು; ಕ್ಷೌರಿಕನು ಬಂದು ಹಾಸಿಗೆ ಯಲ್ಲಿದ್ದಾಗಲೇ ತನ್ನ ಕೆಲಸ ಪೂರೈಸಿ ಬಿಡುವನಂತೆ ! ಬಳಿಕ ತಮ್ಮ ವೇಷ ಭೂಷಣಗಳನ್ನೆಲ್ಲ ಧರಿಸಿ ಸತ್ಯದ ಕವಾಯತಿಗಾಗಿ ಮೈದಾನದಲ್ಲಿ ಸೇರಬೇಕಾ ಗುವದು;—ಇಷ್ಟೆಲ್ಲ ಸಿದ್ಧತೆ ಮಾಡಿಕೊಂಡು ಕವಾಯತಿಗಾಗಿ ಸಿದ್ಧರಾದ ಬಾಳಾಸಾಹೇಬರ ಚಿತ್ರ ಅವಳ ಕಣ್ಮುಂದೆ ಬರುತ್ತಿತ್ತು. ಆದರೆ ಅವರು ಯಾವ ಊರಿನಲ್ಲಿರುವರು ಎಂಬುದನ್ನು ಮಾತ್ರ ಅವಳು ಕಲ್ಪಿಸಲು ಸಾಧ್ಯ ವಾಗಲಿಲ್ಲ. ನಾಲ್ಕು ದಿನಗಳ ಹಿಂದೆ ಅವರು ಮುಂಬಯಿ ಬಿಡುವಾಗ 'ಯಾವ ಊರಿಗೆ ಹೋಗುವಿರಿ ?' ಎಂಬುದನ್ನು ಕೂಡ ಅವಳು ಕೇಳಿ ತಿಳಿದುಕೊಂಡಿರಲಿಲ್ಲ; ಅವರೂ ಅವಳಿಗೆ ಹೇಳಿರಲಿಲ್ಲ. ಅವರು ಸೈನ್ಯದಲ್ಲಿ ಕಮಿಶನ್ನಿಗಾಗಿ ಅರ್ಜಿ ಹಾಕಿರುವ ವಿಷಯ ತಿಳಿದೇ ಅವಳು ಕೋಪಿಸಿಕೊಂಡಿ ದ್ದಳು. ಕಮಿಶನ್ ಒಂದು ವೇಳೆ ದೊರೆತರೂ ಅದನ್ನವರು ಸ್ವೀಕರಿಸಕೂಡ ದೆಂದು ಅವರೊಡನೆ ವಾಗ್ವಾದ ಮಾಡಿದ್ದಳು. ಪ್ರೇಮದ ಬಲವನ್ನೆಲ್ಲ ಒಂದು ಗೂಡಿಸಿ ಹಟ ಹಿಡಿದಳು. ಆದರೆ ಬಾಳಾಸಾಹೇಬರು ಅವಳ ವಿಚಾರಸರಣಿ ಯನ್ನು ಕೇಳಿಯೇ ನಕ್ಕುಬಿಟ್ಟರು; ಅವಳ ಹಟವು ಸಾಧಿಸಲಿಲ್ಲ. ಕಮಿಶನ್ ದೊರೆತೊಡನೆಯೇ ಬಾಳಾಸಾಹೇಬರು ಅದನ್ನು ಸ್ವೀಕರಿಸಿದರು. ಕೊನೆಯ ದಾಗಿ ಅವಳೂ ಮತ್ತೆ ತನ್ನ ಮಾತನ್ನು ಕೇಳಬೇಕೆಂದು ಪ್ರಾರ್ಥಿಸಿದಳು.

ಬಾಳಾಸಾಹೇಬರು ಮಾತ್ರ ಅವಳ ಮಾತಿನ ಕಡೆಗೆ ಎಳ್ಳಷ್ಟೂ ಲಕ್ಷ್ಯಕೊಡದೆ 'ಹಾಜರ' ಆಗಲು ಹೊರಟುಹೋದರು.

ಅವಳು ! ಅವಳು ತಂದೆಯ ಮನೆಯಲ್ಲಿಯೇ ಇರಬೇಕೆಂದು ಕೊಲ್ಹಾಪುರಕ್ಕೆ ಹೊರಟಿದ್ದಳು. ಅವಳ ಈ ವಿಚಾರವೂ ಒಮ್ಮಿಂದೊಮ್ಮೆಲೆಯೇ ನಿಶ್ಚಿತವಾಯಿತು; ತಾನು ಹೇಳುವ ವಿಚಾರಸರಣಿ—ಕೊನೆಯ, ಗಳಿಗೆಯಲ್ಲಾದರೂ ಸರಿ—ಬಾಳಾಸಾಹೇಬರ ಮನಸ್ಸಿಗೆ ಒಪ್ಪಿಗೆಯಾಗಿ, ಅವರು ತಮ್ಮ ಹಟವನ್ನು ಬಿಟ್ಟುಕೊಡಬಹುದೆಂದು ಅವಳು ಆಶಿಸಿದ್ದಳು. ಆಗಸ್ಟ ಒಂಬತ್ತನೆಯ ದಿನಾಂಕದಂದು ಮಹಾತ್ಮಾಜಿಯವರನ್ನೂ ಇನ್ನುಳಿದ ಮುಂದಾಳುಗಳನ್ನೂ ಹಿಡಿದು, ಸರಕಾರವು ಸೆರೆಮನೆಯಲ್ಲಿರಿಸಿತ್ತು; ಬಳಿಕ ಹತ್ತು-ಹದಿನೈದು ದಿನ ಎಲ್ಲ ವೃತ್ತಪತ್ರಗಳಲ್ಲಿಯೂ ಜನತೆಯ ಕ್ಷೋಭ, ಸರಕಾರದ ಬಲಾತ್ಕಾರ ಇವುಗಳ ಸುದ್ದಿಯೋ ಸುದ್ದಿ; ಇವುಗಳನ್ನೋದಿಯಾದರೂ ಬಾಳಾಸಾಹೇಬರು ಕಮಿಶನ್ನನ್ನು ಸ್ವೀಕರಿಸುವದು ತನ್ನಂಥವನಿಗೆ ಯೋಗ್ಯವಾಗದೆಂದು, ಬಿಟ್ಟುಕೊಡಬಹುದೇನೋ ಎಂದು ಅವಳು ತಿಳಿದಿದ್ದಳು. ಅದಕ್ಕೆಂದೇ ಬಾಳಾಸಾಹೇಬರು ಹೋದ ಮೇಲೆ ಅದೇ ಮನೆಯಲ್ಲಿಯೇ ಇರಬೇಕೋ ಅಥವಾ ಎಲ್ಲಿಯಾದರೂ ಹೋಗಬೇಕೋ ಎಂಬ ವಿಚಾರವು ಕೂಡ ಅವಳ ತಲೆಯಲ್ಲಿ ಸುಳಿದಿರಲಿಲ್ಲ. ಇಂದು ಅವಳ ಈ ಆಶೆ ಪೂರೈಸಿರಲಿಲ್ಲ. ಬಾಳಾಸಾಹೇಬರು ಹೊರಟುಹೋಗಿದ್ದರು; ಅವಳು ಕೂಡ ತಂದೆಯ ಹತ್ತಿರವೇ ಹೋಗಿ ಇರಬೇಕೆಂದು ಒಮ್ಮಿಂದೊಮ್ಮೆಲೇ ತನ್ನ ನಿಶ್ಚಯವನ್ನು ಮಾಡಿದಳು.

ಲಗ್ನವಾದ ಮೇಲೆ ಈಗೆರಡು ವರ್ಷಗಳಿಂದ ಅವಳು ತವರುಮನೆಗೆ ಹೆಚ್ಚಾಗಿ ಬಂದಿರಲಿಲ್ಲ; ಬಂದಿದ್ದರೂ ಪ್ರತಿಸಲ ಮೂರು-ನಾಲ್ಕು ದಿನಗಳಿಗಿಂತ ಹೆಚ್ಚಾಗಿ ಎಂದೂ ಇದ್ದಿರಲಿಲ್ಲ. ಆದರೆ ಈಸಲ ಹೋಗುವಾಗ ಹಾಗಿರಲಿಲ್ಲ; ಹಿಂದಿನ ಆನಂದ ಅವಳಲ್ಲಿರಲಿಲ್ಲ; ತಂದೆಯವರಿಗೆ ತಾನು ಕೊನೆಯವರೆಗೂ ಅಲ್ಲಿಯೇ ಇರುವದಕ್ಕಾಗಿ ಬಂದಿರುವೆನೆಂಬ ವಿಷಯವನ್ನು ಅವಳು ಈಗಲೇ ತಿಳಿಸುತ್ತಿದ್ದಿಲ್ಲ ನಿಜ; ಆದರೆ ಅವಳು ಮನಸ್ಸಿನಲ್ಲಿ ಮಾತ್ರ ಈ ರೀತಿಯಾಗಿ ನಿಶ್ಚಯಿಸಿದ್ದಳು. ಒಂದಿಲ್ಲೊಂದು ದಿನವಾದರೂ ತಂದೆಯವರಿಗೆ ಈ ವಿಚಾರವನ್ನು ತಿಳಿಸಬೇಕಾಗುವದೆಂಬುದೂ ಅವಳಿಗೆ ಗೊತ್ತಿತ್ತು. ಹೊತ್ತು ಸಾಧಿಸಿ

ಯಾವುದನ್ನೂ ಮುಚ್ಚಿಡದೆ,—ಲಗ್ನವಾದ ಬಳಿಕ ತಮ್ಮಿರ್ವರಲ್ಲಿ ಮತಭೇದ ಹೇಗೆ ಕಂಡುಬರತೊಡಗಿತು, ದಿನದಿನಕ್ಕೆ ಅದು ಹೆಚ್ಚಾಗುತ್ತ ಈ ಕಮಿಶನ್ನದ ಪ್ರಶ್ನೆ ಬಂದಾಗ, ಕೊನೆಗೆ ಹೇಗೆ ಉಗ್ರರೂಪವನ್ನು ತಾಳಿತು, ಇದರಿಂದ ಇನ್ನುಮೇಲೆ ಇಬ್ಬರೂ ಒಂದೆಡೆಗೆ ಕೂಡಿ ಇರುವದು ಕೂಡ ಎಷ್ಟು ಕಠಿಣವಿದೆಯೆಂಬುದು ಹೇಗೆ ಇಬ್ಬರಿಗೂ ಅರಿವಾಯಿತು—ಇತ್ಯಾದಿ ವಿಷಯಗಳನ್ನೆಲ್ಲ ತಂದೆಯವರಿಗೆ ಹೇಳಿಬಿಡಬೇಕೆಂದು ಅವಳು ಮನಸ್ಸಿನಲ್ಲಿಯೇ ನಿಶ್ಚಯಿಸಿಬಿಟ್ಟಳು.

ಆದರೆ ಅದೆಲ್ಲ ಮುಂದಿನ ಮಾತು. ಸದ್ಯ ಅವಳು ಅತ್ಯಂತ ಆನಂದೋತ್ಸಾಹಗಳಿಂದ ಮೊದಲು ಬಾರಿ ತವರುಮನೆಗೆ ಹೋಗುವ ವಧುವಿನ ಪಾತ್ರವನ್ನು ವಹಿಸಬೇಕಾಗಿತ್ತು. ಕೊಲ್ಹಾಪುರ ನಿಲ್ದಾಣದಲ್ಲಿ ತಂದೆ ಇವಳನ್ನು ಕರೆದೊಯ್ಯಲು ಬರಬಹುದು; ಅವರೊಡನೆ ಛಬೂ ಮತ್ತು ಮಧು ಕೂಡ ಬರಬಹುದು. ( ನಿನ್ನೆ ಛಬಿಗಾಗಿ ಪಾವಡರಿನ ಬೆಳ್ಳಿಯ ಡಬ್ಬಿ ಮತ್ತು ಮಧುವಿಗಾಗಿ ಚಾಕ್ಲೇಟಿನ ಡಬ್ಬಿಯನ್ನು ಕೊಂಡು ತನ್ನ ಬ್ಯಾಗಿನಲ್ಲಿ ಹಾಕಿದ್ದಳಲ್ಲವೇ ? ) ಅವರೆಲ್ಲರೂ ತಿಳಿದುಕೊಂಡಿರಬೇಕು, ಅಕ್ಕ ಅತ್ಯಾನಂದದಿಂದ ತವರುಮನೆಗೆ ಬಂದಿದ್ದಾಳೆಂದು........ ಕೊಲ್ಹಾಪುರವು ಬರಲು ಇನ್ನೆಷ್ಟು ವೇಳೆ ಉಳಿಯಿತು ? ಮಿರ್ಜಿಯಲ್ಲಿ ಗಾಡಿ ಬದಲಾಯಿತೆಂದರೆ ಮುಂದೆ ಕೊಲ್ಹಾಪುರಕ್ಕೆ ಒಂದೂವರೆ ತಾಸು ಮಾತ್ರ ! ಈಗ ಬುಧಗಾಂವ ಬಂದಿತೆಂದರೆ ಮುಂದಿನದೇ ಮಿರಜ. ಅವಳು ಎರಡೂ ಕೈಗಳನ್ನು ಚಾಚಿ ಮೈ ಮುರಿದಳು. ಎದ್ದು ತನ್ನ ಹಾಸಿಗೆಯ ಸುರುಳಿಯನ್ನು ಕಟ್ಟಿಟ್ಟಳು.

* * * * *

ಕೊಲ್ಹಾಪುರಕ್ಕೆ ಬರುವ ಪ್ರವಾಸಿಗಳಿಗೆ ಕೊಲ್ಹಾಪುರಕ್ಕೆ ಮೊದಲಿನ ಇಪ್ಪತ್ತು—ಇಪ್ಪತ್ತೈದು ಮೈಲುಗಳ ಅಂತರವು ನಿಸರ್ಗ ಸೌಂದರ್ಯದಿಂದ ಅತ್ಯಂತ ರಮಣೀಯವಾಗಿ ತೋರುವದು. ಶ್ರಾವಣ ಭಾದ್ರಪದ ಮಾಸಗಳಲ್ಲಂತೂ ಅದಕ್ಕೊಂದು ಕಳೆ ಕಟ್ಟಿರುವದು. ನೋಡುವ ವ್ಯಕ್ತಿಯ ಜೀವನದಲ್ಲಿಯ ಘಟನೆಗಳಿಗೂ ಈ ಸ್ಥಳಕ್ಕೂ ಏನಾದರೂ ಸಂಬಂಧವಿದ್ದರೆ ಆ

ಸ್ಥಳದ ಸೌಂದರ್ಯ ನಿಜಕ್ಕೂ ಆಹ್ಲಾದದಾಯಕವಾಗಿರುತ್ತದೆ. ಅದಕ್ಕೆಂದೇ ಜಯಸಿಂಗಪುರ ದಾಟಿದ ಬಳಿಕ ಕಿಟಿಕಿಯಿಂದ ದೃಷ್ಟಿಯನ್ನು ಹೊರಚೆಲ್ಲಿ, ಅದೆಷ್ಟೋ ಹೊತ್ತು ಅವಳು ಹಾಗೇ ನೋಡುತ್ತ ಕುಳಿತಿದ್ದಳು. ಈಗ ಒಂದೂವರೆ ವರ್ಷದ ಹಿಂದೆ— ಅವಳ ಲಗ್ನಕ್ಕಿಂತ ಮೊದಲು—ನಡೆದ ಘಟನೆ ಗಳು ಒಂದೊಂದಾಗಿ ಅವಳ ಕಣ್ಮುಂದೆ ಹಾದು ಹೋಗತೊಡಗಿದವು. ಇದ ರಿಂದ ಮುಂಬಯಿಯನ್ನು ಬಿಡುವಾಗ ಇದ್ದ, ಅವಳ ಮನಃಸ್ಥಿತಿಯ ಮೇಲೆ ಕೆಲಕ್ಷಣಗಳ ವರೆಗಾದರೂ ಮರೆವಿನ ಮುಸುಕು ಬಿದ್ದಿತು.

ಅವಳ ತಂದೆಯ ಮಿತ್ರರೊಬ್ಬರು ಕ್ಷಯರೋಗದ ಉಪಚಾರಕ್ಕಾಗಿ ಬಡೋದೆಯಿಂದ ಇಲ್ಲಿಗೆ ಬಂದು, ಒಳ್ಳೇ ಹವೆಯೆಂದು ಜಯಸಿಂಗಪುರ ದಲ್ಲಿಯೇ ಮನೆ ಮಾಡಿದ್ದರು. ಆಗ ತನ್ನ ತಂದೆಯವರೊಡನೆ ಅದೆಷ್ಟೋ ಬಾರಿ ಅವಳು ಜಯಸಿಂಗಪುರಕ್ಕೆ ಬಂದಿದ್ದಳು. ಅವರ ಮನೆಗೆ ಬಂದರೆ ತಿನ್ನಲು ಅವಳಿಗೆ ದ್ರಾಕ್ಷೆ ಕಿತ್ತಳೆಗಳು ಬೇಕಾದಷ್ಟು! ಅದರಿಂದ ಅವರ ಮನೆಗೆ ಬರಲು ಅವಳಿಗೆ ಅತ್ಯಂತ ಉತ್ಸಾಹ; ಅವರ ಮನೆಯಲ್ಲಿ ಗುಜರಾಥೀ ಭಾಷೆಯನ್ನು ಬಲ್ಲ ನಾಲ್ಕು ಜನ ಸೇವಕರಿದ್ದರು. ಅವರಲ್ಲಿ ಒಬ್ಬನು ದಿನಾಲು ತನಗೆ ಹತ್ತು ಹೊಸ ಗುಜರಾಥೀ ಶಬ್ದಗಳನ್ನು ಕಲಿಸಬೇಕೆಂದೂ ಅದಕ್ಕೆ ಪ್ರತಿಯಾಗಿ ತಾನು ಅವನಿಗೆ ದಿನಾಲು ಹತ್ತು ಹೊಸ ಮರಾಠೀ ಶಬ್ದಗಳನ್ನು ಕಲಿಸುವದಾಗಿಯೂ ಗೊತ್ತು ಮಾಡಿಕೊಂಡಿದ್ದಳು. ಹೀಗೆ ಕಲಿತ ಗುಜ ರಾಥೀ ಶಬ್ದಗಳು ಈಗ ಅವಳಿಗೆ ನೆನಪಿರಲಿಲ್ಲ. ಆದರೆ ಕಲಿಸುತ್ತಿದ್ದ ಆ ಸೇವಕನ ನೆನಪು ಮಾತ್ರ ಅವಳಿಗೆ ಪೂರ್ಣವಾಗಿತ್ತು; ಬಡೋದೆಯ ಮಹಾ ರಾಜ ಸಯಾಜೀರಾವ ಗಾಯಕವಾಡ ಅವರ ಬಗ್ಗೆ ಅವನು ಅದೆಷ್ಟೋ ಸಂಗತಿಗಳನ್ನು ಅವಳಿಗೆ ಹೇಳುತ್ತಿದ್ದನು. ಅವನ್ನು ಕೇಳಿ 'ಇವನು ಬಡೋದೆಯಲ್ಲಿ ಯಾವನೊಬ್ಬ ಮುಖ್ಯ ಅಧಿಕಾರಿಯಿರಬಹುದೇನೋ ಎಂದು ಅವಳ ಎಳೆಮನಸ್ಸಿಗೆ ಅನಿಸುತ್ತಿತ್ತು. ಒಂದೊಂದು ದಿನ ಸಂಜೆಯ ಮುಂದೆ ಅವಳನ್ನು ಹೆಗಲ ಮೇಲೆ ಕೂಡಿಸಿಕೊಂಡು ಅವನು ರೇಲ್ವೆ ಪ್ಲಾಟ ಫಾರ್ಮಿನವರೆಗೂ ಹೋಗಿಬರುತ್ತಿದ್ದ; ಎರಡು ಗಾಡಿಗಳನ್ನಾದರೂ ನೋಡದೆ ಹೋಗುವಂತಿಲ್ಲ ಎಂಬ ಅವಳ ಹಟವನ್ನೂ ಪೂರೈಸುತ್ತಿದ್ದ………… ಹಾತ ಕಣಂಗಲೆಯ ನಿಲ್ದಾಣದಿಂದ ಒಂದು-ಒಂದೂವರೆ ಮೈಲುಗಳ ಅಂತರದಲ್ಲಿ

ಯಾರದೋ ಒಂದು ಸುಂದರವಾದ ತೋಟವಿತ್ತು; ತಂದೆಯವರೊಡನೆ ಅದೆಷ್ಟೋ ಸಲ ಅವಳು ಅಲ್ಲಿಗೆ ಬಂದಿದ್ದಳು. ಆ ತೋಟದ ಗೃಹಸ್ಥರು ಮತ್ತು ಅವಳ ತಂದೆ ಕಬ್ಬಿನ ಬೆಳೆಯನ್ನು ಕುರಿತು ಗಂಟೆ ಗಂಟೆಗಳ ಕಾಲ ಮಾತನಾಡುತ್ತಿದ್ದರು. ಅದನ್ನು ಕೇಳುತ್ತಿದ್ದ ಅವಳಿಗೆ ಕಬ್ಬಿನ ಬೆಳೆಯನ್ನು ತೆಗೆಯುವದು ಇಷ್ಟೊಂದು ಕಠಿಣವೇ ? ಅನಿಸುತ್ತಿತ್ತು. ಆ ಕಾಲದಲ್ಲಿ ಕೊಲ್ಹಾಪುರದ ಅಕ್ಕಪಕ್ಕದಲ್ಲಿ ಕಬ್ಬಿನ ಬೆಳೆ ಹೆಚ್ಚಾಗಿರಲಿಲ್ಲ; ಆದರೆ ತಂದೆ ಯವರ ಆ ಮಿತ್ರರು ಮಾತ್ರ ಇದರ ಬಗ್ಗೆ ಹೊಸ ಹೊಸ ಪ್ರಯೋಗಗಳನ್ನು ನಡೆಸಿದ್ದರು. ಕಬ್ಬಿನ ಬೆಳೆಯನ್ನು ಕುರಿತ ಶಾಸ್ತ್ರೀಯ ಚರ್ಚೆಯಲ್ಲಿ ಅವಳಿಗೆ ಸ್ವಾರಸ್ಯವೆನಿಸುತ್ತಿರಲಿಲ್ಲ ನಿಜ; ಆದರೆ ಆಲೀಮನೆಯಲ್ಲಿ ನಡೆಯುವ ವಿಧಾನ ಗಳನ್ನೆಲ್ಲ ನೋಡಲು ಅವಳ ಮನಸ್ಸು ತವಕಪಡುತ್ತಿತ್ತು; ಕಬ್ಬು, ಹೊಸ ಬೆಲ್ಲ, ನೆಲಗಡಲೆಗಳೆಂದರೆ ಕುಣಿದಾಡುತ್ತಿದ್ದಳು............ ಮತ್ತೆ ಮೊದಲು ಈಸಲು ಕಲಿತದ್ದೂ ಆ ತೋಟದ ಬಾವಿಯಲ್ಲಿಯೇ. ಮತ್ತು ಈ ಕಾರಣ ದಿಂದಲೇ ಪದ್ಮಾಕರನೊಡನೆ ಅವಳ ಪರಿಚಯುವಾದದ್ದು. ಆ ಸಮಯದಲ್ಲಿ ಅವಳು ಇಂಗ್ಲಿಷ ಐದನೆಯ ಇಯತ್ತೆಯಲ್ಲಿ ಓದುತ್ತಿದ್ದಳು........ ಒಕ್ಕಲಿಗರ ಮಕ್ಕಳು ಬಾವಿಯಲ್ಲಿ ಈಜುವದನ್ನು ನೋಡುತ್ತ ದಂಡೆಯ ಮೇಲೆ ಹಾಗೆಯೇ ಕುಳಿತಿರುತ್ತಿದ್ದಳು. ತೂಕ ತಪ್ಪದಂತೆ ಎಚ್ಚರವನ್ನು ವಹಿಸಿ, ಅಂಜಂಜುತ್ತ ನಡುನಡುವೆ ಬಾವಿಯಲ್ಲಿ ಬಗ್ಗಿ ನೋಡುತ್ತಿದ್ದಳು ಅಷ್ಟರಲ್ಲಿ ಯಾರೋ ಅವಳನ್ನು ಕೇಳಿದರು " ಈಜಲಿಕ್ಕೆ ಬರುವದಿಲ್ಲವೇ ? " ಅವಳು ನಾಚಿಕೆ ಯಿಂದ ಮುಖವನ್ನು ತಗ್ಗಿಸಿ, ಆ ತರುಣನ ಕಡೆ ನಗುನಗುತ್ತ ನೋಡಿ ದ್ದಳು. " ಕಲಿಸಿದರೆ ಕಲಿಯುವ ಇಚ್ಛೆಯಿದೆಯೆ ? " ಅವನು ಮತ್ತೆ ಕೇಳಿ ದ್ದನು. ಅವಳೂ ಉತ್ತರ ಕೊಟ್ಟಿದ್ದಳು " ತಂದೆಯವರು ಒಪ್ಪಿಗೆ ಕೊಟ್ಟರೆ ............ " ಮತ್ತೆ ಆ ದಿನದಿಂದ ಈಜು ಕಲಿಯುವ ಅವಳ ಕಾರ್ಯಕ್ರಮ ಪ್ರಾರಂಭವಾಗಿತ್ತು.

ಆ ಬಾವಿ ಇದ್ದುದು ರೇಲ್ವೆ ಹಳಿಗೆ ಸಮೀಪದಲ್ಲಿಯೇ. ಎಂಟು ವರ್ಷ ಗಳ ಹಿಂದಿನ ಘಟನೆಗಳನ್ನೆಲ್ಲ ನೆನೆಯುತ್ತ ಅವಳು ಆ ಬಾವಿಯ ಕಡೆಗೆ ದೃಷ್ಟಿ ಯನ್ನು ಚೆಲ್ಲಿದಳು. ಅದರ ಸೌಂದರ್ಯವೆಲ್ಲ ಮೊದಲಿದ್ದಂತೆಯೇ ಇತ್ತು. ಆ ವಿಶಾಲವಾದ ಗಿಡಗಳ ನೆರಳು, ಎಳೆಯಲ್ಪಡುತ್ತಿದ್ದ ಕಪ್ಪಲಿ, ಅದನ್ನು

ಎಳೆಯುವ ಎತ್ತುಗಳು, ಬಾವಿಗೆ ಹೊಂದಿಕೊಂಡಿದ್ದ ಆ ಗುಡಿಸಲು, ಅದರ ಮುಂದೆ ಕಟ್ಟಿದ ಕುರಿ, ನಾಯಿ, ಕೋಳಿ !........ ಎಲ್ಲವೂ ಅವಳು ಹಿಂದೆ ನೋಡಿದಂತೆಯೇ ಇದ್ದವು. ಮನುಷ್ಯರು ವ್ಯತ್ಯಾಸ ಹೊಂದುತ್ತಾರೆ, ಸುಖ ದುಃಖಗಳ ಗಾಲಿಗಳಲ್ಲಿ ಸಿಕ್ಕು ಎಲ್ಲೆಲ್ಲೋ ಹೋಗುತ್ತಾರೆ, ಮತ್ತೆ ಬರುತ್ತಾರೆ. ಅವರು ಸುಖಿಗಳೂ ಆಗಬಹುದು, ದುಃಖಿಗಳೂ ಆಗಬಹುದು. ಆದರೆ ನಿಸರ್ಗ ಸೌಂದರ್ಯದಿಂದ ಕೂಡಿದ ಸ್ಥಳ ಮಾತ್ರ ಕೊಂಚವೂ ವ್ಯತ್ಯಾಸ ಹೊಂದದೆ ಇದ್ದಂತೆಯೇ ಇರುತ್ತದಲ್ಲ !

ಈ ವಿಚಾರದಿಂದ ಅವಳಿಗೆ ಅಷ್ಟೊಂದು ಸುಖವೆನಿಸಲಿಲ್ಲ; ಇದುವರೆಗೆ ಕಿಟಕಿಯ ಹೊರಗಿದ್ದ ಅವಳ ದೃಷ್ಟಿ ಮತ್ತೆ ಒಳಗೆ ಹೊರಳಿತು. ಅವಳಿಗೆ ಎದುರಾಗಿ, ಬಾಕಿನ ಮೇಲೆ ಒಬ್ಬ ಸಾಹೇಬನು ಒಂದು ಪುಸ್ತಕವನ್ನು ಓದುತ್ತ ಕುಳಿತಿದ್ದ. ಅವನನ್ನು ಕಂಡು ಅವಳಿಗೆ ಆಶ್ಚರ್ಯವಾಯಿತು. ಗಾಡಿಯನ್ನು ಬದಲು ಮಾಡಿ ಮಿರ್ಜಿಯಲ್ಲಿ ಹತ್ತಿದಾಗ ಆ ಡಬ್ಬಿಯಲ್ಲಿ ಅವಳನ್ನು ಬಿಟ್ಟು ಬೇರಾರೂ ಇರಲಿಲ್ಲ. ಹಾಗಾದರೆ ಜಯಸಿಂಗಪುರದಲ್ಲಾಗಲಿ ಅಥವಾ ಹಾತಕಣಂಗಲೆಯಲ್ಲಾಗಲಿ ಅವನು ಹತ್ತಿರಬೇಕು. ಅವನೆಡೆಗೆ ಸೂಕ್ಷ್ಮದೃಷ್ಟಿಯಿಂದ ಅವಳು ನೋಡಿದಳು; ಅವನ ಕೈಲಿದ್ದ ಮರಾಠೀ ಪುಸ್ತಕವನ್ನು ನೋಡಿಯಂತೂ ಅವಳಿಗೆ ಬಹಳ ಆಶ್ಚರ್ಯವಾಯಿತು. ಕೊಲ್ಹಾಪುರದಲ್ಲಿ ಮಿಶನರಿಗಳ ಶಾಲೆಯಲ್ಲಿ ಅವನೊಬ್ಬ ಶಿಕ್ಷಕನಾಗಿರಬೇಕೆಂದು ಅವಳು ಊಹಿಸಿದಳು. ನಿಸರ್ಗ ಸೌಂದರ್ಯವನ್ನು ನೋಡುವದಕ್ಕಾಗಿ ಮತ್ತೆ ತನ್ನ ದೃಷ್ಟಿಯನ್ನು ಹೊರಳಿಸಿ ಹೊರಗೆ ನೋಡಬೇಕೆನ್ನುವಷ್ಟರಲ್ಲಿಯೇ ಆ ಪುಸ್ತಕವನ್ನು ಅವಳೆದುರಿಗೆ ಇಟ್ಟು ಅವನು ಇಂಗ್ಲಿಷಿನಲ್ಲಿ ಹೇಳಿದನು,—

" ಈ ಪುಸ್ತಕದ ಹೆಸರಿನ ಅರ್ಥವೇನೆಂಬುದನ್ನು ಇಂಗ್ಲೀಷಿನಲ್ಲಿ ಹೇಳಬಹುದೇ ?........ ನಿಮ್ಮ ಗುರುತು ಕೂಡ ಇಲ್ಲದಾಗ ಸುಮ್ಮನೆ ತೊಂದರೆ ಕೊಟ್ಟದ್ದಕ್ಕೆ ಕ್ಷಮಿಸಿ. "

" ತೊಂದರೆ ಎಲ್ಲಿಯದು ? " ಅವಳೂ ಇಂಗ್ಲೀಷಿನಲ್ಲಿಯೇ ಹೇಳಿ, ಪುಸ್ತಕದ ಹೆಸರನ್ನು ನೋಡಲು ಅದನ್ನು ಕೈಗೆ ತೆಗೆದುಕೊಂಡಳು.

" ಗಡ ಆಲಾ ಪಣ ಸಿಂಹ ಗೇಲಾ " ( ಕೋಟೆ ವಶವಾಯಿತು ಆದರೆ ಸಿಂಹ ಕೈಬಿಟ್ಟಿತು )

ಅವಳು ತನ್ನಷ್ಟಕ್ಕೆ ತಾನೇ ನಕ್ಕಳು. ಹರಿ ಭಾವೂ ಆಪಟೆಯವರ ಆ ಕಾದಂಬರಿಯ ಹೆಸರನ್ನು ಒಬ್ಬ ಇಂಗ್ಲಿಷ ಮನುಷ್ಯನಿಗೆ ಹೇಗೆ ತಿಳಿಸಿ ಹೇಳಬೇಕು? ಅದೆಷ್ಟು ಕಠಿಣ ಎಂಬುದನ್ನು ಅವಳು ಆ ಗೃಹಸ್ಥನಿಗೂ ತಿಳಿಸಿ ಹೇಳಿದಳು. ಬಳಿಕ "ಸಾಧ್ಯವಿದ್ದಷ್ಟು ಹೇಳುವೆ" ಯೆಂದು ಅದನ್ನು ಇಂಗ್ಲೀಷಿನಲ್ಲಿ ವಿವರಿಸಿ ಹೇಳಿದಳು.

ಅವನು ಅವಳ ಉಪಕಾರವನ್ನು ನೆನೆದು, ಆ ಪುಸ್ತಕವನ್ನು ತನ್ನ ತೊಗಲಿನ ಚೀಲದಲ್ಲಿ ಹಾಗೇ ಮುಚ್ಚಿಟ್ಟುಬಿಟ್ಟನು. "ನೀವು ಅದೆಷ್ಟೋ ಹೊತ್ತಿನಿಂದ ಹೊರಗಿನ ಸೃಷ್ಟಿಸೌಂದರ್ಯವನ್ನು ನೋಡುತ್ತಲೇ ಇದ್ದೀರಿ. ಅದನ್ನು ನೋಡಿದರೆ ನೀವು ಕೊಲ್ಹಾಪುರಕ್ಕೆ ಬಂದಿದ್ದು ಇದೇ ಮೊದಲನೆಯ ಸಲವೆಂದು ನನಗೆನಿಸುತ್ತದೆ;........ ನನ್ನ ತರ್ಕ ಸರಿಯುಲ್ಲವೇ?" ಅವನು ನಸುನಗುತ್ತ ಅವಳನ್ನು ಕೇಳಿದನು.

ಅವಳೂ ನಗುತ್ತ ಬೇಕೆಂದೇ ಹೇಳಿದಳು "ಹೌದು."

ಅವನು ಮುಂದುವರಿದ, "ಈ ಪ್ರಾಂತದ ಮೇಲೆ ನಿಸರ್ಗದ ಕೃಪೆ ಬಹಳ. ಆದರೆ ಅದರ ಲಾಭವನ್ನು ಮಾತ್ರ ಯಾರೂ ತೆಗೆದುಕೊಳ್ಳುವದಿಲ್ಲ. ನಿಸರ್ಗದ ಲಾಭ ಎಷ್ಟಿದ್ದರೂ ಕೂಡ ಮನುಷ್ಯನ ಅಜ್ಞಾನ ಮತ್ತು ಆಲಸ್ಯಗಳಿಂದ ಪಟ್ಟಣಗಳ ಅಂದವೆಲ್ಲ ಕೆಟ್ಟುಹೋಗುವದು ಅನ್ನುವದಕ್ಕೆ ಈ ಪಟ್ಟಣವೇ ಉದಾಹರಣೆಯಾಗಿದೆ. ಮುಖ್ಯ ಪಟ್ಟಣವನ್ನೂ ಅದರ ಸುತ್ತುಮುತ್ತಲಿನ ಭಾಗವನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿದರೆ ಈ ಮಾತು ಇನ್ನೂ ಸ್ಪಷ್ಟವಾಗುವದು. ಈ ಕೊಲ್ಹಾಪುರದಲ್ಲಿದ್ದಂತೆ ನಿಸರ್ಗದ ಸೌಂದರ್ಯ, ನಮ್ಮಲ್ಲಿದ್ದರೆ,:ನಮ್ಮ ಜನರು ಅದರ ನಂದನವನವನ್ನೇ ಮಾಡಿಬಿಡುತ್ತಿದ್ದರು."

ಮಾತಾಡುತ್ತಲೇ ಅವನು ತನ್ನ ಎಡಗೈಗೆ ಹೊದಿಸಿದ ಚೀಲವನ್ನು ತಿರುಗಿಸಿ ಅತ್ತಿತ್ತ ನೋಡಿದನು. ಹಾಗೆ ನೋಡಿದ್ದರಿಂದ ಅವನ ವಿಚಾರದ ದಿಕ್ಕೇ ಬದಲಾಯಿತೇನೋ ಅನ್ನುವಂತೆ ಅವನು ಮತ್ತೊಂದು ವಿಚಾರದೆಡೆಗೆ ಹೊರಳಿದನು.

"ಹಾಂ.... ಅದೇನೇ ಇರಲಿ. ಈಗ ಹತ್ತು ವರ್ಷಗಳ ಹಿಂದೆ ನೀವು ಕೊಲ್ಹಾಪುರವನ್ನು ನೋಡಿದ್ದರೆ, ಅದು ನಿಮಗೆ ಶೀರ ಹಳ್ಳಿಯಂತೆಯೇ ಕಾಣುತ್ತಿತ್ತು."

ಅವಳು ತನ್ನ ಪಾತ್ರವನ್ನು ಯಶಸ್ವಿಯಾಗಿ ನಟಿಸುತ್ತ, ಮುಖದ ಮೇಲೆ ಆಶ್ಚರ್ಯವನ್ನು ವ್ಯಕ್ತಗೊಳಿಸುತ್ತ ಕೇಳಿದಳು, "ಹೀಗೇನು? ಕೊಲ್ಹಾಪುರದಲ್ಲಿ ಸುಧಾರಣೆ ಆಗಹತ್ತಿದೆ ಹಾಗಾದರೆ!"

ತನ್ನ ನೀಲೀ ಕಣ್ಣುಗಳನ್ನು ಕೊಂಚ ಸಂಕುಚಿತಗೊಳಿಸಿ, ನಗುತ್ತ ಮತ್ತೆ ಹೇಳತೊಡಗಿದ, "ಸುಧಾರಣೆ........ಅ—ಸುಧಾರಣೆ ಆಗುತ್ತದೋ ಇಲ್ಲವೋ ಗೊತ್ತಿಲ್ಲ; ಆದರೆ ವ್ಯತ್ಯಾಸ ಮಾತ್ರ ಆಗುತ್ತಿದೆ."

ಅವನ ಮಾತು ಅವಳ ಮನಸ್ಸಿಗೆ ತಾಕಿತು; ಅವಳೂ ನಕ್ಕಳು.

ಅಷ್ಟರಲ್ಲಿಯೇ ಗಾಡಿ ನಿಲ್ಲುವ ಸೂಚನೆ ಕಂಡುಬಂದಿತು. ಆ ಗೃಹಸ್ಥನು ತನ್ನ ಚರ್ಮದ ಚೀಲದ ಮುಚ್ಚಳವನ್ನು ಗಟ್ಟಿಯಾಗಿ ಕೂಡಿಸುತ್ತಲೇ ಹೇಳಿದನು "ನಾವು ಕೊಲ್ಹಾಪುರಕ್ಕೆ ಬಂದೆವೆಂದು ಕಾಣುತ್ತದೆ;........ ಆ ಪುಸ್ತಕದ ಹೆಸರಿನ ಅರ್ಥವನ್ನು ಹೇಳಿದ್ದಕ್ಕಾಗಿ ನಾನು ನಿಮಗೆ ಕೃತಜ್ಞತೆಯನ್ನು ಸೂಚಿಸುತ್ತೇನೆ........ ಇದೇ ತಿಂಗಳಲ್ಲಿ ನಾನು ಮರಾಠೀ ಪರೀಕ್ಷೆಗೆ ಕೂಡಬೇಕಾಗಿದೆ."

"ಹೀಗೋ! ಹಾಗಾದರೆ ನಿಮಗೆ ಪರೀಕ್ಷೆಯಲ್ಲಿ ಒಳ್ಳೆಯ ಯಶಸ್ಸು ದೊರೆಯಲಿ!" ಅವನೆಡೆಗೆ ನೋಡಿ ನಗುನಗುತ್ತ ಅವಳು ಹೇಳಿದಳು. ಅವಳೂ ತನ್ನ ಸಾಮಾನುಗಳನ್ನೆಲ್ಲ ಸರಿಯಾಗಿ ಜೋಡಿಸಿಟ್ಟಳು. ಬಳಿಕ ಹೊರಗೆ ಹಣಿಕಿ ಹಾಕಿ ನೋಡಿದರೆ ಟೇಂಬಿಲಾಯಿ ಗುಡ್ಡವೇ ಅವಳ ಕಣ್ಣಿಗೆ ಬಿತ್ತು. ಆದರ ಸುತ್ತಲೂ ಬೆಂಗಳೂರ ಹಂಚಿನ ಮೇಲುಹೊದಿಕೆಯ ಚಿಕ್ಕ ಪುಟ್ಟ ಮನೆಗಳೆಷ್ಟೋ ಅವಳ ಕಣ್ಣಿಗೆ ಬಿದ್ದವು. ಕೆಳಗಿನ ಮೈದಾನದಲ್ಲಿ ಸೈನಿಕರ 'ಕವಾಯಿತು' ನಡೆದಿತ್ತು. ಹಾಂ.... ನಿಜವಾಗಿಯೂ ಕೊಲ್ಹಾಪುರದಲ್ಲಿ ವ್ಯತ್ಯಾಸವಾಗುತ್ತ ನಡೆದಿತ್ತು........ ಮುಂದೆ ರೇಲ್ವೆ ಗಾಡಿ ಹೋಗುವದಿದ್ದುದರಿಂದ ರಸ್ತೆಯ ಮೇಲಿನ ಗೇಟನ್ನು ಇಕ್ಕಲಾಗಿತ್ತು. ಬೆಳಗಾವಿಯ ಕಡೆಗೆ ಹೋಗುವ ಹತ್ತು–ಹದಿನೈದು ಟ್ರಕ್ಕುಗಳು ಅದು ತೆರೆಯುವ ದಾರಿಯನ್ನೇ ನೋಡುತ್ತ ರಸ್ತೆಯ ಮೇಲೆ ಒಂದರ ಹಿಂದೊಂದು ನಿಂತಿದ್ದವು! ಅವೆಲ್ಲ ಸೈನ್ಯದ ಟ್ರಕ್ಕುಗಳು! ಮುಂದೆ ನೋಡಿದರೆ ಒಳ್ಳೊಳ್ಳೇ ಬಂಗಲೆಗಳ ಗುಂಪಿಗೆ ಗುಂಪೇ ಕಾಣಿಸುತ್ತಿತ್ತು. ಕಟ್ಟುವ ಕೆಲಸ ಇನ್ನೂ ನಡೆದೇ ಇತ್ತು. ಒಂದೂವರೆ ವರ್ಷದ ಹಿಂದೆ ಬಂಗಲೆಗಳು ಇಷ್ಟೊಂದು ಸಂಖ್ಯೆಯಲ್ಲಿ ಅಲ್ಲಿ ಇರಲಿಲ್ಲ.

ಹಾಂ, ಕೊಲ್ಹಾಪುರದಲ್ಲಿ ವ್ಯತ್ಯಾಸ ಬೇಗ ಬೇಗ ಆಗುತ್ತ ನಡೆದಿತ್ತು. ನಿಜ!

ಕೊಲ್ಹಾಪುರದಲ್ಲಿ ಎಷ್ಟು ವ್ಯತ್ಯಾಸವಾದರೇನು? ಅದು ಅವಳಿಗೆ ಪ್ರಿಯವಾಗಿಯೇ ಇತ್ತು. ಇಲ್ಲಿ ಅವಳ ದುಃಖದ ನೆನಪುಗಳೆಲ್ಲ ಹೇಳಹೆಸರಿಲ್ಲದಂತೆ ಮಾಯವಾಗುತ್ತಿದ್ದವು. ತಂದೆಯ ವಾತ್ಸಲ್ಯದಲ್ಲಿ, ಅಣ್ಣತಮ್ಮಂದಿರ ಸಹವಾಸದಲ್ಲಿ ಅವಳಿಗೆ ಅದೆಂತಹ ಸುಖವೆನಿಸುತ್ತಿತ್ತು! ಅದಕ್ಕಾಗಿ ಅವಳಲ್ಲಿ ಔತ್ಸುಕ್ಯ ತುಂಬಿ ತುಳುಕುತ್ತಿತ್ತು.

ಗಾಡಿ ನಿಲ್ದಾಣದಲ್ಲಿ ಬಂದು ಸೇರಿತು. ಅವಳು ಕೊಂಚ ಅಧೈರ್ಯದಿಂದಲೇ ಹೊರಗೆ ತಲೆಯಿಕ್ಕಿ ನೋಡಿದಳು, ಅವಳ ತಂದೆ ಬಂದಿದ್ದರು! ಅವರ ಜೊತೆಗೆ ಛಬೂ, ಮಧು ಕೂಡ! ಅವಳು ಕೈಯೆತ್ತಿ ಕೂಗಿದಳು " ಛಬೂ, ಏ ಛಬೂ, ಇಲ್ಲಿ ನೋಡು."

ಅವಳು ಒಮ್ಮೆಲೇ ಜಿಗಿದು ಬಿಡಲಿಲ್ಲ, ಅದೇ ಆಶ್ಚರ್ಯ.

## ೨

ಶಕುಂತಲೆಯ ಮನಸ್ಸಿನಲ್ಲಿ ಕೊಲ್ಹಾಪುರದ ಬಗ್ಗೆ ಇದ್ದ ಹಳೆಯ ನೆನಪುಗಳಲ್ಲಿ, ಎರಡು ಮುಖ್ಯವಾಗಿದ್ದವು.

ಅದರಲ್ಲಿ ಮೊದಲನೆಯದೆಂದರೆ ಅವಳು ಕೊಲ್ಹಾಪುರಕ್ಕೆ ಬಂದ ದಿನ, ಮುಂಜಾವಿನಿಂದ ಹತ್ತಿದ ಮಳೆ ಸಂಜೆಯ ವರೆಗೂ ಬೀಳುತ್ತಲೇ ಇತ್ತು; ಇಳಿದುಕೊಂಡಿದ್ದ ಮನೆಯ ಅಟ್ಟದ ಮೇಲೆ ಹತ್ತಿ ನಿಂತು, ಆ ಮಳೆಯ ಕಡೆಗೆ ನೋಡುವದರಲ್ಲಿಯೇ ಇಡೀ ದಿನವನ್ನು ಕಳೆದಿದ್ದಳು. ಹಾಗೆ ನೋಡುವಾಗ ಮುಂಬಯಿಯ ಮಳೆಯಲ್ಲಿಯೂ, ಇಲ್ಲಿಯ ಮಳೆಯಲ್ಲಿಯೂ ಇರುವ ಅಂತರವನ್ನು ಅವಳ ಮನಸ್ಸು ಗುಣಿಸುತ್ತಲೇ ಇತ್ತು! ಅಲ್ಲಿಯ ಹಾಗೆ ಇಬ್ಬದಿಗೂ ಕೆಸರನ್ನು ಸಿಡಿಸುತ್ತ ಹೋಗುವ ಮೋಟಾರುಗಳ ಗದ್ದಲ ಇದ್ದಿಲ್ಲ, ರೇನಕೋಟ ಹಾಕಿದ ಜನರಿಲ್ಲ, ಚಳಿಯಲ್ಲಿ ನಡುಗುತ್ತಿದ್ದರೂ ತಮ್ಮ ಕೆಲಸಕ್ಕಾಗಿ ಕಾದಿರುವ ಹಳದೀ ರುಮಾಲದ ಸಿಪಾಯರಿಲ್ಲ! ಇಲ್ಲಿ ರಹದಾರಿಗಳನ್ನು ಬಿಟ್ಟು, ಜನರೇ ಕಾಣಿಸದ ಚಿಕ್ಕ ರಸ್ತೆಗಳಲ್ಲಿ ಮಾತ್ರ ಮಳೆಯ ಆಟ! ಬಹಳಾದರೆ ಏರು ತಗ್ಗುಗಳಲ್ಲಿ ಹೊಯ್ದಾಡುತ್ತ ರಸ್ತೆಯ ಮಧ್ಯದಲ್ಲಿ ಟಾಂಗಾ ಒಂದು ಹೋಗಬಹುದು! ತಲೆಯ ಮೇಲೆ ಪಾಟೀ ಚೀಲಗಳನ್ನಿಟ್ಟುಕೊಂಡು, ತಗ್ಗಿನಲ್ಲಿ ಕೂಡಿದ ನೀರಿನಲ್ಲಿ ಕುಣಿಕುಣಿದು ಬೇಕೆಂದೇ ಬಟ್ಟೆಗಳನ್ನು ತೋಯಿಸಿಕೊಳ್ಳುವ ಸಣ್ಣ ಹುಡುಗರ ತಂಡವೇ ರಸ್ತೆಯ ಮೇಲೆ

ಕಾಣಬಹುದು. ಅಂತೂ ಒಟ್ಟಿನಲ್ಲಿ ಮುಂಬಯಿಯ ಮಳೆಯಲ್ಲಿದ್ದ ಸ್ವಾರಸ್ಯ ಈ ಮಳೆಯಲ್ಲಿಲ್ಲ ಎಂದು ಅವಳು ತಿಳಿದುಬಿಟ್ಟಳು.

ಅವಳ ಹಳೆಯ ನೆನಪುಗಳಲ್ಲಿ ಎರಡನೆಯದೆಂದರೆ ಆ ಮಳೆ ಹೊರ ಪಾದ ಮೇಲೆ ಮೂರನೆಯ ದಿವಸದ್ದು. ಅಂದು ಸಂಜೆ ಅವಳು ಹಾಗೆಯೇ ಗ್ಯಾಲರಿಯಲ್ಲಿ ನಿಂತಾಗ, ಬಲಗಡೆಯಿಂದ ಬಜಂತ್ರಿಯ ಸಪ್ಪಳವು ಕೇಳ ಬಂತು. ಮುಂಬಯಿಯಲ್ಲಿದ್ದಾಗ ಪ್ರಭು ಜನರ ಲಗ್ನದ ಮೆರವಣಿಗೆಗಳಲ್ಲಿ ಅವಳು ಸನಾಯಿ ವಾದ್ಯವನ್ನು ಊದುವದನ್ನು ಕೇಳಿದ್ದಳು. ಆದರೆ ಇಂದು ಕೇಳಿದ ಸಪ್ಪಳ 'ಸನಾಯಿ' ಯದೇ ಆಗಿದ್ದರೂ ಅದಕ್ಕಿಂತ ಬೇರೆಯಾಗಿತ್ತು. ಅವಳು ಮತ್ತೆ ಲಕ್ಷ್ಯಪೂರ್ವಕವಾಗಿ ಕೇಳಿದಳು. ಸನಾಯಿಯೊಂದಿಗೆ ನಗಾರಿಯ ಸಪ್ಪಳವೂ ಕೇಳಬಂದಿತು. ಅವಳು ಗ್ಯಾಲರಿಯ ಸಳಿಗಳನ್ನು ಹಿಡಿದು ಕೊಂಡು ಕಾಲು ಮೇಲೆತ್ತರಿಸಿ ಬಗ್ಗಿ ನೋಡಿದಳು. ಆನೆ, ಒಂಟೆಗಳೆಲ್ಲ ಅವಳಿದ್ದ ದಿಕ್ಕಿನಲ್ಲಿಯೇ ಬರುತ್ತಿದ್ದವು. ಯಾವದಾದರೂ ಸರ್ಕಸ್ಸಿನ ಜಾಹೀರಾತಿರಬೇಕೆಂದು ಅವಳೆಣಿಸಿದಳು. ಎದುರಿಗೇ ಅಲಂಕೃತವಾದ ಎರಡು ಆನೆಗಳು, ನಾಲ್ಕು ಒಂಟೆಗಳು, ಕುದುರೆಗಳು ಎಲ್ಲವೂ ಒಂದರ ಹಿಂದೊಂದು ಹೋದವು. ಆದರೆ ಜಾಹೀರಾತೆನಿಸುವ ಯಾವ ಚಿಹ್ನವೂ ಕಂಡುಬರಲಿಲ್ಲ. ಹಾಗೇನಾದರೂ ಕಾಣಿಸಿದ್ದರೆ ಕೆಳಗೆ ಓಡೋಡುತ್ತ ಹೋಗಿ ಬಣ್ಣಬಣ್ಣದ ದೊಡ್ಡ ಕಾಗದವನ್ನು ತೆಗೆದುಕೊಂಡು ಬಂದು ತಂದೆಯವರ ಸಹಾಯದಿಂದ ಅದರ ಹಡಗವನ್ನೋ ಅಥವಾ ಇನ್ನೇನನ್ನೋ ಮಾಡಬೇಕೆಂದು ಅವಳು ನಿಶ್ಚಯಿಸಿದ್ದಳು. ಜಾಹೀರಾತಿನ ಕಾಗದಗಳನ್ನೇ ಹಂಚದ ಸರ್ಕಸ್ ಎಂಥದು! ಆ ಸರ್ಕಸ್ಸಿನ ಬಗ್ಗೆ ಒಳ್ಳೆಯ ಅಭಿಪ್ರಾಯಕ್ಕೆ ಅವಳಲ್ಲಿ ಅವಕಾಶವೇ ಉಳಿಯಲಿಲ್ಲ; ಆದರೆ ಅಷ್ಟರಲ್ಲಿಯೇ ಅವಳ ಮುಂದಿನಿಂದ ಪಲ್ಲಕ್ಕಿಯೊಂದು ಹಾಯ್ದುಹೋಯಿತು. ಅದರ ಹಿಂದೆ ಒಂಟೆಯ ಮೇಲೆ ಮನುಷ್ಯನೊಬ್ಬನು ನಗಾರಿಯನ್ನು ಬಡಿಯುತ್ತ ಕುಳಿತಿದ್ದನು. ಸರ್ಕಸ್ಸಿನ ಜಾಹೀರಾತು ಮಾತ್ರ ಇದಲ್ಲವೆಂದು ಅವಳು ತಿಳಿದುಕೊಂಡಳು. ಅಂದು, ಇವಳಿದ್ದ ಮನೆಯಲ್ಲಿಯ 'ಕಾಕು' ಕೊಲ್ಹಾಪುರದಲ್ಲಿ ಪ್ರತಿ ಶುಕ್ರವಾರ ಸಂಜೆಗೆ ದೇವಿಯ ಮೆರವಣಿಗೆ ಹೀಗೆಯೇ ಉತ್ಸವದಿಂದ ಸಾಗುವದೆಂದು ಹೇಳಿದ್ದರು. ಆಗ ಇವಳು "ಪ್ರತಿ ಶುಕ್ರವಾರ? ಹಾಗಾದರೆ

ಬಹಳೇ ಚೆನ್ನಾಗಿದೆಯಲ್ಲ!" ಎಂದು ಆನಂದದಿಂದ ಕುಣಿದಾಡಿದ್ದಳು. ಕೊಲ್ಹಾಪುರದ ಸುಳಿಯನ್ನು ನೋಡಿ ಕಲುಷಿತವಾಗಿದ್ದ ಅವಳ ಮನಸ್ಸು ಇದರಿಂದ ಪ್ರಸನ್ನವಾಯಿತು. ಮುಂಬಯಿಯಲ್ಲಿ ತಿಂಗಳ ಕೊನೆಗೆ ರಾಣೀ ಬಾಗಕ್ಕೆ ಹೋದರೆ, ಅಕಸ್ಮಾತ್ ಆನೆ ದೃಷ್ಟಿಗೆ ಬೀಳಬಹುದು. ಆದರೆ ಇಲ್ಲಿ ಕೊಲ್ಹಾಪುರದಲ್ಲಿ ಎರಡು ಆನೆ, ನಾಲ್ಕು ಒಂಟೆ, ಎಂಟು ಕುದುರೆ! ಮತ್ತೆ ಎಲ್ಲಕ್ಕೂ ಅಲಂಕಾರ! ಅಲ್ಲದೆ ಪ್ರತಿ ಶುಕ್ರವಾರ ಮೆರವಣಿಗೆ! ಬೇಕಾದವರು ನೋಡಬಹುದು! ಕೊಲ್ಹಾಪುರದ ಬಗ್ಗೆ ಅವಳ ಅಭಿಪ್ರಾಯವೇ ಬೇರೆಯಾಯಿತು. ತಂದೆಯವರು ಇಲ್ಲಿಯೇ ಕೆಲಸ ಹಿಡಿದರೆ ಎಷ್ಟು ಒಳ್ಳೇದಾಗುವದು ಎಂದು ಯೋಚಿಸಿದಳು. ಮುಂಬಯಿಯನ್ನು ಬಿಡುವಾಗಲೇ ಅವಳ ತಂದೆತಾಯಿಗಳಲ್ಲಿ ನಡೆದ ಸಂಭಾಷಣೆಯಿಂದ ಅವಳಿಗೆ ಸುಮಾರಾಗಿ ಕಲ್ಪನೆ ಬಂದಿತ್ತು.— ಕೊಲ್ಹಾಪುರದ ದಿವಾಣರು ತಮ್ಮ ತಂದೆಯನ್ನು ಒಂದು ಕೆಲಸದ ನಿಮಿತ್ತ ಮಾತಾಡಲು ಕರೆದದ್ದನ್ನೂ, ಒಂದು ವೇಳೆ ಹೊಂದಿದರೆ ತಂದೆಯವರು ಅಲ್ಲಿಯೇ ಕೆಲಸವನ್ನು ಸ್ವೀಕರಿಸಿ ಇರುವರೆಂಬುದನ್ನೂ ಅವಳು ತಿಳಿದಿದ್ದಳು.

ಅವಳ ಈ ಆಸೆ ಸರಿಯಾಗಿತ್ತು. ಕೆಲಸವನ್ನು ಹಿಡಿಯುವ ಇಚ್ಛೆಯಿಂದಲೇ ಅವಳ ತಂದೆಯವರು ಕೊಲ್ಹಾಪುರಕ್ಕೆ ಬಂದಿದ್ದರು.

೧೯೩೭ ರಲ್ಲಿದ್ದ ಕೊಲ್ಹಾಪುರದ ದಿವಾಣರು ಅನೇಕ ಸುಧಾರಣೆಗಳ ಕಡೆಗೆ ಲಕ್ಷ್ಯ ಪೂರೈಸಿದ್ದರು. ಕೊಲ್ಹಾಪುರ ಸಂಸ್ಥಾನದ ಹದ್ದಿನಲ್ಲಿದ್ದ ಅಡವಿಗಳಲ್ಲಿ ಮತ್ತು ಭೂಮಿಗತವಾಗಿ ಅದೆಷ್ಟೋ ಬೆಲೆಯುಳ್ಳ ಪದಾರ್ಥಗಳು ಅಡಗಿದ್ದವು. ಅವುಗಳನ್ನೆಲ್ಲ ಶೋಧಿಸಿ ಹೊರದೆಗೆದರೆ ಸಂಸ್ಥಾನಕ್ಕೆ ಅಪರಿಮಿತ ಲಾಭವಾಗುವಂತಿತ್ತು. ಈ ಯೋಜನೆ ಸರಕಾರದ ಮುಂದಿದ್ದರೂ ಕೂಡ ಹಾಗೇ ಬಿದ್ದುಬಿಟ್ಟಿತ್ತು. ಅದರ ಪ್ರಯೋಗವನ್ನು ಕೈಕೊಳ್ಳಬೇಕೆಂದು ಈ ದಿವಾಣರು ಇಚ್ಛಿಸಿದರು. ಇದಕ್ಕಾಗಿ ಔದ್ಯೋಗಿಕ ರಸಾಯನ ಶಾಸ್ತ್ರದಲ್ಲಿ ವಿಶೇಷ ಪ್ರಾವೀಣ್ಯವನ್ನು ಪಡೆದ ಮತ್ತು ಅನುಭವವುಳ್ಳ ತಜ್ಞರ ಮಾರ್ಗದರ್ಶನ ಅವಶ್ಯವಾಗಿತ್ತು. ಇದರ ಬಗ್ಗೆ ಅತ್ತಿತ್ತ ವಿಚಾರ ಮಾಡಲಾಗಿ ಮುಂಬಯಿಯ ಬಣ್ಣದ ಕಾರಖಾನೆಯೊಂದರಲ್ಲಿದ್ದ ಭಾಲಚಂದ್ರ ವಿಷ್ಣು ಕುಲಕರ್ಣಿ ಎಂಬ ಗೃಹಸ್ಥರು ಒಳ್ಳೇ ತಜ್ಞರೆಂದು ತಿಳಿದು ಬಂತು.

ಅವರು ಮುಂಬಯಿ ವಿಶ್ವವಿದ್ಯಾಲಯದ ಪದವಿಯನ್ನು ಪಡೆದ ಬಳಿಕ ಜಪಾನ ದಲ್ಲಿ ಐದಾರು ವರ್ಷಗಳವರೆಗೆ ಔದ್ಯೋಗಿಕ ರಸಾಯನ ಶಾಸ್ತ್ರದ ಅಭ್ಯಾಸ ಮಾಡಿದ್ದರು. ಆದರೆ ದೇಶದ ರಾಜಕೀಯ ಚಳವಳಿಯೊಡನೆ ಅವರ ಸಂಬಂಧವಿದ್ದುದರಿಂದ ಸರಕಾರದ ದೃಷ್ಟಿ ಅವರ ಮೇಲೆ ತೀಕ್ಷ್ಣವಾಗಿತ್ತು.

ಗೃಹಸ್ಥ ಮಾತ್ರ ಅತಿಶಯ ಸ್ವಾಭಿಮಾನಿ; ದೊಡ್ಡ ದೊಡ್ಡ ಕಾರ ಖಾನೆಯ ಯಜಮಾನರಿಗೆ ಇವರನ್ನು ತಮ್ಮಲ್ಲಿ ತೆಗೆದುಕೊಳ್ಳಬೇಕೆಂದು ಆಶೆ. ಆದರೆ ಯಾರ ಹತ್ತಿರಲೂ ಇವರು ಬಹು ದಿನಗಳವರೆಗೆ ನಿಲ್ಲುತ್ತಿರ ಲಿಲ್ಲ. ಹೀಗಾಗಿ ಉತ್ತರದಲ್ಲಿ ರಾವಳಪಿಂಡಿಯಿಂದ ದಕ್ಷಿಣದಲ್ಲಿ ರಾಮೇ ಶ್ವರದ ವರೆಗೂ ಅವರು ಅಡ್ಡಾಡಿದ್ದರು. ಅವರ ಕ್ಷೇತ್ರದಲ್ಲಿಯ ಅವರ ಪ್ರಾವೀಣ್ಯದ ಬಗ್ಗೆ ಮಾತ್ರ ಯಾರಲ್ಲಿಯೂ ಮತಭೇದವಿರಲಿಲ್ಲ. ಅವರಿಗೆ ಅವರ ಕ್ಷೇತ್ರದಲ್ಲಿ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟು ಒಳ್ಳೇ ರೀತಿಯಿಂದ ನಡೆಸಿಕೊಂಡದ್ದಾದರೆ ಸಂಸ್ಥಾನಕ್ಕೆ ಅಪರಿಮಿತ ಲಾಭವಾಗುವದೆಂದು, ದಿವಾಣಸಾಹೇಬರಿಗೆ ಅವರನ್ನು ಕರೆತಂದು ಸಲಹೆ ಕೊಟ್ಟ ಪ್ರತಿಯೊಬ್ಬರೂ ಹೇಳಿದರು. ಹಿಂದೆ ಶ್ರೀ. ಕುಲಕರ್ಣಿಯವರಿಗೆ ರಾಜಕೀಯ ಚಳವಳಿ ಯೊಡನೆ ಸಂಬಂಧವಿತ್ತು ನಿಜ. ಆದರೆ ಈ ಸಂಬಂಧದಲ್ಲಿ ಅವರ ವಿಚಾರ ಗಳು ಈಗ ಕೂಡ ಹಾಗೇ ಇದ್ದವು. ಮತ್ತು ಅವುಗಳನ್ನು ಅವರು ನಿರ್ಭೀತಿ ಯಿಂದ ಹೇಳುತ್ತಿದ್ದರು. ಇದರಿಂದ ಸಂಸ್ಥಾನದ ಕಾರ್ಯದಲ್ಲಿ ಕೊಂಚ ತೊಂದರೆಯಾಗುತ್ತಿತ್ತು. ಹೆದರುತ್ತ ಹೆದರುತ್ತ ತಮ್ಮ ಕೆಲಸವನ್ನು ಪೂರೈಸಿ ಕೊಂಡು ಹೋಗುವ ದಿವಾಣರಾಗಿದ್ದರೆ ಅವರನ್ನು ಕರೆತರುವ ವಿಚಾರವನ್ನೇ ಮಾಡುತ್ತಿರಲಿಲ್ಲ. ಆದರೆ ಈಗಿನ ಹೊಸ ದಿವಾಣರು ನಿರ್ಭಯವೃತ್ತಿಯುಳ್ಳವ ರಾಗಿದ್ದರು. ಶ್ರೀ. ಕುಲಕರ್ಣಿಯವರ ಬಗ್ಗೆ ಅವರು ಸಿ. ಆಯ್. ಡಿ. ಗುಪ್ತಚಾರ ಸಂಘದ ವರದಿಯನ್ನು ಸ್ಪಷ್ಟವಾಗಿ ಕೇಳಿಕೊಂಡರು. ಸಂಸ್ಥಾನದ ಮೇಲೆ ಆತಂಕವನ್ನು ತಂದೊಡ್ಡುವಂಥ ಕೆಲಸ ಅವರಿಂದ ಯಾವದೂ ಆಗಿಲ್ಲ ಎಂದು ನಿಶ್ಚಿತವಾಗಿ ತಿಳಿದ ಮೇಲೆ ಶ್ರೀ. ಕುಲಕರ್ಣಿಯವರಿಗೆ— ಶಕುಂತಲೆಯ ತಂದೆಯವರಿಗೆ—ದಿವಾಣಸಾಹೇಬರು ತಮ್ಮ ವಿಚಾರವನ್ನು ವಿಶದಗೊಳಿಸಿ ಭೆಟ್ಟಿಗಾಗಿ ಕೂಡಲೇ ಬರಬೇಕೆಂದು ಪತ್ರ ಬರೆದರು.

ಶಕುಂತಲೆ ಕೂಡ ತಮ್ಮ ತಂದೆಯೊಡನೆ ಕೊಲ್ಹಾಪುರಕ್ಕೆ ಬಂದದ್ದು

ಇದೇ ಮೊದಲನೆಯ ಬಾರಿ. ಆಗ ಅವಳು ಆರು ವರ್ಷದವಳು ಮಾತ್ರ. ಮತ್ತೆ ಮುಂಬಯಿಗೆ ಹೋಗುವಂತಿಲ್ಲ. ಇನ್ನು ಕೊಲ್ಹಾಪುರದಲ್ಲಿಯೇ ಇರುವದು ಎಂದು ಹೇಳಿದಾಗ ಅವಳಿಗೆ ಅಪರಿಮಿತ ಆನಂದವಾಗಿತ್ತು—ಪ್ರತಿ ಶುಕ್ರವಾರ ಸಂಜೆಗೆ ಆನೆ, ಒಂಟೆಗಳ ಮೆರವಣಿಗೆಯನ್ನು ನೋಡಬಹುದಲ್ಲ ಎಂಬ ವಿಚಾರದಿಂದ; ಆದರೆ ಅವಳ ತಂದೆಯವರು ಈ ಕೆಲಸವನ್ನು ಒಪ್ಪಿದರೆ ಕೊಲ್ಹಾಪುರದ ಅರಣ್ಯಗಳನ್ನೆಲ್ಲ ಪರಿಶೋಧಿಸಬೇಕಾಗಿತ್ತು; ಇದಕ್ಕಾಗಿ ಅವರು ರಾಧಾನಗರದಲ್ಲಿ ಮನೆ ಮಾಡುವ ಯೋಚನೆ ಮಾಡಿದಾಗ ಶಕುಂತಲೆಗೆ ಬಹಳ ನಿರಾಶೆಯಾಗಿತ್ತು. ರಾಧಾನಗರದಲ್ಲಿ ಆನೆ ಒಂಟೆಗಳಾಗಲಿ, ಮುರುಕು ಬಂದೂಕು ಹಿಡಿದ ಶಿಪಾಯಿಗಳಾಗಲಿ ಮೆರವಣಿಗೆಯಲ್ಲಿ ಸಾಗುತ್ತಿರುವದು ಕಂಡುಬರಲಿಲ್ಲ. ನಗರದಲ್ಲಿಯ ಇಷ್ಟೊಂದು ಸ್ವಾರಸ್ಯವನ್ನು ಬಿಟ್ಟು ಅವಳ ತಂದೆಯವರು ಅಡವಿಯಲ್ಲೇಕೆ ಮನೆ ಹಿಡಿದರೋ ಅವಳಿಗೆ ತಿಳಿಯದಾಗಿತ್ತು ! ಅವರ ಉದ್ಯೋಗದ ಬಗ್ಗೆ ಅವಳಿಗೆ ಯಾವ ಕಲ್ಪನೆಯೂ ಇರಲಿಲ್ಲ. ಆ ವಯಸ್ಸಿನಲ್ಲಿ ಇರುವದೂ ಸಾಧ್ಯವಿರಲಿಲ್ಲ. ಪರ್ವತ ಪ್ರದೇಶದಲ್ಲಿ ತೊಂದರೆಗಳಿರುವವಾದರೂ, ಅಲ್ಲಿಯ ಹವೆ ಮಾತ್ರ ಬಹಳ ಒಳ್ಳೆಯದು. ಅವಳ ತಂದೆ ಇನ್ನೂ ಒಂದು ವಿಚಾರದಿಂದಲೂ ಇಲ್ಲಿ ಮನೆ ಮಾಡಿದ್ದರು. ಶಕುಂತಲೆಯನ್ನು ಹೆತ್ತಾಗಿನಿಂದಲೇ ಅವಳ ತಾಯಿಯ ಮೈಯಲ್ಲಿ ಸರಿಯಾಗಿರಲಿಲ್ಲ. ಈ ಆರು ವರ್ಷಗಳಲ್ಲಿ ಒಂದಿಲ್ಲ ಒಂದು ರೀತಿಯಿಂದ ಅವರು ನರಳುತ್ತಲೇ ಇದ್ದರು. ಮುಂಬಯಿಯ ಪ್ರಸಿದ್ಧ ಡಾಕ್ಟರುಗಳಿಂದ ಔಷಧೋಪಚಾರ ನಡೆಸಿದರೂ ಅದರಿಂದ ವಿಶೇಷ ಗುಣವಾಗಲಿಲ್ಲ. ಮುಂಬಯಿಯ ಹವೆಯೂ ಅವರಿಗೆ ಆಗದಂತಾಯಿತು. ಕೊಲ್ಹಾಪುರದ ಕೆಲಸವನ್ನು ಹಿಡಿಯುವಾಗ ಈ ಒಂದು ವಿಚಾರವೂ ಮುಖ್ಯವಾಗಿತ್ತು. ಅದಕ್ಕಾಗಿಯೇ ಶಕುಂತಲೆಯ ತಂದೆ ರಾಧಾನಗರಿಯಲ್ಲಿ ಮನೆ ಮಾಡಿದ್ದರು. ಪಾಪ ! ಶಕುಂತಲೆಗೆ ಇದು ಹೇಗೆ ಗೊತ್ತಾಗಬೇಕು ?

ಆನೆ ಕುದುರೆಗಳ ಮೆರವಣಿಗೆಯನ್ನು ನೋಡಲು ಸಿಗಲಿಲ್ಲ, ಎಂದು ಅವಳು ಮೊದಮೊದಲು ಬಹಳ ಹಳಹಳಿಸುತ್ತಿದ್ದಳು. ಆದರೆ ಕೆಲವು ದಿನಗಳ ಮೇಲೆ ಅದೆಲ್ಲ ಮರೆತುಹೋಯಿತು. ಅಡವಿಯಲ್ಲಿ ಊದುತ್ತ

ಬಾರಿಸುತ್ತ ಹೋಗುವ ಮೆರವಣಿಗೆಗಳಿಲ್ಲದಿದ್ದರೂ ಅವಳ ಎಳೆ ಮನಸ್ಸನ್ನು ಆಕರ್ಷಿಸಲು ಅನೇಕ ವಿಷಯಗಳಿದ್ದವು. ಎಲ್ಲೆಲ್ಲೂ ಹರಡಿದ ನಿಸರ್ಗ ಸೌಂದರ್ಯ, ಬೇಕಾದಷ್ಟು ಹಾಲು ಮೊಸರು, ಹಳ್ಳಿಗರ ಸಹವಾಸ ಇವೆಲ್ಲ ಅವಳಿಗೆ ಅತ್ಯಂತ ಪ್ರಿಯವಾಗಿದ್ದವು. ತಂದೆಯೊಡನೆ ಅಥವಾ ತನ್ನ ಓರಿಗೆಯ ಗೆಳೆಯರೊಡನೆ ಅಡವಿಯಡವಿ ತಿರುಗಾಡುವದು, ಗಿಡದ ನೆರಳಲ್ಲಿ ಚಿಣಿಫಣಿ ಆಡುವದು. ಬಣ್ಣಬಣ್ಣದ ಕಾಡು ಹೂಗಳನ್ನು ಕಲೆ ಹಾಕುವದು, ಕವಳೆ ಹಣ್ಣುಗಳನ್ನು ಮನಸೋಕ್ತ ತಿಂದು ತಾಯಿಯಿಂದ ಬೈಸಿಕೊಳ್ಳುವದು, ಎಮ್ಮೆ ಆಕಳುಗಳ ಬೆನ್ನ ಮೇಲೆ ಕುಳಿತು ಅಡ್ಡಾಡಿ ಬರುವದು ಅಥವಾ ಹನುಮಂತದೇವರ ಗುಡಿಯಲ್ಲಿ ದೊಡ್ಡಾಟವಾದರೆ, ಅದನ್ನು ನೋಡಿ ಮನೆಗೆ ಬಂದು ತಾನೂ ಹುಡುಗರನ್ನು ಕಲೆ ಹಾಕಿ ಸಿಕ್ಕ ಸಿಕ್ಕ ಬಟ್ಟೆಗಳನ್ನೆಲ್ಲ ಹಾಕಿಕೊಂಡು ರಾಮ, ರಾವಣ, ಸೀತೆಯೆಂದು ಕುಣಿದಾಡುವದು—ಇತ್ಯಾದಿ ಕಾರ್ಯಕಲಾಪಗಳಲ್ಲಿ ಶಕುಂತಲಾ ಪೂರ್ಣವಾಗಿ ಮಗ್ನಳಾಗಿದ್ದಳು.

ಮುಂಬಯಿಯಲ್ಲಿ ಆರು ವರ್ಷಗಳ ಕಾಲ ವಾಸವಾಗಿದ್ದರಿಂದ ಅಲ್ಲಿಯ ವಾತಾವರಣದ ಸಂಸ್ಕಾರವೂ ಅವಳ ಮನಸ್ಸಿನ ಮೇಲಾಗಿತ್ತು. ಅಂತಹ ಗದ್ದಲದ ವಾತಾವರಣದಲ್ಲಿ ಬೆಳೆದ ಮಕ್ಕಳಲ್ಲಿ ಕುತೂಹಲ ಬುದ್ಧಿ ಹೆಚ್ಚಾಗಿ ರುತ್ತದೆ. ಅವರ ಜ್ಞಾನವೂ ಅನೇಕ ವಿಷಯಗಳನ್ನು ಕುರಿತು ಇರುತ್ತದೆ. ಆದರೆ ಸಮುದ್ರದ ದಂಡೆಯೊಂದನ್ನು ಬಿಟ್ಟರೆ ನಿಸರ್ಗದ ಸಹವಾಸ ಅವ ರಿಗೆ ಹೆಚ್ಚಾಗಿ ದೊರೆಯದು. ಇತರ ಕೃತ್ರಿಮ ವಾತಾವರಣ ಎಷ್ಟೇ ವಿಶಾಲ ವಾಗಿದ್ದರೂ ಕೂಡ ಮಕ್ಕಳ ಮನಸ್ಸು ಅದರಿಂದ ಮುದುಡಿದಂತೆನಿಸುತ್ತದೆ. ಆದರೆ ರಾಘಾನಗರಿಯಲ್ಲಿ ವಾಸವೆಂದರೆ ನಿಸರ್ಗ ಶೋಭೆಯ ಮಡಿಲಲ್ಲಿಯೇ ವಾಸಿಸಿದಂತೆ! ಇದರಿಂದ ಶಕುಂತಲೆಗೆ—ಇನ್ನಾವ ಸ್ಥಳದಲ್ಲಿಯೂ ದೊರೆ ಯುತ್ತಿರಲಿಲ್ಲ—ಅಂತಹ ಆನಂದ ದೊರೆಯುತ್ತಿತ್ತು. ಅವಳ ಮನಸ್ಸು ಉಲ್ಲಸಿತವಾಗಿತ್ತು; ನಿರ್ಭೀತವಾಗಿತ್ತು. ನಿಸರ್ಗದ ಉದಾತ್ತ ಮತ್ತು ಭವ್ಯ ಸ್ವರೂಪವನ್ನು ನೋಡಿದೊಡನೆ, ಸಂಕುಚಿತ ವಿಚಾರಗಳೆಲ್ಲ ಸರಿದು ಹೋಗುತ್ತವೆ; ಮನೋವೃತ್ತಿ ಉದಾತ್ತವಾಗುತ್ತದೆ. ಅಂತಃಕರಣದಲ್ಲಿಯ ಭೀತಿ, ದುರ್ಬಲತೆಗಳೆಲ್ಲ ಮಾಯವಾಗಿ ಸಾಹಸದ ಕಾರ್ಯವನ್ನು ಕೈಕೊ

ಳ್ಳುವ ಆಶೆಯುಂಟಾಗುತ್ತದೆ. ಶಕುಂತಲೆಯಾದರೋ ಹನ್ನೆರಡು ತಾಸೂ ನಿಸರ್ಗ ಸೌಂದರ್ಯದ ಮಡಿಲಲ್ಲಿಯೇ! ರಾಧಾನಗರಿಯಲ್ಲಿ ಮಳೆ ಧಾರೆ ಗಟ್ಟಿ ಸುರಿಯುತ್ತದೆಂದು ಶಕುಂತಲೆಯ ತಂದೆ ಮಳೆಗಾಲದ ಕೊನೆಯಲ್ಲಿಯೇ ಅಲ್ಲಿ ಮನೆ ಮಾಡಿದರು. ಆದರೆ ಆಗಲೂ ಕೂಡ ಮನೆಬಿಟ್ಟು ಹೊರಬೀಳ ದಂತೆ ಮಳೆ ಒಂದೊಂದು ಸಲ ಸುರಿಯುತ್ತಿತ್ತು. ಮುಂಬಯಿಯ ಮಳೆಯ ಮುಂದೆ ಕೊಲ್ಹಾಪುರದ ಮಳೆ ಶಕುಂತಲೆಗೆ ನೀರಸವೆನಿಸಿತ್ತು. ಆದರೆ ಇಲ್ಲಿಯ ಮಳೆಯ ಉಗ್ರ ರೂಪವನ್ನು ಕಂಡು ಅವಳ ಅಭಿಪ್ರಾಯವೇ ಬದಲಾಯಿತು. ತಲೆಯ ಮೇಲಿಂದಲೇ ಸರಿಯುತ್ತ ಹೋಗುವಂತೆ ಕಾಣುವ ಮೋಡಗಳು—ಮೋಡದ ವಸ್ತ್ರವನ್ನು ಹರಿದು ಅಲ್ಲಲ್ಲಿ ತಲೆ ಹಾಕುತ್ತಿದ್ದಂತೆ ಕಾಣುವ ಪರ್ವತ ಶಿಖರಗಳು, ಎತ್ತರವಾದ ವೃಕ್ಷಗಳು— ಧಾರೆಗಟ್ಟಿ ಸುರಿಯುವ ಮಳೆ ನಿಂತು, ಹನಿ ಹನಿ ಮಳೆ ಪ್ರಾರಂಭವಾದೊಡನೆ ಗಾಳಿಯ ಬಡಿತಕ್ಕೆ ತಲೆ ಕೊಡಹುವ ಸಣ್ಣ ಹುಲ್ಲು—ಆ ಹಸಿರು ಹುಲ್ಲಿ ನಿಂದ ಶುಶೋಭಿತವಾದ ಭೂಮಿ—ಇವುಗಳನ್ನೆಲ್ಲ ಶಕುಂತಲೆ ತನ್ನ ಬಂಗಲೆ ಯಲ್ಲಿ ಕಿಟಕಿಯಲ್ಲಿ ಕುಳಿತು ತಾಸುಗಟ್ಟಲೆ ನೋಡುತ್ತಿದ್ದಳು. ಮಳೆಗಾಲ ಮುಗಿದ ಮೇಲಂತೂ ಸೃಷ್ಟಿಶೋಭೆ ಅತ್ಯಧಿಕವಾಗಿತ್ತು. ಸಣ್ಣ ಪುಟ್ಟ ಪ್ರವಾಹಗಳು ಅಲ್ಲಲ್ಲಿ ಹರಿಯುತ್ತಲೇ ಇದ್ದವು. ಆದರೆ ಆಕಾಶ ನಿರಭ್ರ ವಾಗಿತ್ತು, ಎಲ್ಲೆಡೆಗೂ ಪ್ರಕಾಶ ಮೂಡಿತ್ತು. ಗಿಡಗಳ ಟೊಂಗೆಗಳಿಗೆ ಹೊಸ ಬಣ್ಣವೇರಿತ್ತು. ಬಳ್ಳಿಗಳಲ್ಲಿ ವಿವಿಧ ಬಣ್ಣದ ಹೂಗಳು ಕಂಗೊಳಿ ಸುತ್ತಿದ್ದವು. ಪಕ್ಷಿಗಳ ಕಿಲಕಿಲ ನಿನಾದ ಎಲ್ಲೆಲ್ಲಿಯೂ ಪಸರಿಸಿತ್ತು! ಮಾವಿನ ಗಿಡಗಳೂ ಚಿಗಿತು ಹೂಬಿಟ್ಟವು! ಶಕುಂತಲೆಯ ಬಂಗಲೆಯ ಆವರಣದಲ್ಲಿ ಎಂತೆಂತಹ ಗಿಡಗಳಿದ್ದವು!—ಅವೇನು ಇಲ್ಲಿಯವೊ ಪರ ದೇಶದವೋ ದೇವರೇ ಬಲ್ಲ!—ಅವುಗಳಲ್ಲಿ ಹಸಿರು, ಹಳದಿ, ಗುಲಾಬಿ ಬಣ್ಣದ ಹೂವಿನ ಗಿಡಗಳೆಲ್ಲ ಇದ್ದವು! ಮನೆಯ ಸಮೀಪದಲ್ಲಿಯೇ ದಟ್ಟವಾದ ನೆರಳುಳ್ಳ ಮರಕ್ಕೆ ಒಂದು ಜೋಕಾಲಿಯನ್ನೂ ಶಕುಂತಲೆಯ ತಂದೆ ಕಟ್ಟಿದ್ದರು! ಎಲ್ಲ ಹುಡುಗರನ್ನು ಕೂಡಿಸಿ ಶಕುಂತಲೆ ಗಂಟೆ ಗಂಟೆಗಳ ಕಾಲವನ್ನು ಈ ಜೋಕಾಲಿಯ ಆಟದಲ್ಲಿ ಕಳೆಯುತ್ತಿದ್ದಳು. ಜೋಕಾಲಿಯ ಮೇಲೆ ಕುಳಿತು ಏರಿಹೋಗುವದರಲ್ಲಿ ಅವಳಿಗೆಷ್ಟು ಆನಂದ!

ರಾಧಾನಗರಿಯಲ್ಲಿಯೇ ಇದ್ದ ಚಿಕ್ಕ ಶಾಲೆಗೆ ಶಕುಂತಲೆ ಈಗ ಹೋಗತೊಡಗಿದಳು. ಆದರೆ ಶಾಲೆಯಲ್ಲಿ ಅವಳಿಗೆ ದೊರೆಯುತ್ತಿದ್ದ ಶಿಕ್ಷಣ ದಿಂದ ಅವಳ ತಂದೆ ತೃಪ್ತರಾಗದೆ ಹೊತ್ತು ದೊರೆತಾಗ ತಾವೂ ಅವಳಿಗೆ ಕಲಿಸುತ್ತಿದ್ದರು. ಮುಂಬಯಿಯಲ್ಲಿದ್ದಾಗ ಅವಳ ತಾಯಿ ಯಾವಾಗಲೂ ಅಸ್ವಸ್ಥರಾಗಿರುತ್ತಿದ್ದುದರಿಂದ, ಅವಳ ತಂದೆಯದೇ ಸಲುಗೆ ಶಕುಂತಲೆಗೆ ಹೆಚ್ಚಾಗಿತ್ತು. ಏನಾದರೂ ತಂಟೆ ಬಂದರೆ ಅಪ್ಪನ ಕಡೆಗೆ ಓಡಿಹೋಗು ವದು ಮಕ್ಕಳ ಸಹಜ ಪ್ರವೃತ್ತಿ; ಆದರೆ ಶಕುಂತಲೆಯದು ಹಾಗಲ್ಲ. ಯಾವುದಕ್ಕಾದರೂ ಅವಳು ತಂದೆಯೆಡೆಗೆಯೇ ಓಡಿಬರುತ್ತಿದ್ದಳು. ಅವರೇ ಅವಳಿಗೆ ಸಮಾಧಾನ ಹೇಳುತ್ತಿದ್ದರು. ತಂದೆಯ ಬಗ್ಗೆ ಅವಳಿಗೆ ಬಹಳ ಅಭಿಮಾನ, ಎಲ್ಲಿಲ್ಲದ ವಿಶ್ವಾಸ; ಅವರಿಗೂ ಅವಳೆಂದರೆ ಜೀವ, ಅವಳನ್ನು ಬಿಟ್ಟಿರುತ್ತಿರಲಿಲ್ಲ. ಔದ್ಯೋಗಿಕ ರಸಾಯನ ಶಾಸ್ತ್ರ ಅವರ ಉದರನಿರ್ವಾ ಹದ ವಿಷಯುವೇ ಆಗಿತ್ತು. ಆದರೆ ಅವರ ಮೆಚ್ಚಿಕೆಯ ಇನ್ನುಳಿದ ವಿಷಯಗಳಲ್ಲಿ ಬಾಲಶಿಕ್ಷಣವೂ ಒಂದಾಗಿತ್ತು. ಪ್ರಾಥಮಿಕ ಭೂಗೋಲ, ಗಣಿತಗಳನ್ನು, ಓದುಬರೆಯುವುದನ್ನು ಮಕ್ಕಳ ಮನಸೇರುವಂತೆ ಆಡಾ ಡುತ್ತಲೇ ಹೇಗೆ ಕಲಿಸಬೇಕು ಎನ್ನುವದರ ಬಗ್ಗೆ ಅವರವೇ ಆದ ಕೆಲವು ಕಲ್ಪನೆಗಳಿದ್ದವು. ಅವುಗಳ ಪ್ರಯೋಗವನ್ನೀಗ ಅವರು ಶಕುಂತಲೆಯ ಮೇಲೆ ಮಾಡತೊಡಗಿದರು. ಇದರಿಂದ ಅವಳು ಶಾಲೆಯಲ್ಲಿ ಎರಡು ವರ್ಷಗಳಲ್ಲಿ ಕಲಿಯುವಷ್ಟನ್ನೆಲ್ಲ ಏಳೆಂಟು ತಿಂಗಳಲ್ಲಿಯೇ ಕಲಿತುಬಿಟ್ಟಳು. ತಮ್ಮ ಉದ್ಯೋಗದ ನಿಮಿತ್ತ ಆಚೆ ಈಚೆ ಹೋಗುವಾಗ ಸಹ ಅವಳ ತಂದೆ, ಒಂದೊಂದು ಸಲ ಅವಳನ್ನು ಕರೆದುಕೊಂಡು ಹೋಗಿ ಭೂಮಿಯ ಮೇಲೆ ಬೆಳೆಯುವ ವಸ್ತುಗಳನ್ನು ಕುರಿತು, ಖನಿಜ ಪದಾರ್ಥಗಳನ್ನು ಕುರಿತು ಅವಳಿಗೆ ತಿಳಿಯುವಂತೆ ಹೇಳುತ್ತಿದ್ದರು. ರಸಾಯನ ಶಾಸ್ತ್ರದಲ್ಲಿ ಬಹು ಆಶ್ಚರ್ಯಕಾರಕವಾಗಿ ತೋರುವ ಕೆಲವು ವಿಷಯಗಳನ್ನೂ ಅವಳು ಅವರಿಂದ ಕೇಳಿ ತಿಳಿದುಕೊಂಡಿದ್ದಳು. ಕಾಜಿನ ಎರಡು ಕೊಳವೆಗಳಲ್ಲಿ ಸ್ವಚ್ಛವಾದ ನೀರನ್ನು ತುಂಬಿ, ಅವುಗಳನ್ನು ಒಂದರಲ್ಲೊಂದು ಕೂಡಿಸು ತ್ತಲೇ ಅದು ಬಣ್ಣದ ನೀರಾಗಿ ಕಂಡುಬರುವದನ್ನು ಅವಳು ಆಟದಲ್ಲಿ ತನ್ನ ಸಂಗಡಿಗರಿಗೆ ಅದೆಷ್ಟೋ ಸಲ ಮಾಡಿತೋರಿಸಿದ್ದಳು. ತಂದೆಯ

ಮೇಲ್ವಿಚಾರಣೆಯಲ್ಲಿ ಅವಳು ಸಾಬೂನಿನ ಚಿಕ್ಕ ಕಾರಖಾನೆಯೊಂದನ್ನು ತೆರೆದಿದ್ದಳು. ಅದರಲ್ಲಿ ತಯಾರಾಗುತ್ತಿದ್ದ ಒಂದು ವಡೆಯನ್ನು ಅವಳು ಪ್ರತಿವಾರವೂ ತಮ್ಮ ಶಾಲೆಯ ಶಿಕ್ಷಕರಿಗೆ ಕೊಡುತ್ತಿದ್ದಳು.

ಶಕುಂತಲೆಗೆ ಇದೀಗ ಏಳು ವರುಷಗಳು ತುಂಬಿ ಎಂಟನೆಯದು ಪ್ರಾರಂಭವಾಯಿತು. ಅಂದು ಅವಳ ಹುಟ್ಟುಹಬ್ಬದ ದಿನ. ಅವಳ ತಂದೆಯ ಕಡೆಗೆ ಪುಣೆಯಿಂದ ಅತಿಥಿಗಳಾರೋ ಬಂದಿದ್ದರು. ಅವರ ಲಾವಣಿ ಪದಗಳ ಸುಶ್ರಾವ್ಯ ಗಾಯನವೂ ಅಂದು ಆಯಿತು. ಮಾರುತಿಯ ದೇವಾಲಯದ ಮುಂದೆ ಅಂಗಳದಲ್ಲಿ ಹತ್ತೆಂಟು ಗ್ಯಾಸಿನ ದೀಪಗಳು ಬೆಳಗುತ್ತಿದ್ದವು. ಕೆಳಗಿದ್ದ ದಾಜೀಪುರದಿಂದ ಕೂಡ ಅದೆಷ್ಟೋ ಜನರು ಕೇಳಲು ಬಂದಿದ್ದರು. ಹೀಗಾಗಿ ಸಾವಿರಕ್ಕೆ ಮಿಕ್ಕಿ ಜನಸಂದಣಿ ಸೇರಿತ್ತು. ಬಂದ ಅತಿಥಿಗಳು ತಮ್ಮಟೆಯ ಮೇಳದೊಂದಿಗೆ ವೀರರಸ ಉಕ್ಕಿ ಹರಿಯುವಂತೆ ಲಾವಣಿಗಳನ್ನು ಹೇಳುತ್ತಿದ್ದರು. ಜನರ ಲಕ್ಷ್ಯವೆಲ್ಲ ಆ ಕಡೆಗೇ ಇತ್ತು ! ಬೆಳಗು ಹರಿದು ಗ್ಯಾಸಿನ ದೀಪಗಳ ಪ್ರಕಾಶ ಮಂದವಾಯಿತು; ಕೋಳಿಗಳು ಕೂಗತೊಡಗಿದವು. ಆದರೂ ತಮ್ಮಟೆ ಬಡಿಯುತ್ತಲೇ ಇತ್ತು ! ಶಿವಾಜಿ, ತಾನಾಜಿ, ಬಾಜೀ ದೇಶಪಾಂಡೆ, ರಾಘೋ ಭರಾರಿ, ಬಂಡುಗಾರ ವಾಸುದೇವ ಬಳವಂತ ಫಡಕೆ ಇವರ ಲಾವಣಿ ಪದಗಳನ್ನೆಲ್ಲ ಕೇಳಿ ಕೇಳಿ, ಜನರ ಅಂತಃಕರಣದಲ್ಲಿ ವೀರರಸ ಉಕ್ಕಿ ಹರಿಯುತ್ತಿತ್ತು. ಆ ಅತಿಥಿಗಳು ಮುಂದೆ ಮತ್ತೆ ಹತ್ತು ಹನ್ನೆರಡು ದಿನ ಶಕುಂತಲೆಯ ಮನೆಯಲ್ಲಿಯೇ ಇದ್ದರು. ಆಗ ಶಕುಂತಲೆ ಅವರ ಲಾವಣಿ ಪದಗಳಲ್ಲಿಯ ಕೆಲವೊಂದು ಭಾಗಗಳನ್ನು ಆರಿಸಿ ಬರೆದುಕೊಂಡು ಪಾಠ ಮಾಡಿ, ಅವರಂತೆಯೇ ಒಳ್ಳೇ ಆವೇಶಪೂರ್ವಕವಾಗಿ ಅನ್ನಲೂ ಕಲಿತಳು. ಆಗಲೇ ಅವಳ ಮನಸ್ಸಿನಲ್ಲಿ ದೇಶಭಕ್ತಿ, ರಾಷ್ಟ್ರೀಯ ವೃತ್ತಿಗಳ ಬೀಜ ಮೊಳೆತದ್ದು !

ಶಕುಂತಲೆಯ ಸಂಗಡಿಗರ ತಂಡ ಬಹು ದೊಡ್ಡದು ! ಒಂದು ದಿನ ಈ ತಂಡದಲ್ಲಿ ಇನ್ನೊಬ್ಬ ಹೊಸ ಸಂಗಡಿಗನನ್ನು ಸೇರಿಸಿಕೊಳ್ಳುವ ಪ್ರಸಂಗವೂ ಬಂದಿತು. ಮಧ್ಯಾಹ್ನದ ಸುಮಾರಿಗೆ ಅವಳು ಶಾಲೆ ಬಿಟ್ಟು ಮನೆಗೆ ಬರುವ ಹೊತ್ತಿಗೆ, ಮೆಟ್ಟಲುಗಳ ಮೇಲೆ ಒಂದು ಚಿಕ್ಕ ನಾಯಿ ಮರಿ ಬಂದು ಕುಳಿತಿತ್ತು. ನೋಡಲು ಕಾಡು ಜಾತಿಯ ಮರಿಯಂತೆಯೇ ಕಾಣು

ತ್ತಿತ್ತು. ಹೊಟ್ಟೆಗೆ ಸಿಗದ್ದರಿಂದಲೋ ಏನೋ ತೀರ ಬಡಕಾಗಿತ್ತು; ಅಲ್ಲದೆ ಮೇಲೆ ಮೈತುಂಬ ಧೂಳ! ಕಲ್ಲೆಸೆದು ಅದನ್ನು ಆಚೆಗೆ ನೂಕಿ ಬಿಡ ಬೇಕೆಂದು ಒಂದು ಸಲ ಶಕುಂತಲೆ ಯೋಚಿಸಿದಳು. ಆದರೆ ಆ ಮರಿಯ ದೈನ್ಯ ದೃಷ್ಟಿಯನ್ನು ಕಂಡೊಡನೆ ಅವಳ ಈ ವಿಚಾರವೇ ಮಾಯವಾಯಿತು. ಅವಳು ಆ ಮರಿಯನ್ನೆತ್ತಿಕೊಂಡಳು. ಆಗ ಅದು ಅವಳಿಗೆ ಸುಂದರವಾಗಿಯೇ ಕಂಡಿತು. ತಂದೆ ಆಗ ಊರಲ್ಲಿಲ್ಲವಾದ್ದರಿಂದ ಆ ಮರಿಯನ್ನೆತ್ತಿಕೊಂಡು ಅವಳು ತಾಯಿಯ ಬಳಿಗೆ ಬಂದು "ಹೇಗಿದ್ದರೂ ನನಗೆ ಒಂದು ಮರಿ ಯನ್ನು ಸಾಕಲೇ ಬೇಕಾಗಿತ್ತು. ಇದನ್ನೇ ಸಾಕೋಣ" ಎಂದು ತಿಳಿಸಿ ಹೇಳಿದಳು. ಆದರೆ ತಾಯಿಯ ಒಪ್ಪಿಗೆ ದೊರೆಯಲಿಲ್ಲ! 'ನಾವು ಒಳ್ಳೆಯ ಜಾತಿಯ ನಾಯಿಯನ್ನು ತಂದು ಸಾಕೋಣ' ಎಂದು ಅದೆಷ್ಟೋ ತಿಳಿಸಿ ಹೇಳಿದರು. ಆದರೆ ಶಕುಂತಲೆಯು ಕೇಳಬೇಕಲ್ಲ? ಕಡೆಗೆ ಆ ಮರಿಯ ನ್ನೊಯ್ದು ಎಲ್ಲಾದರೂ ದೂರ ಬಿಟ್ಟುಬರುವಂತೆ ಅವಳ ತಾಯಿ ಸೇವಕ ನಿಗೆ ಹೇಳಿಬಿಟ್ಟರು. ಅವನೂ ಕೂಡ ಅವರ ಹೇಳಿಕೆಯ ಮೇರೆಗೆ ನಡೆದು ಕೊಂಡನು. ಇದನ್ನು ಕಂಡು ಶಕುಂತಲೆ ಅತ್ತೇ ಅತ್ತಳು. ತಾಯಿಯ ಮೇಲೆ ಅವಳಿಗೆ ಹಿಡಿಸಲಾರದ ಕೋಪ ಬಂತು! ತನ್ನ ಮೆಚ್ಚಿಕೆಯ ಆ ನಾಯಿಮರಿ ಇನ್ನು ತನಗೆ ಕಾಣಿಸದಲ್ಲ ಎಂದು ದುಃಖಿಸಿದಳು. ಆದರೆ ಆಶ್ಚರ್ಯ! ಮರುದಿನ ಅವಳು ಶಾಲೆ ಬಿಟ್ಟು ತಿರುಗಿ ಬಂದಾಗ ಆ ನಾಯಿಮರಿ ಮತ್ತೆ ಮೆಟ್ಟಲಿನ ಮೇಲೆಯೇ ಕೂತಿತ್ತು! ಈ ಸಲ ಅವಳು ಯಾರಿಗೂ ಹೇಳದೆಯೇ ಅದನ್ನು ಎತ್ತಿಕೊಂಡೊಯ್ದು ತನ್ನ ಸಾಬೂನಿನ ಕಾರಖಾನೆಯಲ್ಲಿ ಅಡಗಿಸಿಟ್ಟಳು. ಕದ್ದು ಅದಕ್ಕೆ ಮೊಸರೂ ಅನ್ನವನ್ನೂ ಉಣ್ಣಿಸಿದಳು. ತನ್ನ ಕಾರಖಾನೆಯಲ್ಲಿಯೇ ಸಿದ್ಧವಾದ ಸಾಬೂನಿನಿಂದ ಅದನ್ನು ತಿಕ್ಕಿ ತೊಳೆದು ಸ್ವಚ್ಛ ಮಾಡಿದಳು. ಎರಡು ದಿನಗಳ ಮೇಲೆ ಅವಳ ತಂದೆ ಊರಿಂದ ಬಂದರು. ಶಕುಂತಲೆ ಗಂಜಿಯಂತೆ ಬೆಳ್ಳಗಾಗಿದ್ದ ಆ ತನ್ನ ಮರಿಯನ್ನು ಅವರ ಮುಂದೆ ಒಯ್ದು ತೋರಿಸಿ "ನಾವಿದನ್ನು ಸಾಕೋಣವೇ?" ಎಂದು ಕೇಳಿದಳು. ತಂದೆಯವರ ಒಪ್ಪಿಗೆ ಕೂಡಲೇ ದೊರೆಯಿತು. ಒಳ್ಳೇ ಯುಕ್ತಿಯಿಂದ ತನ್ನ ತಾಯಿಯ ಮೇಲೆ ಗೆಲು ವನ್ನು ಪಡೆದ ಆನಂದ ಶಕುಂತಲೆಗಾಯಿತು. ಅದಕ್ಕಾಗಿಯೋ ಏನೋ

ಆ ಮರಿಯ ಹೆಸರನ್ನು 'ವಿಜಯಾ' ಎಂದಿಟ್ಟು ಅದನ್ನು 'ವಿಜೂ, ವಿಜೂ' ಎಂದು ಕರೆಯುತೊಡಗಿದಳು.

ಒಂದು ದಿನ ಅವಳ ತಂದೆ ಅವಳನ್ನು ಕರೆದು ಕೇಳಿದರು "ನಾವು ಒಂದು ಮೋಟಾರ ಕೊಳ್ಳೋಣವೇ?"

ಶಕುಂತಲೆ ಇದಕ್ಕೆ ಬೇಡವೆಂದು ಹೇಗೆ ಹೇಳುವಳು?

ಮೋಟಾರ ತೆಗೆದುಕೊಂಡರೆ ಬಂಗಲೆಯಲ್ಲಿ ಅದನ್ನು ಎಲ್ಲಿಡುವದು, ಮೋಟಾರಿನಲ್ಲಿ ಕುಳಿತು ಎಲ್ಲೆಲ್ಲಿ ತಿರುಗಾಡಲು ಹೋಗುವದು, ತನ್ನ ಸಂಗಡಿಗರಲ್ಲಿ ಯಾರನ್ನು ಮೋಟಾರಿನಲ್ಲಿ ಕರೆದುಕೊಂಡು ಹೋಗುವದು, ಫ್ರಂಟ ಸೀಟಿನ ಮೇಲೆ ಕೂಡಲು 'ವಿಜೂ'ಗೆ ಹೇಗೆ ಕಲಿಸಬೇಕು— ಇತ್ಯಾದಿ ಪ್ರಶ್ನೆಗಳನ್ನೆತ್ತಿ ಅವುಗಳಿಗೆ ಸಮಾಧಾನಕರವಾದ ಉತ್ತರಗಳನ್ನೂ ತಂದೆಯಿಂದ ಪಡೆದಳು. ಶಾಲೆಯಲ್ಲಿ ಕಂಡವರೊಡನೆ 'ನಮ್ಮ ತಂದೆ ಒಂದು ಮೋಟಾರ ಕೊಳ್ಳುವವರಿದ್ದಾರೆ! ಕೊಂಡರೆಂದರೆ ನಾವು........" ಎಂದು ಶಕುಂತಲೆ ಒಳ್ಳೇ ಅಭಿಮಾನದಿಂದ ಹೇಳತೊಡಗಿದಳು.

ಶಕುಂತಲೆಯ ತಂದೆ ಕೊಲ್ಹಾಪುರ ಸಂಸ್ಥಾನದ ಕೆಲಸವನ್ನು ಸ್ವೀಕರಿಸಿದ್ದು ಮೊದಲು ಒಂದೇ ವರ್ಷದ ಮಟ್ಟಿಗೆ, "ಎಷ್ಟೆಂದರೂ ಸಂಸ್ಥಾನದ ಕೆಲಸ! ಸ್ವಾತಂತ್ರ್ಯದಲ್ಲಿ ವಿಹರಿಸಿದಂಥ ನಮಗೆ ಈ ಕೆಲಸ ಎಷ್ಟುಮಟ್ಟಿಗೆ ಅನುಕೂಲವಾಗಬಹುದೋ!" ಎಂಬ ಸಂಶಯದಿಂದಲೇ ಅವರು ಇದನ್ನು ಮೊದಲು ಒಂದು ವರ್ಷದ ಮಟ್ಟಿಗೆ ಮಾತ್ರ ಸ್ವೀಕರಿಸಿದ್ದು. ಹಾಗೆ ಸ್ವೀಕರಿಸುವ ಮೊದಲೇ ಅವರು ಈ ತಮ್ಮ ವಿಚಾರವನ್ನು ದಿವಾಣಸಾಹೇಬರಿಗೆ ಸ್ಪಷ್ಟವಾಗಿ ತಿಳಿಸಿದ್ದರು. ಅವರಾದರೂ ಇದಕ್ಕೆ ಒಪ್ಪಿಕೊಂಡಿದ್ದರು. ಆದರೆ ಆ ಅವಧಿ ಈಗ ಮುಗಿಯುತ್ತ ಬಂದದ್ದರಿಂದ, ದಿವಾಣ ಸಾಹೇಬರು ಅವರನ್ನು ಆ ಸ್ಥಳದಲ್ಲಿ 'ಕಾಯಂ' ಮಾಡಿದ ಆಜ್ಞೆಯನ್ನು ಹೊರಡಿಸುವದಕ್ಕಾಗಿ ಅವರ ಅಭಿಪ್ರಾಯವನ್ನು ಕೇಳಿಕೊಂಡರು. ಶಕುಂತಲೆಯ ತಂದೆ ಈ ಬಗ್ಗೆ ಮೊದಲೇ ವಿಚಾರ ಮಾಡಿಟ್ಟಿದ್ದರು; ಅಲ್ಲದೆ ಒಂದು ವರ್ಷದ ಅವಧಿಯಲ್ಲಿಂತೂ ಅವರು ಎಣಿಸಿದಷ್ಟು ತೊಂದರೆಗಳು ಅದರಲ್ಲಿ ಕಾಣಲಿಲ್ಲ. ದಿವಾಣ ಸಾಹೇಬರಿಗೂ ಅವರಿಗೂ ಮತಭೇದ ಬಹಳವಾಗಿ ಆಗುತ್ತಿರಲಿಲ್ಲ. ಒಂದು ವೇಳೆ ಆದರೂ ಕೂಡ, ತಪ್ಪು ತಮ್ಮದೆಂದು ಕಂಡುಬಂದಾಗ ದಿವಾಣ

ಸಾಹೇಬರು ಅದನ್ನು ಅನೇಕ ಸಲ ಒಪ್ಪಿಕೊಂಡಿದ್ದರು. ಹೀಗಾಗಿ ದಿವಾಣ ಸಾಹೇಬರಿಗೂ ತಮಗೂ ಅಂಥ ಆವೇಶದ ತಿಕ್ಕಾಟ ಬರುವದಿಲ್ಲವೆಂದು ಅವರಿಗೆ ಪೂರ್ಣ ವಿಶ್ವಾಸವಿತ್ತು. ಅಲ್ಲದೆ ಅವರ ಪತ್ನಿಗೆ ಇಲ್ಲಿಯ ಹವೆ ಬಹಳೇ ಆರೋಗ್ಯಕರವಾಗಿತ್ತು. ಅವರ ಪ್ರಕೃತಿ ದಿನದಿನಕ್ಕೆ ಗುಣವಾಗುತ್ತ ನಡೆದಿತ್ತು. ಇದೊಂದೇ ಕಾರಣದಿಂದ ಕೂಡ ಅವರು ಕೊಲ್ಹಾಪುರದ ಈ ಕೆಲಸವನ್ನು 'ಕಾಯಂ' ಒಪ್ಪಿಕೊಳ್ಳಲು ಸಿದ್ಧರಿದ್ದರು. ಪತ್ನಿಯ ಆರೋಗ್ಯದ ಪ್ರಶ್ನೆ ಅವರಿಗೆ ಇಲ್ಲಿಯ ವರೆಗೆ ಒಂದು ಮುಳ್ಳಿನಂತೆ ಚುಚ್ಚುತ್ತಿತ್ತು; ಇಂದು ಆ ಮುಳ್ಳು ದೂರ ಸರಿಯುತ್ತಿರುವದನ್ನು ಕಂಡು ಅವರು ಕೊಲ್ಹಾಪುರದ ಇದೇ ಕೆಲಸವನ್ನೇ ಒಪ್ಪಿಕೊಳ್ಳಲು ಆಶಿಸಿದ್ದರು. ದಿವಾಣಸಾಹೇಬರು ಕೇಳಿದಾಗ, ಸಂಸ್ಥಾನದಲ್ಲಿಯೇ ಇರಲು ತಮ್ಮ ಒಪ್ಪಿಗೆಯನ್ನೂ ಕೊಟ್ಟರು.

ಮೋಟಾರ ಕೊಳ್ಳುವ ವಿಚಾರ ಅವರ ತಲೆಯಲ್ಲಿ ಬಂದದ್ದಾದರೂ ಇದೆಲ್ಲ ಆದ ಮೇಲೆಯೇ. ಅವರ ಮನೆಯಿದ್ದದ್ದು ರಾಧಾನಗರಿಯಲ್ಲಿ; ದಿವಾಣರನ್ನು ಕಾಣಲು ಅಥವಾ ತನ್ನ ಕೆಲಸದ ನಿಮಿತ್ತವಾಗಿ ಅವರಿಗೆ ಅನೇಕ ಸಲ ಕೊಲ್ಹಾಪುರಕ್ಕೆ ಹೋಗಬೇಕಾಗುತ್ತಿತ್ತು. ಊರ ಹೊರಗೂ ಅತ್ತಿತ್ತ ಹೋಗಬೇಕಾದ ಪ್ರಸಂಗಗಳು ಬರುತ್ತಿದ್ದವು. ಮತ್ತೆ ಬಾಡಿಗೆಯ ಮೋಟಾರಿನಲ್ಲಿ ಅಡ್ಡಾಡುವದೆಂದರೆ ತೊಂದರೆಯೂ ಹೌದು, ಪರಾವಲಂಬಿತ್ವವೂ ಹೌದು. ಬಳಿಕ ಇಲ್ಲಿಯ ಕೆಲಸವೇ ಕಾಯಂ ಆದ ಬಳಿಕ ಒಂದು ಮೋಟಾರವನ್ನೇಕೆ ಕೊಳ್ಳಬಾರದು ?

"ನಮ್ಮ ತಂದೆ ಮೋಟಾರ ಕೊಳ್ಳುವವರಿದ್ದಾರೆ" ಎಂದು ಕಂಡ ಕಂಡವರೆದುರು ಹೇಳಿದ ಶಕುಂತಲೆಗೆ ಮಾತ್ರ ಒಂದರ ಹಿಂದೆ ಒಂದರಂತೆ ದಿನಗಳುರುಳಿದರೂ ಮೋಟಾರಿನ ಸುಳಿವೇ ಹತ್ತಲಿಲ್ಲ. ಮೊದಲು 'ಮಳೆ ಹೊರಪಾಗಲಿ, ಮಳೆಗಾಲ ಮುಗಿಯಲಿ, ಆ ಬಳಿಕ ತೆಗೆದುಕೊಳ್ಳೋಣ' ಎಂದು ಶಕುಂತಲೆಯ ತಂದೆ ದಿನಗಳನ್ನು ನೂಕಿದರು. ಆ ಬಳಿಕ ಸೆಕಂಡಹ್ಯಾಂಡ ಮೋಟಾರುಗಳಲ್ಲಿ ಒಳ್ಳೆಯದೊಂದು ಸಿಕ್ಕರೆ ಅದನ್ನೇ ತೆಗೆದುಕೊಂಡರಾಯಿತೆಂದು ಅವರ ಹಾದೀ ಕಾದರು. ಇಂಥ ಎರಡು ಮೂರು ಮೋಟಾರುಗಳನ್ನು ಪ್ರಯೋಗಕ್ಕಾಗಿ ಮನೆಗೂ ತಂದಿದ್ದರು. ಪ್ರತಿ ಸಲವೂ ಇಂಥ ಮೋಟಾರ ಬಂದಾಗ ಶಕುಂತಲೆ ಅದರಲ್ಲಿ ಕುಳಿತು ಅಡ್ಡಾಡಿ

ಬರುತ್ತಿದ್ದಳು. ಪ್ರತಿಯೊಂದು ಮೋಟಾರೂ ಅವಳಿಗೆ ಮೆಚ್ಚಿಗೆಯಾಗಿತ್ತು. ಆದರೆ ಆ ಮೋಟಾರು ತಿರುಗಿ ಹೊರಟ ಕೂಡಲೆ ಶಕುಂತಲೆ ನಿರಾಶೆಯಿಂದ ಕೇಳುತ್ತಿದ್ದಳು "ಭಾವ್ರೂ, ಈ ಮೋಟಾರನ್ನು ನಾವು ಕೊಂಡಿದ್ದೇವಲ್ಲವೇ ?" "ಇದು ಅಷ್ಟು ಚೆನ್ನಾಗಿಲ್ಲ, ಇನ್ನೊಂದು ನೋಡೋಣ" ಎಂದು ತಂದೆ ಉತ್ತರ ಕೊಡುತ್ತಿದ್ದರು. ಅವರ ಆ ಉತ್ತರ ಶಕುಂತಲೆಗೆ ಎಳ್ಳಷ್ಟೂ ಸೇರು ತ್ತಿರಲಿಲ್ಲ. ಕೆಲ ಸೆಕಂಡಹ್ಯಾಂಡ ಗಾಡಿಗಳ ಪ್ರಯೋಗ ಈ ರೀತಿಯಾಗಿ ಆದ ಬಳಿಕ ಶಕುಂತಲೆಯ ತಂದೆ "ಈ ಹಳೆಯ ಮೋಟಾರ ಬೇಡವೇ ಬೇಡ; ಹೊಸ ಮಾಡೆಲ್ಲಿನ ಹೊಸ ಮೋಟಾರನ್ನೇ ಕೊಂಡುಬಿಡೋಣ" ಎಂದು ಮತ್ತೆ ವಿಚಾರ ಮಾಡತೊಡಗಿದರು. ಶಕುಂತಲೆಗಂತೂ ಹಿಡಿಸ ಲಾರದ ಆನಂದ! ಹೊಸ ಮೋಟಾರ ಬರುತ್ತದೆಂದರೆ! ಅವಳು ತನ್ನ ಸಂಗಡಿಗರಿಗೆಲ್ಲ ಅದಾಗಲೇ ಹೇಳಲು ಸುರು ಮಾಡಿದಳು, "ನಾವು ತೆಗೆದುಕೊಳ್ಳುವ ಮೋಟಾರೇನೂ ಹಳೆಯದಲ್ಲs, ಹೊಸದು, ಅಚ್ಚ ಕೆಂಪು ಬಣ್ಣದ್ದು."

ಆದರೆ ಶಕುಂತಲೆಯ ತಂದೆಯ ಈ ವಿಚಾರವು ಪ್ರತ್ಯಕ್ಷ ಕಾರ್ಯರೂಪ ದಲ್ಲಿ ಬರಲಿಲ್ಲ. ಮತ್ತು ಮೋಟಾರನ್ನು ಕೊಳ್ಳುವ ವಿಚಾರವನ್ನೇ ಯಾವ ಕಾರಣದಿಂದ ಬಿಡಬೇಕಾಯಿತೆಂಬುದನ್ನು ಅವರು ಶಕುಂತಲೆಗೆ ಹೇಳುವಂತಿ ರಲಿಲ್ಲ; ದರಬಾರದ ಕೆಲಸವನ್ನು ಕೂಡ ಒಂದು ವೇಳೆ ಬಿಟ್ಟುಬಿಡಬೇಕಾದ ಪ್ರಸಂಗ ಬರಬಹುದೆಂದು ಅವರಿಗೀಗ ಎನಿಸತೊಡಗಿತ್ತು.

ದಿವಾಣರು ಅವರನ್ನು ಮುಂಬಯಿಯಿಂದ ಕರೆತಂದು ದರಬಾರದ ಆ ಕೆಲಸವನ್ನು ಕೊಟ್ಟಿದ್ದರೇನೋ ಸರಿ; ಆದರೆ ಆ ದಿವಾಣರ ಸಂಬಂಧವೇ ಈಗ ದರಬಾರದೊಂದಿಗೆ ಇದ್ದಿರಲಿಲ್ಲ. ಹೊಸ ದಿವಾಣರೊಂದಿಗೆ ಬಗೆಹರಿ ಯುವ ಲಕ್ಷಣ ಶಕುಂತಲೆಯ ತಂದೆಗೆ ಕಾಣಲಿಲ್ಲ. ಈಗಿನ ದಿವಾಣರ ಸ್ವಾಭಿ ಮಾನ ಬಹು ವಿಚಿತ್ರವಾಗಿತ್ತು. ತಮ್ಮದಲ್ಲದ ಕ್ಷೇತ್ರದಲ್ಲಿಯೂ ಅವರು ಕೈಹಾಕಿ, ಕೇವಲ ಅಧಿಕಾರದ ಬಲದಿಂದ ತಜ್ಞರ ಮತವನ್ನು ಅಲ್ಲಗಳೆಯು ತ್ತಿದ್ದ ಅವರ ರೀತಿ ಶಕುಂತಲೆಯ ತಂದೆಗೆ ಎಳ್ಳಷ್ಟೂ ಸೇರಲಿಲ್ಲ. ಈ ಹೊಸ ದಿವಾಣರು ಬಂದ ಒಂದು–ಒಂದೂವರೆ ತಿಂಗಳಲ್ಲಿಯೇ ಶಕುಂತಲೆಯ ತಂದೆಗೂ ಅವರಿಗೂ ಮನಸ್ತಾಪವಾಗಿತ್ತು. ಒಂದು ಸಲ ಅವರು ದಿವಾಣ

ರಿಗೆ ಸ್ಪಷ್ಟವಾಗಿ ಹೇಳಿಯೂ ಬಿಟ್ಟರು. "ತಮಗಂತೂ ಈ ವಿಷಯದಲ್ಲಿ ಏನೂ ತಿಳಿಯದು........ ಅಲ್ಲದೆ ನಾನು ತಜ್ಞನೆಂದೇ ನನ್ನನ್ನು ತಾವು ಈ ಕೆಲಸಕ್ಕೆ ನೇಮಿಸಿದ್ದೀರಿ. ಬಳಿಕ ಸುಮ್ಮನೇ ಹಟಕ್ಕೆ ಬಿದ್ದು ತಾವು ನನ್ನನ್ನು ವಿರೋಧಿಸಕೂಡದು." ಇಂತಹ ಪ್ರಸಂಗ ಇನ್ನೊಂದು ಸಲ ಬಂದದ್ದಾದರೆ, ಇಲ್ಲಿ ಇರಲೇ ಕೂಡದು ಇನ್ನು ಮುಂದೆ; ರಾಜೀನಾಮೆಯನ್ನು ಕೊಟ್ಟು ಹೋಗಿಯೇ ಬಿಡುವದು ಎಂದು ಶಕುಂತಲೆಯ ತಂದೆ ಮನಸ್ಸಿನಲ್ಲಿಯೇ ನಿಶ್ಚಯಿಸಿದ್ದರು.

ಹಾಗೆ ಮಾಡುವ ಪ್ರಸಂಗವೂ ಅವರಿಗೆ ಬೇಗನೇ ಬಂದಿತು; ಅವರು ತಮ್ಮ ರಾಜೀನಾಮೆಯನ್ನೂ ಸಲ್ಲಿಸಿಬಿಟ್ಟರು.

ಮೋಟಾರನ್ನು ಕೊಳ್ಳುವ ಆಶೆಗೆ ಈಗ ಅವಕಾಶವೇ ಇರಲಿಲ್ಲ; ತಮ್ಮ ಕೆಲಸಕ್ಕೆ ರಾಜೀನಾಮೆಯನ್ನು ಸಲ್ಲಿಸಿದ್ದರೂ ಶಕುಂತಲೆಯ ತಂದೆಗೆ ಮತ್ತೆ ಮುಂಬಯಿಗೆ ಹೋಗುವ ವಿಚಾರವಿರಲಿಲ್ಲ. ಅವರ ಪತ್ನಿಗೆ ಇಲ್ಲಿಯ ಹವೆಯೇ ಒಳ್ಳೇ ಆರೋಗ್ಯಕರವಾಗಿ ಪರಿಣಮಿಸಿದ್ದರಿಂದ ಕೊಲ್ಹಾಪುರ ದಲ್ಲಿಯೇ ಇದ್ದುಬಿಡಬೇಕೆಂದು ಅವರು ನಿಶ್ಚಯಿಸಿದ್ದರು. ಅಲ್ಲದೆ ದಿನಾಲು ದುಡಿದೇ ಹೊಟ್ಟೆ ತುಂಬಿಕೊಳ್ಳಬೇಕಾದ ಆರ್ಥಿಕ ಪರಿಸ್ಥಿತಿಯೇನೂ ಅವರಿಗಿರಲಿಲ್ಲ. ಬಳಿಕ ಒಂದೆರಡು ವರ್ಷಗಳನ್ನು ಹಾಗೇ ಸುಖವಾಗಿ ಕಳೆದು, ಆ ಬಳಿಕ ಸಾಧ್ಯವಾದರೆ ಇಲ್ಲಿಯೇ ಸ್ವತಂತ್ರ ಉದ್ಯೋಗವನ್ನು ಕೈಕೊಂಡರಾಯಿತೆಂದು ಅವರು ವಿಚಾರ ಮಾಡಿದರು. ಆದರೆ ರಾಧಾನಗರಿಯ ಸರಕಾರಿ ಬಂಗಲೆಯನ್ನು ಮಾತ್ರ ಬಿಟ್ಟುಕೊಡಬೇಕಾದ ಪ್ರಸಂಗ ಬಂತು. ಮತ್ತು ಶಕುಂತಲೆ ಈಗ ಮರಾಠೀ ಮೂರು ಇಯತ್ತೆಯ ವರೆಗಿನ ಅಭ್ಯಾಸವನ್ನು ಮನೆಯಲ್ಲಿಯೇ ಮುಗಿಸಿದ್ದಳು; ನಾಲ್ಕನೆಯ ಇಯತ್ತೆಗಾಗಿ ಅವಳನ್ನು ಯಾವುದಾದರೂ ಒಂದು ಒಳ್ಳೆಯ ಶಾಲೆಗೆ ಕಳಿಸಬೇಕಾಗಿತ್ತು. ಇವೆಲ್ಲ ದೃಷ್ಟಿಗಳಿಂದ ಮನೆಯನ್ನು ಕೊಲ್ಹಾಪುರದಲ್ಲಿಯೇ ಮಾಡಿದರೆ ಒಳ್ಳೆಯದಾದೀತೆಂದು ಅವರು ಯೋಚಿಸಿದರು. ಶಕುಂತಲೆಗೆ ಅವರ ಈ ಎಲ್ಲ ವಿಚಾರಗಳಲ್ಲಿ ತಿಳಿಯುವಷ್ಟನ್ನೇ ಆರಿಸಿ ಹೇಳಿ, ಅವಳನ್ನು ಸಮಾಧಾನಗೊಳಿಸಲೆತ್ನಿಸಿದರು. "ಶಕೂ, ನೀನೀಗ ದೊಡ್ಡ ಶಾಲೆಗೆ ಹೋಗಬೇಕು ಅಲ್ಲವೇ ?"

"ದೊಡ್ಡದೆಂದರೆ ಇಂಗ್ಲೀಷ ಶಾಲೆಗೇ ?" ಶಕುಂತಲೆ ಕೇಳಿದಳು.

“ ಹೌದು. ಆದರೆ ಇಂಗ್ಲೀಷ ಶಾಲೆ ಇಲ್ಲೆಲ್ಲಿದೆ ? ಕೊಲ್ಹಾಪುರ ದಲ್ಲಿದೆ. ”

“ ಹಾಗಾದರೆ ನಾನು ಹೇಗೆ ಹೋಗಬೇಕು ಇಲ್ಲಿಂದ ? ”

“ ಇಲ್ಲಿಂದ ? ಇಲ್ಲಿಂದ ಹೋಗುವದೇ ಸಾಧ್ಯವಿಲ್ಲ. ಅದಕ್ಕಾಗಿ ಈಗ ಕೊಲ್ಹಾಪುರದಲ್ಲಿಯೇ ನಾವು ಹೋಗಿ ಇರೋಣ. ”

ಇಷ್ಟೊಂದು ದಿನಗಳ ಅವಧಿಯಲ್ಲಿ ಆನೆ, ಒಂಟೆ, ಕುದುರೆಗಳ ಮೆರವ ಣಿಗೆಯನ್ನೆಲ್ಲ ಶಕುಂತಲೆ ಮರೆತುಬಿಟ್ಟಿದ್ದಳು; ಅಲ್ಲದೆ ಅವುಗಳ ಬಗ್ಗೆ ವಿಶೇಷ ಪ್ರೀತಿಯೂ ಈಗ ಅವಳಲ್ಲಿರಲಿಲ್ಲ. ಅದರ ಬದಲು ಶಾಲೆಗೆ ಹೋಗುವದರಲ್ಲಿ, ಅದರಲ್ಲೂ ಇಂಗ್ಲೀಷ ಶಾಲೆಗೆ ಹೋಗುವದರಲ್ಲಿ ಅವಳಿಗೆ ಬಹಳ ಸ್ವಾರಸ್ಯವೆನಿಸುತ್ತಿತ್ತು. ಕೊಲ್ಹಾಪುರಕ್ಕೆ ಇರಲು ಹೋಗುವ ವಿಚಾರ ವನ್ನು ಕೇಳಿ ಅವಳ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಆದರೆ ಅವಳು ಮತ್ತೆ ಎರಡು ಪ್ರಶ್ನೆಗಳನ್ನು ತಂದೆಯ ಮುಂದಿಟ್ಟಳು. “ ನಾವು ಮೋಟಾರ ಕೊಳ್ಳುವದು ಕೊಲ್ಹಾಪುರಕ್ಕೆ ಹೋದ ಮೇಲೆಯೇ ಏನು ? ” “ ಹೌದು, ಆಗಲೇ ನೋಡೋಣ, ” ತಂದೆ ಅಷ್ಟೇ ಸ್ಥೂಲವಾಗಿ ಉತ್ತರ ಕೊಟ್ಟರು. ಮತ್ತೆ ಅವಳ ಎರಡನೆಯ ಪ್ರಶ್ನೆ; “ ನಮ್ಮ ನಾಯಿಮರಿಯನ್ನು ಸಂಗಡ ಒಯ್ಯುವದಲ್ಲವೇ ? ” “ ಮತ್ತೆ ? ಒಯ್ಯಲೇ ಬೇಕು. ” ತಂದೆಯ ಈ ಉತ್ತರದಿಂದ ಶಕುಂತಲೆಗೆ ಬಹಳೇ ಆನಂದವಾಯಿತು. ತನ್ನ ಪುಸ್ತಕ, ಬಟ್ಟೆಬರೆ, ಸಾಬೂನು ಕಾರಖಾನೆಯ ಸಾಮಾನುಗಳು, ರಬ್ಬರಿನ ಚೆಂಡು, ನಾಯಿಮರಿಯ ಆಟದ ಸಾಮಾನುಗಳು—ಇವೆಲ್ಲ ಕೊಲ್ಹಾಪುರಕ್ಕೆ ಸುರಕ್ಷಿತ ವಾಗಿ ಮುಟ್ಟುವವೋ ಇಲ್ಲವೋ ಎಂಬ ಒಂದೇ ಒಂದು ಚಿಂತೆ ಅವಳನ್ನೀಗ ಕಾಡತೊಡಗಿತು.

ಕೊಲ್ಹಾಪುರದ ಶಾಲೆಯಲ್ಲಿ ಅವಳೀಗ ಒಮ್ಮೆಲೇ ನಾಲ್ಕನೆಯ ಇಯ ತ್ತೆಯ ವಿದ್ಯಾರ್ಥಿನಿಯಾದಳು. ಶಾಲೆಯ ದೊಡ್ಡ ಕಟ್ಟಡ, ಹುಡುಗರ ಗದ್ದಲ, ಆ ವರ್ಗದಿಂದ ಈ ವರ್ಗಕ್ಕೆ ಅಡ್ಡಾಡುವ ಶಿಕ್ಷಕರು, ನಾಲ್ಕಾರು ಜನ ಸಿಪಾಯರು— ತಾಸು ಮುಗಿದ ಕೂಡಲೇ ಬಾರಿಸುವ ಗಂಟೆ, ಮತ್ತು ತನ್ನ ವರ್ಗದಲ್ಲಿಯೇ ಇದ್ದ ಅಸಂಖ್ಯ ವಿದ್ಯಾರ್ಥಿಗಳು—ಇವನ್ನೆಲ್ಲ ಕಂಡು ಅವಳಿಗೆ ಆಶ್ಚರ್ಯವಾಯಿತು. ಅಲ್ಲದೆ ಕಂಡವರೆಲ್ಲ ಅವಳನ್ನು ಕೇಳುವವರೇ:

‘ ನಿನ್ನ ಹೆಸರೇನು ? ’ ‘ ನೀನು ಯಾರ ಮಗಳು ? ’ ‘ ನಿಮ್ಮ ತಂದೆ ಏನು ಮಾಡುತ್ತಾರೆ ? ’—ಎಂದು. ಇವೆಲ್ಲ ಪ್ರಶ್ನೆಗಳಿಗೆ ಉತ್ತರ ಕೊಟ್ಟು ಕೊಟ್ಟು ಅವಳಿಗೆ ಸಾಕುಬೇಕಾಗಿ ಹೋಯಿತು. ರಾಧಾನಗರದಲ್ಲಿಯ ಚಿಕ್ಕ ಶಾಲೆ ಯನ್ನೂ ಅಲ್ಲಿಯ ಸಂಗಡಿಗರನ್ನೂ ನೆನೆಸಿಕೊಂಡು ಅಳತೊಡಗಿದಳು. ಅಂದು ಮನೆಗೆ ಬಂದಾಗ ಅವಳ ಮುಖ ಒಣಗಿತ್ತು. “ ನಾನು ಈ ಶಾಲೆಗೆ ಹೋಗುವದಿಲ್ಲ ” ಎಂದು ಸ್ಪಷ್ಟವಾಗಿ ಮನೆಯಲ್ಲಿ ಹೇಳಿಬಿಡಬೇಕೆಂದೂ ಅವಳು ಯೋಚಿಸಿಕೊಂಡಿದ್ದಳು.

ಆದರೆ ಮನೆಗೆ ಬರುತ್ತಲೇ ಅವಳ ಕಿವಿಗೆ ಒಂದು ಆನಂದದ ಸುದ್ದಿ ಬಿತ್ತು; ಅವಳ ತಾಯಿ ಮನೆಯಲ್ಲೆಲ್ಲೂ ಕಾಣಲಿಲ್ಲ. ಅಷ್ಟರಲ್ಲಿಯೇ ತಂದೆ ಹೇಳಿದರು “ ನಿನಗೊಬ್ಬ ತಂಗಿ ಹುಟ್ಟಿದ್ದಾಳೆ. ”

“ ತಂಗಿ ? ” ಎಂದು ಆನಂದದಿಂದ ಚಪ್ಪಾಳೆ ತಟ್ಟಿ ಕುಣಿಯತೊಡಗಿ ದಳು. “ ಹಾಂ........ ಹಾಗಾದರೆ ನಾವು ಅವಳ ಹೆಸರನ್ನು ‘ ಛಬೂ ’ ಎಂದೇ ಇಡೋಣ. ” ಅವಳ ಮನಸ್ಸಿನಲ್ಲಿ ಏನು ಬಂತೋ, ಒಳ್ಳೇ ನಿಶ್ಚ ಯದ ದನಿಯಲ್ಲಿ ಹೇಳಿದಳು.

ಅವಳ ಮಾತಿಗೆ ತಂದೆ ಕೂಡಲೆ ಒಪ್ಪಿದರು.

# ೩

ವಿದ್ಯಾರ್ಥಿಗಳ ಸಮೂಹದಲ್ಲಿ ಆ ಶಿಕ್ಷಕರು ಪ್ರಿಯರಾಗಿದ್ದರೂ, ಶಕುಂತಲೆಗೇಕೋ ಅವರ ಬಗ್ಗೆ ಅಷ್ಟೊಂದು ಮೆಚ್ಚಿಕೆಯಿರಲಿಲ್ಲ.

ಅವರ ಬಗ್ಗೆ ಅವಳ ಮನಸ್ಸಿನಲ್ಲಿ ಹೀಗೆ ಸೂಕ್ಷ್ಮ ಅನಾದರವುಂಟಾಗಲು ಕಾರಣವೂ ಇತ್ತು. ವರ್ಗದಲ್ಲಿ ಒಂದು ದಿನ ಶಿಕ್ಷಕರು, ಅವರ ಪಾಠದಲ್ಲಿಯದೇ ಒಂದು ಪ್ರಶ್ನೆಯನ್ನು ವಿದ್ಯಾರ್ಥಿಗಳಿಗೆ ಕೇಳಿದರು. ಆದರೆ ಯಾರಿಗೂ ಅದರ ಉತ್ತರವನ್ನು ಹೇಳಲು ಬರಲಿಲ್ಲ. ಶಕುಂತಲೆ ಮಾತ್ರ ಅದರ ಉತ್ತರವನ್ನು ಸರಿಯಾಗಿ ಹೇಳಿದಳು. ಶಿಕ್ಷಕರು ಅವಳಿಗೆ ' ಬಹಳ ಜಾಣೆ ' ಎಂದು ಪ್ರೋತ್ಸಾಹ ಕೊಟ್ಟು ' ನಿನ್ನ ಹೆಸರೇನಮ್ಮ ' ಎಂದು ಕೇಳಿದರು.

" ಶಕುಂತಲಾ ಭಾಲಚಂದ್ರ ಕುಲಕರ್ಣಿ " ಅವಳು ಹೇಳಿದಳು.

" ಶಕುಂತಲಾ ? ಓಹೋ, ಶಕುಂತ ಪಕ್ಷಿಗಳು ಕಣ್ವ ಮುನಿಗೆ ಒಯ್ದು ಕೊಟ್ಟಿದ್ದವಲ್ಲ ಃ ಅವಳೇ ಶಕುಂತಲೆ; ಗೊತ್ತಿದೆಯಲ್ಲವೆ ನಿಮಗೆ ? " ಎಂದು ಹುಡುಗರನ್ನು ಕೇಳಿ ಚೇಷ್ಟೆ ಮಾಡಿದರು. ಅದನ್ನು ಕೇಳಿ ವರ್ಗವೇ ನಕ್ಕಿತು. ಇದಕ್ಕೇ ಶಕುಂತಲೆಗೆ ಸಿಟ್ಟು ಬಂದದ್ದು. ತನ್ನದೇನೋ ದೋಷ ಹೊರಬಿದ್ದು, ತನ್ನನ್ನು ಹಾಸ್ಯಕ್ಕೆ ಗುರಿ ಮಾಡಿದಂತೆ ಅವಳಿಗೆನಿಸಿತು.

ಮನೆಗೆ ಬಂದವಳೇ ತಂದೆಯನ್ನು ಕೇಳಿದಳು; ಅವರು "ಕುಂತಲಗಳು ಅಥವಾ ಕೂದಲುಗಳು ಸುಂದರವಿದ್ದವಳೇ ಶಕುಂತಲೆ" ಎಂದು ಹೇಳಿದರು. ವರ್ಗದಲ್ಲಿ ನಡೆದ ವಿಷಯವನ್ನೇನೋ ಶಕುಂತಲೆ ತಂದೆಗೆ ಹೇಳಲಿಲ್ಲ. ಆದರೆ ಶಿಕ್ಷಕರು ಮಾತ್ರ ತನ್ನ ಬಗ್ಗೆ ಬಹು ದೊಡ್ಡ ಅನ್ಯಾಯವನ್ನು ಮಾಡಿದಂತೆ ಅವಳಿಗೆ ತೋರಿತು. ಅಂದಿನಿಂದ ಆ ಶಿಕ್ಷಕರ ಬಗ್ಗೆ ಅವಳಲ್ಲಿ ಅನಾದರವೂ ಕಾಣುತ್ತ ಬಂತು. ಶಕುಂತಲೆಯಂಥ ಮಕ್ಕಳು ತಮಗಾದ ಅಪಮಾನ ವನ್ನು ಬೇಗ ಮರೆಯುವದಿಲ್ಲ, ಇಷ್ಟೇ ಅಲ್ಲ, ಆ ಅಪಮಾನದ ಸೇಡು ತೀರಿಸಿಕೊಳ್ಳಲು ಸಂಧಿಯನ್ನೂ ಕಾಯುತ್ತಿರುತ್ತಾರೆ; ಶಕುಂತಲೆಯೂ ತುಂಬಿದ ವರ್ಗದಲ್ಲಿ ಮಾಸ್ತರರನ್ನು ಹಾಸ್ಯಕ್ಕೀಡು ಮಾಡಬೇಕೆಂದು ದಾರಿ ಕಾಯುತ್ತಿದ್ದಳು.

ಅವಳ ಹೆಸರನ್ನು ಕುರಿತು ಈ ಚೇಷ್ಟೆಯನ್ನು ಮಾಡಿದಂಥ ಅವಳ ಸಂಸ್ಕೃತ ಶಿಕ್ಷಕರೇ "ಸಾಮಾನ್ಯ ಜ್ಞಾನ"ದ ತಾಸನ್ನೂ ತೆಗೆದುಕೊಳ್ಳು ತ್ತಿದ್ದರು. ಒಂದು ಸಲ ಈ ಕ್ಲಾಸಿಗೆ ಬರುವಾಗ ಅವರು "ಅಯರ್ಲಂಡದ ಇತಿಹಾಸ" ಎಂಬ ಪುಸ್ತಕವನ್ನು ತಂದು ಐಯರಿಶ ಲೋಕಸತ್ತೆಯ ಅಧ್ಯಕ್ಷ 'ಡಿ. ವ್ಹಲೇರಾ'ನ ಜೀವನದಲ್ಲಿಯ ಕೆಲವೊಂದು ಮಹತ್ವದ ಸಂಗತಿಗಳನ್ನು ಹೇಳತೊಡಗಿದರು. ಅವರು ಹೇಳಿದ ವಿಷಯವನ್ನೆಲ್ಲ ಬರೆದುಕೊಳ್ಳುತ್ತ ಒಬ್ಬ ವಿದ್ಯಾರ್ಥಿ ನಡುವೆಯೇ ಕೇಳಿದ, "ಸರ್ ಡಿ. ವ್ಹಲೇರಾ ಎಲ್ಲಿ, ಯಾವ ಇಸ್ವಿಯಲ್ಲಿ ಹುಟ್ಟಿದ ಎಂಬುದನ್ನು ಹೇಳಲೇ ಇಲ್ಲವಲ್ಲ ?"

"ಬಹಳ ಜಾಣ, ದೊಡ್ಡವರ ಚರಿತ್ರೆಯಲ್ಲಿ ಇವಕ್ಕೆಲ್ಲ ಮಹತ್ವವಿರು ತ್ತದೆಯೇ ?" ಮಾಸ್ತರರು ಕೇಳಿದರು.

"ಆದರೆ ನಮಗೆ ನೀವು ಹೇಳಬಹುದಲ್ಲ ಸರ್."

"ಒಳ್ಳೇದು, ಹೇಳಲೇಬೇಕೆಂದಿದ್ದರೆ ಹೇಳುವೆ;........ಅಯರ್ಲಂಡದ ಈ ಅಸಾಮಾನ್ಯ ದೇಶಭಕ್ತ ೧೮೮೫ ರಲ್ಲಿ ಹುಟ್ಟಿದ."

"ಸರ್, ಎಲ್ಲಿ ?"

"ಮೂರ್ಖ, ಬೇರೆ ಎಲ್ಲಿ ಹುಟ್ಟುತ್ತಾನೆ ? ಅಯರ್ಲಂಡದಲ್ಲಿಯೇ ಒಂದು ಹಳ್ಳಿಯಲ್ಲಿ ಅವನು ಹುಟ್ಟಿದನು."

ಉಳಿದ ವಿದ್ಯಾರ್ಥಿಗಳೆಲ್ಲ ಬರೆದುಕೊಳ್ಳತೊಡಗಿದರು; ಆದರೆ ಶಕುಂತಲೆ ಕೂಡಲೆ ತನ್ನ ಸ್ಥಳದಲ್ಲಿ ಎದ್ದುನಿಂತು ಹೇಳಿದಳು "ಸರ್, ನೀವು ಹೇಳಿದ್ದು ಪೂರ್ಣ ತಪ್ಪು."

ಮಾಸ್ತರರು ಅವಳ ಕಡೆಗೆ ಸಿಟ್ಟಿನಿಂದ ನೋಡಿದರು. ಆದರೆ ಸಿಟ್ಟಿಗೇಳುವದಕ್ಕಿಂತ ಇದನ್ನು ಚೇಷ್ಟೆಯೆಂದು ತಿಳಿದರೇ ಹೆಚ್ಚು ಒಳ್ಳೆಯದೆಂದು "ತಪ್ಪು? ಅದು ಹೇಗೆ ಹೇಳುವಿ?" ಎಂದು ಕೇಳಿದರು.

"ನೀವು ಹೇಳಿದ ಇಸ್ವಿ, ಊರು ಎರಡೂ ಬೇರೆ ಇವೆ. ಡೀ ವ್ಯಾಲೇರಾ ೧೮೮೨ ರಲ್ಲಿ ಹುಟ್ಟಿದ; ಆದರೆ ಅಯರ್ಲಂಡದಲ್ಲಲ್ಲ, ಅಮೇರಿಕೆಯ ನ್ಯೂಯಾರ್ಕ ನಗರದಲ್ಲಿ."

ವರ್ಗದಲ್ಲಿಯ ಎಲ್ಲ ಹುಡುಗರು ಮಾಸ್ತರರ ಕಡೆಗೊಮ್ಮೆ, ಶಕುಂತಲೆಯ ಕಡೆಗೊಮ್ಮೆ ಮಿಕಿಮಿಕಿ ನೋಡತೊಡಗಿದರು.

"ಹೌದು, ನೀನು ಹೇಳಿದ್ದು ನಾನು ಹೇಳಿದ್ದಕ್ಕಿಂತ ಬೇರೆ ಇದೆ. ಆದರೆ ನಿನ್ನದೇ ಸರಿ, ಎಂದು ಯಾತರ ಮೇಲಿಂದ ತಿಳಿಯುವದು?" ಮಾಸ್ತರರು ಕೇಳಿದರು.

"ನನಗೆ ಇದನ್ನು ಹೇಳಿದವರು ಬಹಳ ದೊಡ್ಡವರಿದ್ದಾರೆ; ನಿಮಗಿಂತ ಅವರ ಮೇಲೆ ನನಗೆ ನೂರು ಪಟ್ಟು ಹೆಚ್ಚು ವಿಶ್ವಾಸವಿದೆ."

"ಹಾಗಾದರೆ ನಾನು ಹೇಳಿದ್ದರ ಮೇಲೆ ನಿನಗೆ ವಿಶ್ವಾಸವಿಲ್ಲವೇ?.... ನಿನಗೆ ಹೇಳಿದವರಷ್ಟು ಜಾಣ ನಾನಲ್ಲ ಎಂದು ನೀನು ಹೇಳುವದೇ?"

"ನೀವು ಹೇಳಿದ್ದು ತಪ್ಪು,—ನಾನು ಹೇಳಿದ್ದೇ ಸರಿಯಾಗಿದೆ. ಅದಕ್ಕಾಗಿ ನೀವು ವಿದ್ಯಾರ್ಥಿಗಳಿಗೆ ಈಗ ಬರೆದುಕೊಳ್ಳಲು ಹೇಳಿದ್ದೀರಲ್ಲ, ಅದನ್ನು ತಿದ್ದಬೇಕು ಎಂದಿಷ್ಟೇ ನಾನು ಹೇಳುವದು."

ಮಾಸ್ತರರ ಸಿಟ್ಟು ನೆತ್ತಿಗೇರಿತು, "ನಿನಗೆ ಹೇಳುವ ಇಂಥ ದೀಡಪಂಡಿತರು ಯಾರವರು?"

ಶಕುಂತಲೆಯ ಮುಖ ಬಿಳುಪಿಟ್ಟಿತು; ಅವಳು ಕೊಂಚ ದಿಙ್ಮೂಢಳಾದಂತೆ ಕಂಡುಬಂದರೂ ಮತ್ತೆ ಧೈರ್ಯದಿಂದ ಹೇಳಿದಳು, "ಸರ್, ನಾನು ಹೆಡ್‌ಮಾಸ್ತರರ ಕಡೆಗೆ ಹೋಗಿ ಹೇಳುತ್ತೇನೆ."

"ಹೆಡ್‌ಮಾಸ್ತರರ ಕಡೆಗೆ ಹೋಗಿ ಏನು ಹೇಳುತ್ತೀ? ಕೂಡು

ಸುಮ್ಮಗೆ ಕೆಳಗೆ. ”

“ ನಾನು ಕೊಡುವದಿಲ್ಲ; ದೀಡಪಂಡಿತರೆಂದು ನೀವೇಕೆ ಅಂದಿರಿ? ನೀವು ಹೇಳಿದ್ದು ತಪ್ಪಿದೆ; ನಾನು ಹೇಳಿದ್ದೇ ಸರಿ; ನನಗೆ ಇದನ್ನು ಹೇಳಿದ ವರಿಗೆ ನೀವು ದೀಡಪಂಡಿತರೆಂದರೆ ನನಗೆ ತಡೆಯುವದಾಗುವದಿಲ್ಲ. ”

“ ಯಾರು ಹೇಳಿದವರು ನಿನಗೆ ಇದನ್ನು ? ”

“ ಅವರು ನನಗೆ ಎಂದೂ ತಪ್ಪು ಹೇಳುವದಿಲ್ಲ; ಅವರು ಬಹಳ ದೊಡ್ಡವರು, ನಿಮಗಿಂತ, ಹೆಡ್‌ಮಾಸ್ತರಿಗಿಂತ. ಎಲ್ಲರಿಗಿಂತ ದೊಡ್ಡವರು ”

“ ಹೀಗೋ, ಅವರ ಬಗ್ಗೆ ನಿನಗೆ ಬಹಳೇ ಅಭಿಮಾನವೆಂದು ಕಾಣು ತ್ತದೆ. ಯಾರವರು ? ”

“ ಅವರು ನಮ್ಮ ಭಾವು—ಅಂದರೆ ನಮ್ಮ ತಂದೆ. ”

ಅದನ್ನು ಕೇಳುತ್ತಲೇ ಮಾಸ್ತರರ ದನಿ ಬದಲಾಯಿತು. “ಹೀಗೋ !” ಅವರು ನುಡಿದರು.

ಆಗ ಶಕುಂತಲೆ ಇಂಗ್ಲೀಷ ನಾಲ್ಕನೆಯ ಇಯತ್ತೆಯಲ್ಲಿದ್ದಳು.

ರಾಧಾನಗರದ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಣ ಪಡೆಯುತ್ತಿದ್ದ ಆ ಶಕುಂತಲೆಗೂ, ತುಂಬಿದ ವರ್ಗದಲ್ಲಿ ಮಾಸ್ತರರೊಡನೆ ವಾದಿಸುತ್ತಿದ್ದ ಈ ಶಕುಂತಲೆಗೂ ಅದೆಷ್ಟೋ ಅಂತರ ಕಾಣುತ್ತಿತ್ತು. ಚಿಕ್ಕಂದಿನಲ್ಲಿ ಮೊಂಡಾಗಿ ಕಾಣುತ್ತಿದ್ದ ಅವಳ ಮೂಗು ಈಗ ಸರಳವಾಗಿ ಕಾಣುತ್ತಿತ್ತು ! ಮೊದಲು ಕುಳ್ಳಾಗಿ ದಪ್ಪಗೆ ಕಾಣುತ್ತಿದ್ದ ಅವಳೀಗ ಎತ್ತರವಾಗಿ ತೆಳ್ಳಗಾಗಿದ್ದಳು. ಅವ ಳನ್ನು ನೋಡಿ ಅವಳ ತಂದೆ, “ ನಮ್ಮ ಶಕುಂತಲೆ ಈಗ ಸೊರಗಿದ್ದಾಳೆ ” ಎಂದು ಹೇಳಿದರೆ, ತಾಯಿ “ ಹಾಂ, ಅವಳ ಬೆಳವಣಿಗೆ ಈಗ ಸುರು ವಾಯಿತು ” ಎಂದು ಹೇಳುತ್ತಿದ್ದರು. ಅವಳ ಶರೀರದಲ್ಲಿಯ ಈ ಬಾಹ್ಯಸ್ಥಿತ್ಯಂ ತರವೇನೋ ಎಲ್ಲರಿಗೂ ಕಾಣುವಂತಿತ್ತು. ಆದರೆ ಅದರ ಜೊತೆಗೆ ಅವಳ ಮನೋಭಾವನೆಗಳಲ್ಲಿಯೂ ಬದಲಾಗುತ್ತ ನಡೆದಿತ್ತು ! ಅವಳ ಹುಡು ಗಾಟ ಕಡಿಮೆಯಾಗಿ, ಗಂಭೀರತೆ ಹೆಚ್ಚುತ್ತಲಿತ್ತು. ಮೊದಲು ಯಾವುದ ಕ್ಕಾದರೂ ನಗುವದೇ ಅವಳ ಸ್ವಭಾವವಾಗಿ ಬಿಟ್ಟಿತ್ತು. ಅವಳ ನಗುವಿಗೆ ಯಾವದೇ ವಿಶಿಷ್ಟ ಕಾರಣ ಬೇಕಾಗುತ್ತಿರಲಿಲ್ಲ. ಮತ್ತು ಒಮ್ಮೆ ನಗು ಬಂದಿತೆಂದರೆ ಅದನ್ನು ತಡೆಯುವದೇ ಆಗುತ್ತಿರಲಿಲ್ಲ. ಆದರೆ ಈಗಿನ

ಸ್ಥಿತಿಯೇ ಬೇರೆಯಾಗಿತ್ತು. ತನ್ನ ಓರಿಗೆಯ ಹುಡುಗರನ್ನು ಕಲೆಹಾಕಿ ಆಡುವ ಅವಳ ಸರ್ಕಸ ಆಟ ಎಲ್ಲಿಯೋ ಮಾಯವಾಗಿತ್ತು. ತನ್ನ ಓರಿಗೆಯ ಹುಡುಗರಲ್ಲಿ ಅವಳೀಗ ಕಾಣುವದು ಕೂಡ ಅಪರೂಪವಾಗಿತ್ತು. ಅವಳಿಗೀಗ ಚಿಕ್ಕ ಮಿತ್ರರು ಇಬ್ಬರು; 'ವಿಜೂ' ಅವಳ ನಾಯಿ, ಮತ್ತು ಅವಳ ತಂಗಿ 'ಛಬೂ' ಇಬ್ಬರೇ; ಇವರಿಬ್ಬರನ್ನು ಬಿಟ್ಟರೆ ಅವಳ ಸಲುಗೆ ತಂದೆಯ ಕೂಡ. ಒಂದು ದಿನ ಅವರು ಅವಳಿಗೆ 'ಚದುರಂಗ'ದ ಆಟವನ್ನು ಏನೋ ಹೊತ್ತು ಹೋಗಲೆಂದು ಹೇಳಿಕೊಟ್ಟರು; ಅಂದಿನಿಂದ ಶಕುಂತಲೆಗೆ ಅದರ ಚಟವೇ ಹತ್ತಿಬಿಟ್ಟಿತು. ತಂದೆಯವರಿಗೆ ವೇಳೆ ಇದ್ದರೆ, ಅವಳು ಅವರೊಡನೆಯೇ ಈ ಆಟವನ್ನಾಡುತ್ತಿದ್ದಳು. ಅವರೊಂದು ವೇಳೆ ಕೆಲಸದಲ್ಲಿದ್ದರೆ ಅಥವಾ ತಮ್ಮ ಉದ್ಯೋಗದ ನಿಮಿತ್ತ ಬೇರೆ ಊರಿಗೆ ಹೋಗಿದ್ದರೆ, ತಾನೊಬ್ಬಳೇ ಆ ಆಟವನ್ನು ಆಡುತ್ತ ಕೂಡುತ್ತಿದ್ದಳು. 'ಕೇರಳ ಕೋಕಿಲ' ಎಂಬ ಮಾಸಿಕ ಪತ್ರದ ೧೯೧೧-೧೨ ನೆಯ ವರ್ಷದ ಪ್ರತಿಗಳನ್ನೆಲ್ಲ ಅವಳ ತಂದೆ ಸಂಗ್ರಹಿಸಿಟ್ಟಿದ್ದರು. ಆ ಮಾಸಿಕದ ಪ್ರತಿಗಳೆಲ್ಲದರಲ್ಲಿ "ಎಂಟು ಆಟಗಳಲ್ಲಿ ಸೋಲಿಸಿರಿ", "ಹತ್ತು ಆಟಗಳಲ್ಲಿ ಸೋಲಿಸಿರಿ", ಇತ್ಯಾದಿ ತಲೆಬರಹಗಳ ಕೆಳಗೆ ಆಟದ ವಿಸ್ತಾರವನ್ನೆಲ್ಲ ವರ್ಣಿಸಿರುತ್ತಿದ್ದರು. ಅವುಗಳನ್ನು ತೆಗೆದುಕೊಂಡು ಶಕುಂತಲೆ ಬಿಡಿಸುತ್ತ ಕೂಡುತ್ತಿದ್ದಳು. ಶಾಲೆಯಲ್ಲಿ ಅವಳು ಇಂಗ್ಲಿಷ ನಾಲ್ಕನೆಯ ಇಯತ್ತೆಯಲ್ಲಿದ್ದರೂ, ಮ್ಯಾಟ್ರಿಕದ ವಿದ್ಯಾರ್ಥಿಗಳು ಕೂಡ ಓದಿರಲಿಕ್ಕಿಲ್ಲ ಅಷ್ಟೊಂದು ಅವಳು ಮನೆಯಲ್ಲಿಯೇ ಓದಿಕೊಂಡಿದ್ದಳು. ನಾಟಕ ಕಾದಂಬರಿಗಳಿಗಿಂತ ಗಂಭೀರ ವಿಷಯದ ಒಳ್ಳೊಳ್ಳೇ ಪುಸ್ತಕಗಳೇ ಅವಳಿಗೆ ಹೆಚ್ಚು ಮೆಚ್ಚಿಕೆಯಾಗಿದ್ದವು. ಚಿಂತಾಮಣಿರಾವ ವೈದ್ಯರ "ಮಹಾಭಾರತದ ಉಪಸಂಹಾರ," "ಕೇಸರಿಯಿಂದ ಆಯ್ದ ಲೋಕಮಾನ್ಯ ಟಿಳಕರ ಲೇಖಗಳು", ಈ ಎರಡು ಪುಸ್ತಕಗಳು ಅವಳ ವಿಶೇಷ ಮೆಚ್ಚಿಕೆಯನ್ನು ಪಡೆದಿದ್ದವು. ಇಂತಹ ಅಭ್ಯಾಸದ ಜೊತೆಗೆ ಅವಳ ತಂದೆ ಹಾಗೇ ಮಾತಿನ ಭರದಲ್ಲಿ ಹೇಳುತ್ತಿದ್ದ ಅದೆಷ್ಟೋ ಸಂಗತಿಗಳೂ ಅವಳಿಗೆ ಸಹಾಯಕವಾಗಿದ್ದವು. ಅವುಗಳನ್ನೆಲ್ಲ ಅವಳು ಲಕ್ಷ್ಯಪೂರ್ವಕವಾಗಿ ಕೇಳಿಕೊಳ್ಳುತ್ತಿದ್ದಳು. ಅವರು ಹೇಳಿದ ೧೯೦೮ ರ ರಾಜಕೀಯ ಚಳವಳಿ ಅವಳಿಗೆ ಒಂದು ಕಲ್ಪಿತ ಕಥೆಗಿಂತಲೂ ಹೆಚ್ಚು ರೋಮಾಂಚಕಾರಿ

ಯಾಗಿತ್ತು. ಖುದಿರಾಮ ಬೋಸ, ಮದನಲಾಲ ಧಿಂಗ್ರಾ, ಸಾವರಕರ, ಸೇನಾಪತಿ ಬಾಪಟ ಇವರೆಲ್ಲರ ಸಾಹಸವನ್ನೂ, ಸುರೇಂದ್ರನಾಥ ಬ್ಯಾನರ್ಜಿ, ಆನಿಬೇಝಂಟ, ಚಿತ್ತರಂಜನದಾಸ ಇವರ ವಕ್ತೃತ್ವ ಕೌಶಲ್ಯವನ್ನೂ ಹೇಳ ತೊಡಗಿದರೆಂದರೆ, ಅವರ ಹೇಳುವಿಕೆ ಮುಗಿಯಲೇ ಬಾರದೆಂದು ಶಕುಂತಲೆ ಗೆನಿಸುತ್ತಿತ್ತು. ತಂದೆಯ ಬಗ್ಗೆ ಅವಳಿಗೆ ಬಹಳ ಅಭಿಮಾನ. ಅವರ ಜಾಣ ತನ, ವಿದ್ಯೆ, ದೇಶಭಕ್ತಿ ಇವುಗಳನ್ನು ಸರಿಗಟ್ಟುವಂಥ ಗುಣಗಳು ಬೇರೆ ಯಾರ ಲ್ಲಿಯೂ ದೊರೆಯುವೆಂದು ಅವಳಿಗೆ ಪೂರ್ಣ ವಿಶ್ವಾಸವಿತ್ತು. ಅವರ ಬಗ್ಗೆ ಇದ್ದ ಅವಳ ಪ್ರೇಮಾಭಿಮಾನಗಳಿಗೆ ಮಿತಿಯೇ ಇರಲಿಲ್ಲ. ಈ ಅವಳ ಅಭಿಮಾನವೇ ಅವಳನ್ನು ವರ್ಗದಲ್ಲಿ ಸಂಸ್ಕೃತ ಶಿಕ್ಷಕರೊಡನೆ ಬಡಿದಾ ಡಲು ಹಚ್ಚಿದ್ದು.

ನಾಲ್ಕನೆಯ ಇಯತ್ತೆಯ ವಾರ್ಷಿಕ ಪರೀಕ್ಷೆಯಲ್ಲಿ ಅವಳದೇ ಮೊದಲ ನೆಯ ನಂಬರು ಬಂದು, ಅವಳಿಗೊಂದು ಶಿಷ್ಯವೃತ್ತಿಯೂ ದೊರೆಯಿತು. ಬಳಿಕ ಐದನೆಯ ಇಯತ್ತೆಯಲ್ಲಿ ಅವಳು ಓದತೊಡಗಿದ ಒಂದೆರಡು ತಿಂಗಳಲ್ಲಿಯೇ ಶಾಲೆಯಲ್ಲಿ ವಕ್ತೃತ್ವ ಸ್ಪರ್ಧೆಯೊಂದು ಏರ್ಪಡಿಸಲ್ಪಟ್ಟಿತು. ಹದಿನೈದು ವರ್ಷದ ಒಳಗಿನ ವಿದ್ಯಾರ್ಥಿಗಳಿಗಾಗಿ, ಹದಿನೈದು ವರ್ಷದ ಮೇಲಿನ ಹೈಸ್ಕೂಲ ವಿದ್ಯಾರ್ಥಿಗಳಿಗಾಗಿ, ಕೇವಲ ವಿದ್ಯಾರ್ಥಿನಿಯರಿಗಾಗಿ, ಮತ್ತು ಎಲ್ಲ ವಿದ್ಯಾರ್ಥಿಗಳಲ್ಲಿ ಕೂಡಿ—ಹೀಗೆ ಬೇರೆ ಬೇರೆ ಪಾರಿತೋಷಕಗಳ ನ್ನಿಟ್ಟಿದ್ದರು; ವಿಷಯಗಳೂ ಬೇರೆ ಬೇರೆ ಇದ್ದವು. ಶಕುಂತಲೆಗೂ ಈ ಸ್ಪರ್ಧೆಯಲ್ಲಿ ಭಾಗ ವಹಿಸಬೇಕೆಂದು ಆಶೆಯಾಯ್ತು; ಅವಳ ತಂದೆಯೂ ಇದಕ್ಕೆ ಪ್ರೋತ್ಸಾಹ ಕೊಟ್ಟರು. ಆದರೆ ಶಕುಂತಲೆ ತಮ್ಮ ಸಹಾಯವಿಲ್ಲ ದೆಯೇ ಭಾಷಣವನ್ನು ಮಾಡಬೇಕೆಂದು ಅವರ ಇಚ್ಛೆ. ಶಕುಂತಲೆಯೂ ಅದನ್ನೊಪ್ಪಿಕೊಂಡು ತನ್ನ ಭಾಷಣವನ್ನೆಲ್ಲ ಬರೆದು ತಂದೆಗೆ ತೋರಿಸಿದಳು. ಅದನ್ನೋದಿ ಅವರು, "ಇವಳು ಬರೆದಂತೆ ಮಾತಾಡಬಲ್ಲಳಾದರೆ, ಮೊದಲ ನೆಯ ಪಾರಿತೋಷಕ ನಿಶ್ಚಿತವಾಗಿ ಸಿಗಲೇ ಬೇಕು." ಎಂದು ತಮ್ಮಷ್ಟಕ್ಕೆ ಅಂದುಕೊಂಡರು. ಅವಳಿಗೆ ಮಾತ್ರ "ಹಾಂ, ಚೆನ್ನಾಗಿದೆ, ಸಿದ್ಧ ಮಾಡಿಡು" ಎಂದಿಷ್ಟೇ ಹೇಳಿದರು.

ಶಕುಂತಲೆ ತನ್ನ ಭಾಷಣವನ್ನು ಪಾಠ ಮಾಡಲು ಪ್ರಾರಂಭಿಸಿದಳು.

ನಾಲ್ಕಾರು ದಿನ ಅವಳ ಲಕ್ಷ್ಯವೆಲ್ಲ ಅದರ ಕಡೆಗೇ ಇತ್ತು. ವರ್ಗದಲ್ಲಿ ಮಾಸ್ತರರು ಭೂಮಿತಿಯ ಸಿದ್ಧಾಂತಗಳನ್ನು ಹೇಳುತ್ತಿದ್ದರೆ, ಅವಳ ಲಕ್ಷ್ಯ, ಒಂದೊಂದಾಗಿ ಅವರು ಹೇಳುವ ಮೆಟ್ಟಿಲುಗಳ ಕಡೆಗೆ ಇರುವುದಕ್ಕೆ ಬದಲಾಗಿ ಅವಳ ಭಾಷಣದಲ್ಲಿಯ ವಾಕ್ಯಗಳ ಕಡೆಗೇ ಇರುತ್ತಿತ್ತು. ತನ್ನಷ್ಟಕ್ಕೆ ತಾನೇ ಆ ಭಾಷಣವನ್ನು ಹೇಳುವದರಲ್ಲಿ ಅಥವಾ ಯಾವ ವಾಕ್ಯವಾದ ಮೇಲೆ ಯಾವುದು ಎಂದು ವಾಕ್ಯಗಳನ್ನೆಣಿಸುವಲ್ಲಿ ಅವಳ ಮನಸ್ಸು ತೊಡಗಿರುತ್ತಿತ್ತು. ಒಂದು ಸಲ ಈ ವಾಕ್ಯಗಳ ಅನುಕ್ರಮ ತಪ್ಪಿದರೆ, ಅವಳಿಗೆ ಮುಂದಿನದೇನೂ ನೆನಪಾಗುತ್ತಿರಲಿಲ್ಲ. ಭಾಷಣವನ್ನೇನೋ ಅವಳೇ ಬರೆದಿದ್ದಳು. ಆದರೆ ಅದನ್ನು ಪಾಠ ಮಾಡಿ ಅನ್ನುವಾಗ ಲಕ್ಷ್ಯವೆಲ್ಲ ವಾಕ್ಯರಚನೆಯ ಕಡೆಗೇ ಹೋಗಿ ಬಿಟ್ಟು, ಅರ್ಥಕ್ಕೇ ಬಾಧೆಯುಂಟಾಗುತ್ತದೆಂದು ಅವಳಿಗೆ ಕಂಡು ಬಂತು. ಇದಕ್ಕೇನು ಮಾಡಬೇಕೆಂಬುದು ಮಾತ್ರ ಅವಳಿಗೆ ತಿಳಿಯದಂತಾಯಿತು. ತಂದೆಯ ಎದುರಿಗೆ ಭಾಷಣವನ್ನು ಅಂದು ತೋರಿಸಿದಾಗ ಅವಳು ನಡುವೆ ಎಲ್ಲಿಯೂ ನಿಂತಿರಲಿಲ್ಲ. ಒಂದೆರಡು ಕಡೆ ಸ್ವಲ್ಪ ಮರೆತಂತೆ ಅನಿಸಿದರೂ, ಕೂಡಲೆ ಮುಂದೆ ಸಾಗಿದ್ದಳು. ಅದನ್ನು ಕೇಳಿ ಅವಳ ತಂದೆ "ಏನಡ್ಡಿಯಿಲ್ಲ, ಚೆನ್ನಾಗಿದೆ" ಎಂದೇ ಹೇಳಿದ್ದರು. ಅವಳು ತಪ್ಪಿದ ಸ್ಥಳಗಳಲ್ಲಿ ಒಂದೆರಡು ಕಡೆ ತಿದ್ದಿ, "ಹಾಂ, ಈಗ ನನ್ನ ಮಾತು ಕೇಳು; ಭಾಷಣ ಪೂರ್ಣ ಪಾಠವಾಗಿದೆಯಲ್ಲವೇ ನಿನಗೆ? ಭಾಷಣ ಮಾಡುವದು ಇನ್ನು ನಾಳೆ ಸಂಜೆಗೆ; ಹಾಗಾದರೆ ಈಗ ಪಾಠ ಮಾಡುವದನ್ನು ಪೂರ್ಣವಾಗಿ ಬಿಟ್ಟುಬಿಡು. ಈಗ ಭಾಷಣದ ವಿಚಾರವನ್ನೇ ತಲೆಯಲ್ಲಿ ತರಬೇಡ; ಮರೆತು ಬಿಡು" ಎಂದು ಅವಳಿಗೆ ಧೈರ್ಯ ಹೇಳಿದರು.

ಶಕುಂತಲೆ ಬಾಯ ಮೇಲೆ ಬೆರಳಿಟ್ಟು ಕೇಳಿದಳು, "ಮರೆತು ಬಿಡಲಿ? ಅಂದರೆ ನಾಳೆ ಏನೂ ನೆನಪಾಗುವದಿಲ್ಲ."

"ಹಾಗಲ್ಲ" ಅವರು ಹೇಳಿದರು "ಇಲ್ಲಿಯೇ ನೀನು ತಪ್ಪುವದು. ಈಗ ಪಾಠ ಮಾಡದಿದ್ದರೆ ನಾಳೆ ಎಲ್ಲ ನೆನಪಾಗುವದು. ಓಟದ ಸ್ಪರ್ಧೆಯಲ್ಲಿ ಭಾಗ ವಹಿಸುವ ಕುದುರೆಯನ್ನು ಕೊನೆಯ ಗಳಿಗೆಯ ವರೆಗೂ ಓಡಿಸುವದಿಲ್ಲ. ಹಾಗೆ ವಿಶ್ರಾಂತಿ ದೊರೆಯುವದರಿಂದಲೇ ಸ್ಪರ್ಧೆಯಲ್ಲಿ ಅದು ಒಳ್ಳೇ ಜೋರಿನಿಂದ ಓಡುವದು. ಮನಸ್ಸಿನ ವಿಷಯವಾದರೂ ಹಾಗೆಯೇ

ಇರುತ್ತದೆ. ಭಾಷಣದ ವೇಳೆ ಬರುವ ವರೆಗೆ ಮನಸ್ಸಿಗೆ ಪಾಠ ಮಾಡುವ ಪರಿಶ್ರಮ ಕೊಟ್ಟರೆ ಕೊನೆಗೆ ಭಾಷಣ ಮಾಡಬೇಕಾದ ವೇಳೆಯಲ್ಲಿಯೇ ಅದು ಮರೆತು ಹೋಗಬಹುದು. ಆದರೆ ಅದಕ್ಕೆ ಇಪ್ಪತ್ತುನಾಲ್ಕು ಗಂಟೆಗಳ ಕಾಲವಾದರೂ ವಿಶ್ರಾಂತಿಯನ್ನು ಕೊಟ್ಟರೆ, ಭಾಷಣವೆಲ್ಲ ಮನಸ್ಸಿನಲ್ಲಿಯೇ ಸಂಗ್ರಹಿತವಾಗಿ ಭಾಷಣ ಮಾಡುವಾಗ ಏನೂ ತೊಂದರೆಯಾಗುವದಿಲ್ಲ. ಪರೀಕ್ಷೆಯ ವೇಳೆಯಲ್ಲಿ ನಾನೇನು ಮಾಡುತ್ತಿದ್ದೆ ಗೊತ್ತಿದೆಯೇ ನಿನಗೆ? ಮೊದಲನೆಯ ದಿವಸ ನಾನು ಪುಸ್ತಕವನ್ನೇ ಮುಟ್ಟುತ್ತಿದ್ದಿಲ್ಲ. ಇಡೀ ದಿನ ವನ್ನು 'ಚದುರಂಗ' ಇಲ್ಲವೆ ಇಸ್ಪೇಟಿನ ಆಟದಲ್ಲಿ ಕಳೆಯುತ್ತಿದ್ದೆ "ನಾಳೆ ಪರೀಕ್ಷೆ ಸುರುವಾಗುವದಿದೆ; ಈ ಹುಡುಗ ಇವೊತ್ತು ಆಟವಾಡುತ್ತಿದ್ದನಲ್ಲs" ಎಂದು ಜನರೇನೋ ಅನ್ನುತ್ತಿದ್ದರು. ಆದರೆ ನನಗೆ ಗೊತ್ತು, ಇಂತಹ ಮನರಂಜನೆಯಿಂದಲೇ ಸ್ಮರಣಶಕ್ತಿ ಹರಿತವಾಗಿ ಮರುದಿನ ಒಳ್ಳೇ ಕೆಲಸ ಮಾಡುತ್ತದೆಂದು.—ಹಾಂ, ಹಾಗಾದರೆ ಭಾಷಣದ ಈ ಕಾಗದವನ್ನು ಬದಿಗಿಟ್ಟುಬಿಡು."

ತಂದೆಯ ಮಾತನ್ನು ಯಾವಾಗಲೂ ಕೇಳುತ್ತಿದ್ದ ಶಕುಂತಲೆ, ಈಗ ಮಾತ್ರ ಕೇಳಲಿಲ್ಲ. ಕೇಳಲಿಲ್ಲ ಎಂದರೆ ಅವರು ಹೇಳಿದ ಯುಕ್ತಿಯ ಪ್ರಯೋಗವನ್ನು ಮಾಡಿನೋಡಲು ಅವಳಿಗೆ ಧೈರ್ಯವಾಗಲಿಲ್ಲ. ಅವರು ಹೇಳಿದ ಹಾಗೆ ಮಾಡಿದರೆ, ಭಾಷಣ ಮಾಡುವ ವೇಳೆಗೆ ವಾಕ್ಯಗಳ ಅನು ಕ್ರಮವೇ ಮರೆತುಹೋದೀತು! ಅದಕ್ಕಾಗಿ ಪಾಠ ಮಾಡುವದನ್ನು ಶಕುಂತಲೆ ಒಂದೇಸವನೆ ನಡೆಸಿಯೇ ಇದ್ದಳು.

ಕೊನೆಗೆ ಭಾಷಣದ ವೇಳೆ ಬಂದೇ ಬಿಟ್ಟಿತು. ಅವಳು ಮಾತಾಡುವ ಗುಂಪೊಂದನ್ನು ಬಿಟ್ಟು, ಉಳಿದ ಗುಂಪುಗಳ ಭಾಷಣ ಕೇಳಲು ಅವಳಿಗೆ ಅನುಮತಿ ಇತ್ತು. ವಿದ್ಯಾರ್ಥಿಗಳು ಬಹುಸಂಖ್ಯೆಯಲ್ಲಿ ಕೂಡಿದ್ದರು. ಚಪ್ಪಾಳೆ ತಟ್ಟುವದು, ನಗುವದು, ಚೇಷ್ಟೆ ಮಾಡುವದು ಇತ್ಯಾದಿಗಳೆಲ್ಲ ಒಳ್ಳೇ ಜೋರಿನಿಂದ ನಡೆದಿದ್ದವು. ಇದನ್ನೆಲ್ಲ ನೋಡಿಯೇ ಅವಳ ಧೈರ್ಯ ಅರ್ಧ ಉಡುಗಿ ಹೋಯಿತು. ಎಲ್ಲರಿಗಾಗಿ ಇಟ್ಟ ವಾಕ್‌ಸ್ಪರ್ಧೆಯಲ್ಲಿ ಕಾಲೇಜದ ವಿದ್ಯಾರ್ಥಿಯೊಬ್ಬ ಬಹಳ ಚೆನ್ನಾಗಿ ಮಾತನಾಡಿದ. ಅವನಿನ್ನೂ ಭಾಷಣ ಮಾಡುತ್ತಿರುವಾಗಲೇ, ಮೊದಲನೆಯ ಬಹುಮಾನ ಇವನಿಗೇ

ದೊರೆಯುವದೆಂದು ಜನ ಹೇಳತೊಡಗಿದರು. ಅವನ ಭಾಷಣ ನಡೆದಾಗಲೂ ಶಕುಂತಲೆ ತನ್ನ ಭಾಷಣವನ್ನು ಮನಸ್ಸಿನಲ್ಲಿ ಮತ್ತೆ ಮತ್ತೆ ನೆನಪು ಮಾಡಿಕೊಳ್ಳುತ್ತಿದ್ದಳು. ನಡುವೆ ಒಮ್ಮಿಂದೊಮ್ಮೆಲೆ ಚಪ್ಪಾಳೆ ತಟ್ಟಿದ ಕೂಡಲೆ, ಹಾಗಾದರೆ ಇನ್ನೇನು ಹೇಳುವನೋ ಎಂದು ಅವಳ ಲಕ್ಷ್ಯ ಅವನ ಕಡೆಗೆ ತಿರುಗುತ್ತಿತ್ತು. " ಗಾಂಧೀಜಿಯವರ ಅಹಿಂಸಾತ್ಮಕ ಚಳವಳಿಯಿಂದ ಹಿಂದುಸ್ಥಾನಕ್ಕೆ ಸ್ವರಾಜ್ಯ ಸಿಗಬಹುದೇ ? " ಎಂಬುದೇ ಅವನ ಭಾಷಣದ ವಿಷಯವಾಗಿತ್ತು. ಒಳ್ಳೇ ದೊಡ್ಡ ಮಾತುಗಾರನಂತೆ ಅವನು ದರ್ಪದಿಂದ ಮಾತನಾಡುತ್ತಿದ್ದ; ಅವನಲ್ಲಿ ಆವೇಶ ತುಂಬಿತ್ತು. ಶಕುಂತಲೆಯ ಎಡಬದಿಗೆ ನಾಲ್ಕಾರು ತುಂಟ ವಿದ್ಯಾರ್ಥಿಗಳು ಕೇಳಲು ಕುಳಿತಿದ್ದರು. ಅವರಲ್ಲಿ ಒಬ್ಬನೆಂದ " ಗಾಂಧೀಜಿಯ ಮೇಲೆ ಮಾತನಾಡುವದೆಂದು ಖಾದೀ ಅಂಗಿ ಟೊಪ್ಪಿಗೆಗಳನ್ನು ಬಾಡಿಗೆಯಿಂದ ತಂದಿದ್ದಾನೆಂದು ಕಾಣುತ್ತದೆ. " ಅವನ ಜೊತೆಗಾರರು ನಕ್ಕರು. ಆದರೆ ಅದನ್ನು ಕೇಳಿ ಹಿಂದಿನ ಸಾಲಿನಲ್ಲಿ ಕುಳಿತ ವಿದ್ಯಾರ್ಥಿಯೊಬ್ಬ ಹೇಳಿದ " ಬಾಡಿಗೆಯೆಲ್ಲಿಯದು ಮಹಾರಾಯಾ, ತಾನೇ ಕೈಯಿಂದ ತೆಗೆದ ನೂಲಿನಿಂದ ಅವುಗಳನ್ನು ಹೊಲಿಸಿದ್ದಾನೆ; ಅವನಾರೆಂದು ಗೊತ್ತಿಲ್ಲ ಕಾಣುತ್ತದೆ, ಪದ್ಮಾಕರ ಸೊಹನಿ ಅವನು."

ಅವನ ಭಾಷಣ ಮುಗಿದಾಗ ಚಪ್ಪಾಳೆಗಳ ಸುರಿಮಳೆಯೇ ಸುರಿಮಳೆ " ಶಾಬಾಸ ಪದ್ಮಾಕರ. " " well done ಸೊಹನಿ " ಎಂಬ ಕೂಗುಗಳು ಎಲ್ಲೆಡೆಯಿಂದಲೂ ಕೇಳಬಂದುವು. ಅದನ್ನೆಲ್ಲ ಕೇಳಿ ಶಕುಂತಲೆ ಅಂಜಿದಳು. " ಇಷ್ಟು ಚೆನ್ನಾಗಿ ಹೇಗೆ ಮಾತಾಡಲು ಬರಬೇಕು ನನಗೆ ? " ಎಂಬ ಅಂಜಿಕೆಯಿಂದ ಅವಳ ಮನ ನಡುಗಿತು. ಅವಳು ಭಾಷಣದ ಪ್ರಾರಂಭದ ಭಾಗವನ್ನು ನೆನಪು ಮಾಡಿಕೊಳ್ಳಲು ಮತ್ತೆ ಮತ್ತೆ ಯತ್ನಿಸಿದಳು. ಆದರೆ ಅದಕ್ಕೆ ಬದಲಾಗಿ ಭಾಷಣದ ಕೊನೆಯ ಭಾಗವೇ ಅವಳ ಮನಸ್ಸಿನಲ್ಲಿ ಸುತ್ತುತ್ತಿತ್ತು.

ಅವಳ ಗುಂಪಿನಲ್ಲಿಯ ವಿದ್ಯಾರ್ಥಿಗಳ ಭಾಷಣ ಪ್ರಾರಂಭವಾಯಿತು. ಮಾಸ್ತರರು ಅವಳಿಗೆ ಆ ಸಭಾಗೃಹದಿಂದೆದ್ದು ದೂರದ ಒಂದು ಕೋಣೆಯಲ್ಲಿ ಹೋಗಿ ಕುಳ್ಳಿರಲು ಹೇಳಿದರು. ಆ ಗುಂಪಿನಲ್ಲಿ ಮಾತನಾಡುವ ಇನ್ನೂ ಐದಾರು ವಿದ್ಯಾರ್ಥಿಗಳು ಮತ್ತು ಇಬ್ಬರು ವಿದ್ಯಾರ್ಥಿನಿಯರು ಸಹ ಅಲ್ಲಿ

ಕುಳಿತಿದ್ದರು. ಅಲ್ಲಿ ಹೋಗುತ್ತಲೇ ಶಕುಂತಲೆ ಒಳಗಿನ ಕಿಸೆಯಲ್ಲಿದ್ದ ಭಾಷಣದ ಕಾಗದವನ್ನು ಹೊರದೆಗೆದಳು. ಆದರೆ ಮೊದಲಿನ ಕಾಗದ ಮಾತ್ರ ಏನು ಮಾಡಿದರೂ ಅವಳಿಗೆ ಸಿಗಲೊಲ್ಲದು. ಭಾಷಣದ ಪ್ರಾರಂಭದ ಮೂರು ಭಾಗಗಳು ಅದೇ ಕಾಗದದ ಮೇಲಿದ್ದವು. ಎಷ್ಟು ನೆನಪು ಮಾಡಿ ಕೊಂಡರೂ ಅವು ನೆನಪಾಗಲೊಲ್ಲವು; ಆ ಕಾಗದವೂ ದೊರೆಯದು. ಇನ್ನೇನು ಮಾಡಬೇಕು ?...........; ಅಷ್ಟರಲ್ಲಿಯೇ ಕೋಣೆಯ ಬಾಗಿಲನ್ನು ತೆರೆದು ಮಾಸ್ತರರು ಹೇಳಿದರು "ಶಕುಂತಲಾ ಕುಲಕರ್ಣಿ, ಈಗ ನಿನ್ನ ಸರತಿ ಬಂದಿದೆ." ಶಕುಂತಲೆ ಸಭಾಗೃಹದ ಕಡೆಗೆ ಹೊರಟಾಗ ಅವಳ ಕಾಲುಗಳು ನಡುಗುತ್ತಿದ್ದವು.

ಅವಳು ವ್ಯಾಸ ಪೀಠದ ಮೇಲೆ ಹತ್ತಿ ನಿಂತಳು. "ಶಕುಂತಲಾ ಕುಲಕರ್ಣಿ, ಐದನೆಯ ಇಯತ್ತೆ" ಎಂದು ಯಾರೋ ದೂರದಿಂದ ಹೇಳಿ ದಂತೆ ಅವಳಿಗೆನಿಸಿತು. ಅವಳು ತನ್ನ ಭಾಷಣದ ಮೊದಲನೆಯ ವಾಕ್ಯ ವನ್ನು ಮನಸ್ಸಿನಲ್ಲಿಯೇ ನೆನಪು ಮಾಡಿಕೊಳ್ಳುತ್ತಿದ್ದಳು. "ನನ್ನಂತಹ ಚಿಕ್ಕ ಹುಡುಗಿ ಈ ವಿಷಯದ ಮೇಲೆ ಮಾತನಾಡುವದೆಂದರೆ ಕೆಲವರಿಗೆ ಹಾಸ್ಯಾಸ್ಪದವಾಗಿ ಕೂಡ ಕಾಣಬರಬಹುದು. ಆದರೆ ಹಿಂದು-ಮುಸಲ್ಮಾನರ ಒಕ್ಕಟ್ಟಿನ ಪ್ರಶ್ನೆ ಎಷ್ಟು ತೊಡಕಿನದಿದ್ದರೂ ಕೂಡ ಪ್ರತಿಯೊಬ್ಬರು— ಅವರು ವಯಸ್ಸಿನಿಂದ ಚಿಕ್ಕವರಿರಲಿ, ದೊಡ್ಡವರಿರಲಿ—ವಿಚಾರ ಮಾಡ ಬೇಕಾದದ್ದು. ಯಾಕಂದರೆ ಇಂದು ನಮ್ಮ ದೇಶದಲ್ಲಿ ಹಿಂದುಗಳ ಸಂಖ್ಯೆ—" ನಿಶ್ಚಿತವಾದ ಸಂಖ್ಯೆ ಅವಳಿಗೆ ನೆನಪಾಗಲೇ ಇಲ್ಲ; ಸುಮಾರಾಗಿ ಎಷ್ಟು ಕೋಟಿ? ಎಷ್ಟು ಲಕ್ಷ? ಎಂಬುದನ್ನು ಅವಳು ಮನಸ್ಸಿನಲ್ಲಿಯೇ ಗುಣಿಸ ಹತ್ತಿದಳು. ಅಷ್ಟರಲ್ಲಿ ಯಾರೋ ಹೇಳಿದರು "ಹಾಂ, ಸುರು ಮಾಡಿರಿ." ಟೇಬಲ್ ಮೇಲಿನ ಘಂಟೆ ಬಾರಿಸಿತು. ಹುಡುಗರ ಗದ್ದಲ ನಡೆದೇ ಇತ್ತು. ಅವಳು ಎದುರು ನೋಡಿದಳು; ಯಾರ ಮುಖವೂ ಅವಳಿಗೆ ಸ್ಪಷ್ಟವಾಗಿ ಕಾಣಿಸಲಿಲ್ಲ. ಎದುರು ಅದೊಂದು ಮುಖಗಳ ಸಮುದಾಯವೇ ಅವಳಿಗೆ ಕಂಡಿತು. ಅವಳ ಕಾಲುಗಳು ನಡುಗತೊಡಗಿದವು. ಮುಖ ಬೆವರಿಟ್ಟಿತು, ಗಂಟಲು ಒಣಗಿತು. ಬೆವರನ್ನೊರೆಸಲು ವಸ್ತ್ರವನ್ನು ಹುಡುಕಿದಳು, ಅದೂ ಸಿಗಲಿಲ್ಲ. ಆ ಕೋಣೆಯಿಂದೀಚೆಗೆ ಬರುದಾಗ ಅದೆಲ್ಲೋ ನಡುವೆ ದಾರಿ

ಯಲ್ಲಿ ಬಿದ್ದು ಹೋಗಿತ್ತು. ಅವಳ ಕೈ ಸಹಜವಾಗಿಯೇ ಸೆರಗಿನ ಕಡೆಗೆ ಹೋಯಿತು. ಆದರೆ ತಾನು ಹೊಸ ಜರದ ಸೀರೆಯುಟ್ಟಿದ್ದು ಅವಳಿಗೆ ಒಮ್ಮೆಲೆ ನೆನಪಾಯಿತು. ಬಳಿಕ ಅದರಿಂದ ಹೇಗೆ ಮುಖವನ್ನು ಒರೆಸುವದು? ಅವಳು ಬೇಡವೆಂದು ಎಷ್ಟು ಹೇಳಿದರೂ ಕೇಳದೆ, ಅವಳ ತಾಯಿ ಅವಳಿಗೆ ಆ ಸೀರೆಯನ್ನುಡಿಸಿ ಕಳಿಸಿದ್ದರು. 'ಜರದ ಸೀರೆ ಮಾತ್ರ ಒಳ್ಳೇ ಭರ್ಜರಿಯಾಗಿದೆ. ಆದರೆ ಭಾಷಣ ಹೀಗಾಯಿತಲ್ಲ' ಎಂಬ ವಿಚಾರದಿಂದ ಅವಳಿಗೆ ನಾಚಿಕೆಯೆನಿಸಿತು. ಅಷ್ಟರಲ್ಲಿ ಮತ್ತೆ ಯಾರೋ ಕೂಗಿ ಹೇಳಿದರು, "ಕುಲಕರ್ಣಿ, ಸುರು ಮಾಡಿರಿ." ಶಕುಂತಲೆ ಮತ್ತೆ ಪ್ರಾರಂಭ ಮಾಡಿದಳು.

"ನನ್ನಂತಹ ಚಿಕ್ಕ ಹುಡುಗಿ........" ಅವಳ ಲಕ್ಷ್ಯವೆಲ್ಲ ಮುಂದಿನ ವಾಕ್ಯದಲ್ಲಿ ಬರುವ ಹಿಂದು-ಮುಸಲ್ಮಾನರ ಅಂಕಿ ಸಂಖ್ಯೆಯ ಕಡೆಗಿತ್ತು. ಆ ಅಂಕಿಗಳು ಮಾತ್ರ ತನ್ನನ್ನು ಗೊಂದಲದಲ್ಲಿ ಕೆಡವದೆ ಬಿಡವೆಂದು ಅವಳು ತಿಳಿದುಬಿಟ್ಟಿದ್ದಳು. ಕೆಲವು ದಿನಗಳ ಹಿಂದೆ ಅವಳು ಜಯಸಿಂಗಪುರ ನಿಲ್ದಾಣದಲ್ಲಿ ನಿಂತಾಗ ರೇಲ್ವೆ ಎಂಜಿನ್ನು ಹತ್ತಿರ ಹತ್ತಿರ ಬಂದಂತೆ ಹೆಚ್ಚು ಅಕರಾಳ ವಿಕರಾಳವಾಗಿ ಕಾಣತೊಡಗಿತ್ತು. ಅದರ ನೆನಪಾಯಿತೀಗ ಅವಳಿಗೆ; ಹಿಂದೂ ಮುಸಲ್ಮಾನರ ಅಂಕಿ ಸಂಖ್ಯೆಗಳಾದರೂ ಅವಳಿಗೆ ಅಕರಾಳ ವಿಕರಾಳವಾಗಿ ಕಾಣತೊಡಗಿದವು! ಆ ಸಂಕಟದಿಂದ ಹೇಗೆ ಪಾರಾದಳೆಂಬುದು ಅವಳಿಗೇ ತಿಳಿಯಲಿಲ್ಲ. ಅಷ್ಟರಲ್ಲಿಯೇ ವಿದ್ಯಾರ್ಥಿಗಳಲ್ಲಿ ಒಬ್ಬನು ಇನ್ನೊಬ್ಬನನ್ನು ಚಿವುಟಿದನಂತೆ; ಚಿವುಟಿಸಿಕೊಂಡವನು ಜೋರಿನಿಂದ ಕೂಗಿದ; ಅವನು ಕೂಗಿದನೆಂದು ಇಡೀ ಸಭೆಯೇ ನಗತೊಡಗಿತು. ಆದರೆ ಶಕುಂತಲೆಗೆನಿಸಿತು ಎಲ್ಲರೂ ತನಗೇ ನಕ್ಕರೆಂದು! ಅವಳ ಭಾಷಣದಲ್ಲಿಯ ಏಕಸೂತ್ರತೆ ಆಗ ತಪ್ಪಿದ್ದು ಪುನಃ ಹೊಂದಲೇ ಇಲ್ಲ. ವಿಷಯದ ವಿಚಾರ ಧಾರೆಯೇ ಹೋಗಿಬಿಟ್ಟಿತು. ಮನೆಯಲ್ಲಿ ಭಾಷಣವನ್ನು ಪಾಠ ಮಾಡುವಾಗ ತಪ್ಪದೆ ಇದ್ದ ಸ್ಥಳಗಳಲ್ಲಿ ಕೂಡ ಅವಳೀಗ ತಪ್ಪತೊಡಗಿದ್ದಳು. ಅಂತೂ ಭಾಷಣದ ಕೊನೆಯನ್ನೊಮ್ಮೆ ಹೇಗೋ ಮುಟ್ಟಿದಳು. ಅವಳ ಭಾಷಣ ಮುಗಿದಾಗ ಯಾರೂ ಚಪ್ಪಾಳೆ ತಟ್ಟಲಿಲ್ಲ. ಅಲ್ಲಿಯೇ ಎದುರುಗಡೆ ಕುಳಿತಿದ್ದ ಪರೀಕ್ಷಕರಲ್ಲಿ ಒಬ್ಬ ಮಾಸ್ತರರು ಅವಳಿಗೆ ಹೇಳಿದರು, "ಕುಲಕರ್ಣಿ,

ಭಾಷಣವನ್ನು ಮುಗಿಸಿಬಿಟ್ಟಿರೇನು? ಇನ್ನೂ ಐದು ನಿಮಿಷಗಳಿವೆ; ಮಾತಾಡುವದಿದ್ದರೆ ಆಡಬಹುದು."

ಶಕುಂತಲೆಗೆ ಆಶ್ಚರ್ಯವೆನಿಸಿತು. ಮನೆಯಲ್ಲಿ ಅವಳು ಗಡಿಯಾಳವನ್ನಿಟ್ಟು ಭಾಷಣ ಮಾಡಿದಾಗ, ಅದು ಸರಿಯಾಗಿ ಹತ್ತು ನಿಮಿಷಗಳ ಭಾಷಣವಾಗುತ್ತಿತ್ತು. ಆದರೆ ಈಗ ಐದು ನಿಮಿಷಗಳು ಹೇಗೆ ಉಳಿದವು? ಅವಳ ಭಾಷಣದಲ್ಲಿಯ ಅರ್ಧ ಭಾಗವನ್ನು ಅವಳು ಮರೆತುಬಿಟ್ಟಿರಬೇಕು ಹಾಗಾದರೆ; ಅವಳು ತನ್ನನ್ನು ತಾನೇ ಹಾಸ್ಯಕ್ಕೆ ಗುರಿಮಾಡಿಕೊಂಡಿದ್ದಳು. ಮಾತಾಡಿದ ದಣಿವಿನಿಂದ ನಿಲ್ಲಲೂ ಕೂಡ ಅವಳಲ್ಲಿ ಶಕ್ತಿಯಿರಲಿಲ್ಲ; ಸೀರಡಿಕೆ ಅವಳನ್ನು ಪೀಡಿಸುತ್ತಿತ್ತು. ತಂದೆ ತನ್ನ ಬಗ್ಗೆ ಏನೆಂದು ತಿಳಿದುಕೊಂಡಾರು, ಅವರಿಗೆಷ್ಟೊಂದು ನಿರಾಶೆಯಾಗಬಹುದು—ಇತ್ಯಾದಿ ಕಲ್ಪನೆಗಳು ಅವಳ ತಲೆಯಲ್ಲಿ ಬಂದು, ದುಃಖ ಉಕ್ಕಿಬರುತ್ತಿತ್ತು. ಮನೆ ಮುಟ್ಟುವವರೆಗೆ ಅದನ್ನು ತಡೆಹಿಡಿಯುವದೂ ದುಸ್ತರವಾಗಿತ್ತು.

ಆ ದಿನ ಶಕುಂತಲೆ ಊಟವನ್ನೇ ಮಾಡಲಿಲ್ಲ; ತಾಯಿ ಎಷ್ಟೊಂದು ಎಬ್ಬಿಸಿದರೂ ಅವಳು ಏಳದೆ ಹಾಗೇ ಹಾಸಿಗೆಯ ಮೇಲೆ ಉರುಳಾಡುತ್ತಿದ್ದಳು. ಬಳಿಕ ಎರಡು ದಿನಗಳ ಮೇಲೆ ತಂದೆ ಊರಿಂದ ಬಂದರು. ಶಕುಂತಲೆ ಅವರೆದುರು ಹೋಗುವದನ್ನೇ ತಪ್ಪಿಸಿಕೊಳ್ಳುವ ಯತ್ನ ಮಾಡಿದಳು; ಇಷ್ಟೊಂದು ನಾಚಿಕೆ, ದುಃಖ ಅವಳಿಗೆ ಹಿಂದೆಂದೂ ಉಂಟಾಗಿರಲಿಲ್ಲ.

೪

ತಂದೆ ಕೊಲ್ಹಾಪುರ ಸಂಸ್ಥಾನದ ಕೆಲಸವನ್ನು ಬಿಟ್ಟ ವಿಷಯ ಶಕುಂತಲೆಗೆ ಎಷ್ಟೋ ದಿನಗಳ ವರೆಗೆ ಗೊತ್ತಾಗಿರಲಿಲ್ಲ. ಅವಳಿನ್ನೂ ಚಿಕ್ಕವಳಿದ್ದುದರಿಂದ ತಂದೆಯಾದರೂ ಇಂತಹ ವಿಷಯಗಳನ್ನು ಅವಳೆದುರು ಹೇಳುತ್ತಿರಲಿಲ್ಲ. ರಾಧಾನಗರದಲ್ಲಿಯ ಮನೆಯನ್ನು ಬಿಟ್ಟು ಕೊಲ್ಹಾಪುರಕ್ಕೆ ಬಂದದ್ದು ಇಂಗ್ಲೀಷ ಶಾಲೆಗೆ ಹೋಗುವ ತನ್ನ ಅನುಕೂಲಕ್ಕಾಗಿಯೇ ಎಂದು ಅವಳು ಎಷ್ಟೋ ದಿನಗಳ ವರೆಗೆ ತಿಳಿದಿದ್ದಳು. ತಂದೆ ತಮ್ಮ ಕೆಲಸಕ್ಕೆ ರಾಜೀನಾಮೆ ಸಲ್ಲಿಸಿದ್ದು ಇದೀಗ ಅವಳಿಗೆ ತಿಳಿದಿತ್ತು. ಒಂದು ದಿನ ಹಾತಕಣಂಗಲೆಯ ಮಿತ್ರರೊಬ್ಬರು ಅವಳ ತಂದೆಯೊಡನೆ ಮಾತಾಡುತ್ತ ಮುಂದಿನ ಕೋಣೆಯಲ್ಲಿ ಕುಳಿತಿದ್ದರು. ಅದರ ಪಕ್ಕದ ಕೋಣೆಯಲ್ಲಿಯೇ ಶಕುಂತಲೆಯೂ ಅಭ್ಯಾಸ ಮಾಡಲು ಕುಳಿತಿದ್ದಳು. ಅವರ ಸಂಭಾಷಣೆಯೆಲ್ಲ ಶಕುಂತಲೆಗೆ ಕೇಳಿಸುತ್ತಿತ್ತು. ಮಾತಾಡಲು ಬಂದವರು ದೊಡ್ಡ ಧನಿಕರು;—ಅವರು ಕೊಲ್ಹಾಪುರ ದರಬಾರದಿಂದ ಅಳಲೇಕಾಯಿಯ ಗುತ್ತಿಗೆ ತೆಗೆದುಕೊಂಡಿದ್ದರು; ತೊಗಲುಹದಗೊಳಿಸುವದಕ್ಕೆ ಅಗತ್ಯವಿದ್ದ ಪದಾರ್ಥವನ್ನು ಅಳಲೇಕಾಯಿಯಿಂದ ತಯಾರಿಸುವ ಕಾರಖಾನೆಯೊಂದನ್ನು ತೆರೆಯಬೇಕೆಂದು ಯೋಚಿಸಿದ್ದರು. ಅವರ ಈ ಉದ್ಯೋಗದಲ್ಲಿ ತಂದೆಯವರೂ ಕೂಡಿಕೊಳ್ಳಬೇಕೆಂದು

ಅವರ ಇಚ್ಛೆ. ಇದನ್ನೆಲ್ಲ ಶಕುಂತಲೆ ಅವರ ಸಂಭಾಷಣದ ಮೇಲಿಂದ ತಿಳಿದಳು. ಮತ್ತೆ ಮಾತಿನ ಭರದಲ್ಲಿ ಬಂದ ಆ ಗೃಹಸ್ಥರು ಹೇಳಿದರು,—"ನಿಮ್ಮಂಥವರು ಇಂಥ ಉದ್ಯೋಗದಲ್ಲಿ ಭಾಗ ವಹಿಸಲೇ ಬೇಕು. ವೇತನದ ಕೆಲಸ—ಅದರಲ್ಲಿಯೂ ದರಬಾರದ ಕೆಲಸ ನಿಮ್ಮಂಥವರಿಗೆ ಹೇಗೆ ಹೊಂದಬೇಕು ? ನೀವು ರಾಜೀನಾಮೆ ಕೊಟ್ಟದ್ದು ನನಗೇನೂ ಆಶ್ಚರ್ಯವೆನಿಸಲಿಲ್ಲ. ನಿಮ್ಮ ಪ್ರಾವೀಣ್ಯಕ್ಕೆ ಮನ್ನಣೆ ದರಬಾರದಿಂದ ದೊರೆಯುವದು........"

ಮುಂದಿನ ಮಾತಿನ ಕಡೆಗೆ ಶಕುಂತಲೆಯ ಲಕ್ಷ್ಯವಿರಲಿಲ್ಲ. ಗೂಢವಾಗಿದ್ದಂಥ ಯಾವದೇ ವಿಷಯ ಒಮ್ಮೆಲೇ ತಿಳಿದೊಡನೆ, ಮನುಷ್ಯ ಬೆಚ್ಚಿಬೀಳುವಂತೆ ಶಕುಂತಲೆಯೂ ಬೆಚ್ಚಿಬಿದ್ದಳು. ರಾಧಾನಗರಿಯನ್ನು ಬಿಟ್ಟು ಕೊಲ್ಹಾಪುರಕ್ಕೆ ಬಂದದ್ದು—ಮೋಟಾರ ಕೊಳ್ಳುವ ವಿಚಾರವನ್ನು ಬಿಟ್ಟುಕೊಟ್ಟದ್ದು,—ತಂದೆ ಮೇಲಿಂದ ಮೇಲೆ ಪುಣೆ ಮುಂಬಯಿಗೆ ಹೋಗಿಬರುತ್ತಿದ್ದುದು—ಇವೆಲ್ಲದರ ಕಾರಣ ಇದೇ ಆಗಿತ್ತೇ ಹಾಗಾದರೆ? ಹಣ ಗಳಿಸುವದಕ್ಕಾಗಿ ಅವರಿಗೆ ಎಷ್ಟು ಕಡೆಗೆ ಅಡ್ಡಾಡಬೇಕಾಗುತ್ತದೆ, ಎಷ್ಟು ಶ್ರಮ ಪಡಬೇಕಾಗುತ್ತದೆ—ಇದರ ವಿಚಾರವನ್ನು ನಾನೊಂದು ಸಲವೂ ಮಾಡಿರಲಿಲ್ಲವಲ್ಲ.

ಈ ಎಲ್ಲ ವಿಚಾರಗಳಿಂದ ಶಕುಂತಲೆಯ ಮನಸ್ಸಿಗೆ ನೋವಾಗಿತ್ತು; ಮೊದಲಿಗೆ ತಂದೆಯವರೊಡನಿದ್ದ ವರ್ತನದಲ್ಲಿಯೂ ಇದೀಗ ಕೊಂಚ ವ್ಯತ್ಯಾಸ ಕಂಡುಬರತೊಡಗಿತ್ತು. ಮೊದಲು ಅವರ ಬಗ್ಗೆ ಇದ್ದ ಅವಳ ಪ್ರೀತ್ಯಾಭಿಮಾನಗಳಿಗೆ ಮಿತಿಯೇ ಇರಲಿಲ್ಲ; ಆದರೆ ಈಗವಳ ಪ್ರೀತ್ಯಾಭಿಮಾನಗಳು ಅಲ್ಲಿಯೇ ನಿಲ್ಲಲಿಲ್ಲ. ಮನೆಯಲ್ಲಿಯ ಒಬ್ಬ ಹಿರಿಯ ವ್ಯಕ್ತಿಯಂತೆ ಅವಳೀಗ ಅವರ ಕಡೆಗೆ ಲಕ್ಷ್ಯಕೊಡುತ್ತಿದ್ದಳು. ಅವರ ಸುಖಕ್ಕಾಗಿ ತನ್ನಿಂದ ಶಕ್ಯವಿದ್ದಷ್ಟೂ ಯತ್ನಿಸುತ್ತಿದ್ದಳು. ಅವರು ಊರಿಗೆ ಹೋದರೆ ಶಕುಂತಲೆ ತಾನೇ ಅವರ ಚೀಲವನ್ನು ತುಂಬಿಡುತ್ತಿದ್ದಳು. ಹೊರಗೆ ಹೊರಟರೆ ಕೋಟು, ಬೂಟುಗಳನ್ನೆಲ್ಲ ಒರೆಸಿ ಸ್ವಚ್ಛ ಮಾಡಿಡುತ್ತಿದ್ದಳು. ಅವರ ಟೇಬಲ್ ಮೇಲಿನ ಕಾಗದ, ಪೆನ್ಸಿಲ ಇತ್ಯಾದಿ ವಸ್ತುಗಳನ್ನೆಲ್ಲ ಅಚ್ಚುಕಟ್ಟಾಗಿ ಇರಿಸುತ್ತಿದ್ದಳು. ತಂದೆಯ ಬಗ್ಗೆ ತಾನು ಲಕ್ಷ್ಯ ಪೂರೈಸಲೇ ಬೇಕೆಂದು ಅವಳಿಗೆನಿಸಿದ್ದರಿಂದ ಅವಳು ತಾನಾಗಿಯೇ ಇವನ್ನೆಲ್ಲ ಮಾಡ

ತೊಡಗಿದಳು. ಆದರೆ ತಂದೆಯಲ್ಲಿ ಮಾತ್ರ ತಮ್ಮ ಮಗಳು ತಮಗಾಗಿ ಎಷ್ಟೊಂದು ಪ್ರಯಾಸ ಪಡುತ್ತಿರುವಳಲ್ಲ ಎಂಬ ಭಾವನೆ ಬರದಂತೆ ನೋಡಿ ಕೊಂಡಳು. ಇದರಿಂದ 'ಅವಳಿದ್ದರೇ ನನ್ನ ಕೆಲಸವೆಲ್ಲ ಸರಿಯಾಗಿರುವದು' ಎಂದು ಅವಳ ಮೇಲೆಯೇ ಅವಲಂಬಿಸಿರುವ ಭಾವನೆಯೂ ತಂದೆಯವರಲ್ಲಿ ಬರಲಿಲ್ಲ. ಆದರೆ ಕಾರ್ಯರೂಪದಲ್ಲಿ ಅವಲಂಬಿಸಿರುವ ಪ್ರಸಂಗ ಬಂದೇ ಬರುತ್ತಿತ್ತು. ಊರಿಗೆ ಹೊರಡುವದಾದರೆ "ನನ್ನ ಚೀಲವನ್ನು ತುಂಬಿ ಕೊಡುವಿಯಲ್ಲವೇ?" ಎಂದು ಕೇಳುವದು, ಹೊರಗೆ ಹೊರಡುವಾಗ "ಹಾಂ, ........ಯಾವ ಕೋಟನ್ನು ಹಾಕಿಕೊಳ್ಳಲಿ?" ಎಂದು ಮತ್ತೆ ಅವಳನ್ನೇ ಪ್ರಶ್ನಿಸುವದು; ಮೇಜಿನ ಮುಂದೆ ತಮ್ಮ ಕೆಲಸದಲ್ಲಿ ತೊಡಗಿರುವಾಗ ಯಾವದಾದರೊಂದು ಕಾಗದ ಬೇಗ ಸಿಕ್ಕದಿದ್ದರೆ "ಶಕೂತಾಯಿ, ಇಲ್ಲಿ ಸ್ವಲ್ಪ ಬರುವಿಯಾ?" ಎಂದು ಅವಳನ್ನೇ ಕೂಗಿ ಕರೆದು ಅವಳಿಂದಲೇ ಆ ಕಾಗದವನ್ನು ಇಸಿದುಕೊಳ್ಳುವದು— ಇವೆಲ್ಲ ಅವರಿಗೆ ರೂಢಿಯಾಗಿ ಬಿಟ್ಟವು.

ತಂದೆ ಮಕ್ಕಳಲ್ಲಿ ಇದೀಗ ಅದೇನೋ ಒಂದು ಹೊಸ ವಾತ್ಸಲ್ಯವೇ ನಿರ್ಮಾಣವಾಗಿತ್ತು. ದಿನಗಳುರುಳಿದಂತೆ ಪರಸ್ಪರರ ಬಗ್ಗೆ ತಿಳುವಳಿಕೆ ಹೆಚ್ಚುತ್ತಲಿತ್ತು.

ಕಾರಖಾನೆ ತೆಗೆಯುವ ತಮ್ಮ ಉದ್ಯೋಗದಲ್ಲಿ ಶಕುಂತಲೆಯ ತಂದೆಯು ಸಹಕಾರವನ್ನು ಇಚ್ಛಿಸುತ್ತಿದ್ದ ಹಾತಕಣಂಗಲೆಯ ಆ ಮಿತ್ರರು ಇವರ ಮನೆಗೆ ಮೇಲಿಂದ ಮೇಲೆ ಬರುತ್ತಿದ್ದರು; ಇವರನ್ನೂ ತಮ್ಮ ತೋಟಕ್ಕೆ ಕರೆದೊಯ್ಯುತ್ತಿದ್ದರು. ಮತ್ತೆ ಬಂದಾಗೊಮ್ಮೆ, "ನಮ್ಮ ಗುಡಿಸಲನ್ನು ಶಕೂತಾಯಿಗೆ ಒಂದು ಸಲ ತೋರಿಸುವದಿದೆ." ಎಂದು ಅನ್ನುತ್ತಿದ್ದರು. ಅದಕ್ಕೆ ಶಕುಂತಲೆಯ ತಂದೆ "ಹಾಂ, ಗುಡಿಸಲಂತೆ! ಶಕೂತಾಯೀ, ನಾನಾಸಾಹೇಬರ ಮಾತು ಹೀಗೇ—ತಿಳಿಯಿತೇನು? ಅದು ಹೀಗೆ ನಾನಾ ಸಾಹೇಬ, ನಿಮ್ಮ ತೋಟಕ್ಕೆ ಬಂದು ಒಂದರ್ಧ ದಿನದಲ್ಲಿಯೇ ಮತ್ತೆ ಹಿಂದಿರುಗುವದೆಂದರೆ ಅದರಲ್ಲೇನು ಸ್ವಾರಸ್ಯ? ಹೋದ ಮೇಲೆ ಮೂರು ನಾಲ್ಕು ದಿನಗಳಾದರೂ ಇದ್ದರೆ..........; ಅದಕ್ಕೆಂದೇ ನಾನು ಅವಳನ್ನು ಕರೆತರುವದಿಲ್ಲ. ಅವಳ ಶಾಲೆಗೆ ನಾಲ್ಕಾರು ದಿನಗಳ ರಜೆ ದೊರೆತರೆ,

ನಾನೇ ಅವಳನ್ನು ಕರೆತರುತ್ತೇನೆ;....ಅಲ್ಲದೆ ನಿಮ್ಮ ಆಲೀಮನೆಯ ಸುಗ್ಗಿ ನಡೆದಾಗ ಬಂದರಂತೂ ಬಹಳ ಒಳ್ಳೆಯದು ” ಎಂದು ಹೇಳುತ್ತಿದ್ದರು.

“ ಆಲೀಮನೆ ಸುರುವಾದ ಮೇಲೆ ಶಕೂತಾಯಿಯನ್ನು ಕರೆದುಕೊಂಡು ಹೋಗುವದಿದ್ದೇ ಇದೆ ಬಿಡಿರಿ; ಆಗ ಶಾಲೆಗೆ ರಜೆ ಇರಲಿ ಬಿಡಲಿ; ಬಹಳವಾದರೆ ಮೂರು ನಾಲ್ಕು ದಿನ ಶಾಲೆ ತಪ್ಪಿಸಬೇಕಾಗುವದು ಇಷ್ಟೇ ಅಲ್ಲವೇ? ಎಂದು ನಾನಾಸಾಹೇಬರು ಅನ್ನುತ್ತಿದ್ದರು. ಹೀಗಾಗಿ ಆಲೀಮನೆಯ ಕೆಲಸ ಸುರುವಾದ ಮೇಲೆ ನಾನಾಸಾಹೇಬರು ನೆನಪು ಮಾಡಿಕೊಂಡು ಶಕುಂತಲೆಯನ್ನು ಕರೆದೊಯ್ದೇ ಬಿಟ್ಟರು ತಮ್ಮ ತೋಟಕ್ಕೆ.

ಕಬ್ಬಿನ ತೋಟವನ್ನು ಶಕುಂತಲೆ ದೂರದಿಂದ ನೋಡಿದ್ದಳು. ಆದರೆ ತೋಟಕ್ಕೇ ಹೋಗಿ ಅಲ್ಲಿಯ ಜೀವನದಲ್ಲಿ ಒಂದಾಗಿ ಅವಳು ದಿನಗಳನ್ನು ಕಳೆದಿರಲಿಲ್ಲ. ಆ ಅನುಭವದ ಆನಂದ ಅವಳಿಗೆ ದೊರೆತಿರಲಿಲ್ಲ. ನಾನಾಸಾಹೇಬರು ತಾವಿರುವ ಮನೆಯನ್ನು ‘ ಗುಡಿಸಲು ’ ಎಂದು ಕರೆದಿದ್ದರು. ಆದರೆ ಪಟ್ಟಣದಲ್ಲಿ ಕೂಡ ಎದ್ದು ಕಾಣುವಂಥ ಎರಡಂತಸ್ತಿನ ಸುಂದರವಾದ ಬಂಗಲೆ ಅವರದಿತ್ತು. ಈ ಬಂಗಲೆಯೊಂದನ್ನು ಬಿಟ್ಟರೆ, ಸುತ್ತುಮುತ್ತಲಿನ ಜೀವನವೆಲ್ಲ ಒಕ್ಕಲಿಗರದು. ಬಂಗಲೆಗೆ ಹೊಂದಿದ್ದ ಬೈಲಿನಲ್ಲಿ ಕುರಿ, ಆಡು, ಕೋಳಿ, ಬೇರೆ ಬೇರೆ ಜಾತಿಯ ನಾಲ್ಕೆಂಟು ನಾಯಿಗಳು ಕಂಡುಬರುತ್ತಿದ್ದವು; ಆದರ ಪಕ್ಕದಲ್ಲಿಯೇ ಪೂರ್ವಕ್ಕೆ ಒಂದು ಸಣ್ಣ ತೋಟವಿತ್ತು; ಹೂವಿನ ಗಿಡಗಳನ್ನು ಅಂದವಾಗಿ ಅದರಲ್ಲಿ ಹಚ್ಚಿರಲಿಲ್ಲ. ಹಣದ ಕಡೆಗೆ ವಿಶೇಷ ಲಕ್ಷ್ಯ ಕೊಡದೆ, ಬೇರೆ ಬೇರೆ ಜಾತಿಯ ಅದೆಷ್ಟೋ ಗಿಡಗಳನ್ನು ಅದರಲ್ಲಿ ಹಚ್ಚಿದ್ದರು. ಈ ತೋಟಕ್ಕೆ ಹೊಂದಿ ಒಂದು ಬದಿಗೆ ದಟ್ಟಾದ ಮಾವಿನ ತೋಪೊಂದು ಕಾಣುತ್ತಿತ್ತು. ಅದರ ಮತ್ತೊಂದು ಬದಿಗೆ ಕಾಯಿಪಲ್ಲೆಗಳ ಒಂದು ದೊಡ್ಡ ತೋಟವಿದ್ದು, ಅದರ ಮಧ್ಯದಲ್ಲಿಯೇ ಒಂದು ಬಾವಿಯಿತ್ತು. ಬಂಗಲೆಯ ಪಶ್ಚಿಮಕ್ಕೆ ಹತ್ತಿಪ್ಪತ್ತು ಗುಡಿಸಲುಗಳು ಕಾಣುತ್ತಿದ್ದವು. ಅವುಗಳನ್ನು ದಾಟಿದ ಮೇಲೆ ದಕ್ಷಿಣೋತ್ತರವಾಗಿ ಹಬ್ಬಿದ ಕಬ್ಬಿನ ತೋಟ. ಕಬ್ಬು ಪೂರ್ಣ ಎತ್ತರವಾಗಿ ಬೆಳೆದ ಮೇಲೆ, ಬಂಗಲೆಯ ಆವಾರದಲ್ಲಿ ನಿಂತು ನೋಡಿದರೆ, ಕೊಂಚ ಗುಲಾಬಿ, ನೀಲಿ ಬಣ್ಣದ ಛಾಯೆಯಿಂದ ಶೋಭಿಸುವ ಕಬ್ಬಿನ ಶುಭ್ರವಾದ ಹೂಗಳ ದಟ್ಟಣೆಯೇ ದೃಷ್ಟಿ ಹರಿ

ಯುವ ವರೆಗೂ ಕಾಣಿಸುತ್ತಿದ್ದಿತು !

ಶಕುಂತಲೆ ತನ್ನ ತಂದೆಯೊಡನೆ ನಾನಾಸಾಹೇಬರ ತೋಟಕ್ಕೆ ಬಂದಾಗ ಆಲೀಮನೆಯ ಕೆಲಸ ಪ್ರಾರಂಭವಾಗಿ ಮೂರು ನಾಲ್ಕು ದಿನಗಳಾಗಿದ್ದವು. ದಕ್ಷಿಣದ ತುದಿಯಲ್ಲಿದ್ದ ಕಬ್ಬುಗಳನ್ನೆಲ್ಲ ಕಿತ್ತಿ ಬೆಲ್ಲವನ್ನು ತಯಾರಿಸಿಯಾಗಿತ್ತು; ಆ ಸ್ಥಳವೆಲ್ಲ ಈಗ ಬರಿಬರಿದಾಗಿ ಕಾಣುತ್ತಿತ್ತು. ಅದರೀಚೆಗೆ ಆಲೀಮನೆಗೆ ಒಯ್ಯುವದಕ್ಕಾಗಿ ಕಬ್ಬಿನ ಹೊರೆಗಳನ್ನು ಕಟ್ಟಿಟ್ಟಿದ್ದರು. ಆಲೀಮನೆಯಲ್ಲಿ ರಾತ್ರಿ ಹಗಲು ಒಂದೇ ಸವನೆ ಕೆಲಸ ನಡೆದೇ ಇತ್ತು. ಐವತ್ತಕ್ಕೆ ಮಿಕ್ಕಿ ಜನರು ಅಲ್ಲಿ ದುಡಿಯುತ್ತಿದ್ದರು. ಎಲ್ಲಿ ನಿಂತು ನೋಡಿದರೂ ಒಕ್ಕಲಿಗರ ಕಷ್ಟಸಹಿಷ್ಣುತೆಯೇ ಶಕುಂತಲೆಯ ಕಣ್ಣಿಗೆ ಕಾಣುತ್ತಿತ್ತು. ಅದನ್ನು ಕಂಡು ಅವಳಿಗೆ ಆಶ್ಚರ್ಯ! ಎತ್ತರವಾಗಿ ಬೆಳೆದ ಕಬ್ಬುಗಳನ್ನು ಒಂದೇ ಹೊಡೆತಕ್ಕೆ ಕೆಡವುತ್ತ ಹೋಗುವ ಒಕ್ಕಲಿಗರನ್ನು ಅವಳು ಎಷ್ಟೋ ಹೊತ್ತಿನ ವರೆಗೆ ಆಶ್ಚರ್ಯದಿಂದ ನೋಡುತ್ತ ನಿಲ್ಲುತ್ತಿದ್ದಳು. ಸಿದ್ಧವಾದ ಬೆಲ್ಲದ ಪೆಂಟಿಗಳನ್ನು ಕೊಲ್ಹಾಪುರಕ್ಕೆ ಒಯ್ಯಲು ಎತ್ತುಗಳನ್ನು ಚಕ್ಕಡಿಗಳಿಗೆ ಹೂಡುತ್ತಿದ್ದರು; ಆ ಪುಷ್ಟವಾದ ಎತ್ತುಗಳ ಕಡೆಗೂ ಶಕುಂತಲೆ ಹೀಗೇ ನೋಡುತ್ತಿದ್ದಳು. ಉಳಿದ ಎತ್ತುಗಳಿಗಿಂತ ಈ ಎತ್ತುಗಳು ತಮ್ಮ ಬಾಲದಿಂದ ಮೆಯನ್ನು ಹೆಚ್ಚಾಗಿ ಜಾಡಿಸಿಕೊಳ್ಳುವವೆಂದು ಅವಳಿಗೆ ಕಂಡುಬಂದೀತೇನೊ. ಅವಳು ತನ್ನ ಆಶ್ಚರ್ಯವನ್ನು ನಾನಾಸಾಹೇಬರ ಎದುರು ವ್ಯಕ್ತಮಾಡಿಯೂ ತೋರಿಸಿದಳು. ಅದಕ್ಕೆ ನಾನಾಸಾಹೇಬರು "ಯಾವಾಗಲೂ ಆಲೀಮನೆಯಲ್ಲಿಯೇ ಇರುವದರಿಂದ, ಬೆಲ್ಲದ ಕಣಗಳು ಅವುಗಳ ಮೈಗೆ ಅಂಟಿಕೊಂಡಿರುತ್ತವೆ. ಇದರಿಂದ ಅವಕ್ಕೆ ನೊಣಗಳ ಕಾಟ ಬಹಳವಾಗುತ್ತದೆ." ಎಂದು ಅದಕ್ಕೆ ಕಾರಣವನ್ನು ಹೇಳಿದರು. ಇದನ್ನು ಕೇಳಿ ಅವಳಿಗೆ ಬಹಳ ವಿಚಿತ್ರವೆನಿಸಿತು. "ಹುಂ, ಇದೇನು ವಿಚಿತ್ರ!" ಎಂದು ತನ್ನಷ್ಟಕ್ಕೆ ಉದ್ಗಾರವನ್ನು ಕೂಡ ತೆಗೆದಳು. ನೋಡಿದ್ದೆಲ್ಲ ಅವಳಿಗೆ ಹೊಸದಾಗಿ ಕಾಣುತ್ತಿತ್ತು. ಅದೇನೆಂದು ತಿಳಿದುಕೊಳ್ಳುವ ಆಶೆ ಅವಳಲ್ಲಿ ಹುಟ್ಟುತ್ತಿತ್ತು. ಪ್ರತ್ಯಕ್ಷ ಆಲೀಮನೆಯ ದೃಶ್ಯ ಮನಸೆಳೆಯುವಂತಿತ್ತು. ರಾತ್ರಿಯ ವೇಳೆಯಲ್ಲಂತೂ ಅದಕ್ಕೊಂದು ನಾಟಕದ ಸ್ವರೂಪ ಬಂದಂತೆ ಶಕುಂತಲೆಗೆನಿಸುತ್ತಿತ್ತು. ಉರುವಲಕ್ಕಾಗಿ ಒಟ್ಟಿದ ಕಬ್ಬಿನ ಸಿಪ್ಪೆಯ ಆ ಗುಡ್ಡ, ರಸದ ಕೊಪ್ಪರಿಗೆಗಳ ಕೆಳಗೆ

ಹರಿವೊಲೆಗಳಲ್ಲಿ ಉರಿಯುತ್ತಿದ್ದ ಆ ಬೆಂಕಿ, ಸಿಪ್ಪೆಯ ರಾಶಿಗಳಿಂದ ಸಿಪ್ಪೆಗಳನ್ನು ಹರಿಯೊಲೆಯಲ್ಲಿ ಹಾಕಲು, ಆ ಒಲೆಯ ಹತ್ತಿರವೇ ನಿಂತಿದ್ದ ಆ ಮನುಷ್ಯನ ಭೀಕರ ಮುಖ, ಮೇಲೆ ಕಾವಲಿಗಳಲ್ಲಿ ಕುದಿಯುತ್ತಿದ್ದ ರಸದ ಉಗಿ, ರಸ ವನ್ನು ಸುರುವುವ ದಾರಿಯನ್ನು ನೋಡುತ್ತ ಅದರ ಸುತ್ತಲು ನಿಂತಿದ್ದ ಜನ, ಕುದಿಯುವ ರಸದಲ್ಲಿ ಕೈ ಎದ್ದಿ ಅದು ಗುಳಿಗೆಯಾಗಿದೆಯೋ ಇಲ್ಲವೋ ಎಂದು ಹೇಳುವ, ಜಾದೂಗಾರನಂತೆ ಕಾಣಿಸಿದರೂ, ವೇಷಭೂಷಣದಲ್ಲಿ ಭೂಪ ನಂತೆ ತೋರುವ ಆ 'ಸಿದಬಾ' ಕಾವಲಿಯನ್ನು ಮೆಲ್ಲಗಿಳಿಸಿ ಚೌಕಿನಲ್ಲಿ ಕೆಳಗೆ ಸುರಿಯುವ ವೇಳೆಗೆ ಆಗುವ "ಶ್ರೀಗುರು ದೇವದತ್ತ" ಜಯಘೋಷ, ಕಬ್ಬು, ಬೆಲ್ಲ, ಕೆನೆಬೆಲ್ಲ, ನೆಲಗಡಲೆ ಇವುಗಳ ಫಲಾಹಾರವನ್ನು ಸತತವಾಗಿ ನಡೆಸಿದ ಊರಲ್ಲಿಯ ಚಿಕ್ಕ ಚಿಕ್ಕ ಹುಡುಗರು, ಅವರೊಂದಿಗೆ ಸೇರಿದ ದೊಡ್ಡ ವರು ಮತ್ತೆ ಈ ಎಲ್ಲ ದೃಶ್ಯಕ್ಕೆ ಹಿನ್ನೆಲೆಯಾಗಿ ಕೂಗುತ್ತಿರುವ ಎಂಜಿನದ "ಫಕ್ ಫಕ್, ಫಕ್ ಫಕ್" ಎಂಬ ಸಪ್ಪಳ—ಈ ಎಲ್ಲ ಸಂಗತಿಗಳು ಶಕುಂತಲೆಯ ಮನಸ್ಸನ್ನು ಅವಳಿಗೆ ತಿಳಿಯದಂತೆಯೇ ಸೆಳೆದವು. ಇದನ್ನೆಲ್ಲ ನೋಡುತ್ತ ಅವಳು ಎಷ್ಟೊತ್ತು ಕುಳಿತಿದ್ದಳೋ! ಅವಳಿಗೆ ಆಕಳಿಕೆ, ತೂಕ ಡಿಕೆಗಳನ್ನು ತಡೆಯುವದು ಅಶಕ್ಯವೆಂದೆನಿಸಿದಾಗ, 'ಎಷ್ಟು ಹೊಡೆದಿದೆ?' ಎಂದು ಯಾರನ್ನೋ ಕೇಳಿದಳು. ಮೋಡದಲ್ಲಡಗಿದ್ದ ಚಂದ್ರನ ಕಡೆಗೆ ನೋಡಿ ಒಬ್ಬ ಒಕ್ಕಲಿಗ ಹೇಳಿದ "ಎರಡು ಹೊಡೆದಿರಬಹುದು."

ಮರುದಿನ ಮುಂಜಾನೆ ನಾನಾಸಾಹೇಬರು "ಶಕೂತಾಯಿಯನ್ನು ಕರೆದು ಕೊಂಡು ನಾವೀಗ ಮಾವಿನ ತೋಪಿನ ಕಡೆಗೆ ಹೋಗೋಣ" ಎಂದು ಅವಳ ತಂದೆಗೆ ಹೇಳಿ, ಎಲ್ಲರನ್ನೂ ಕರೆದುಕೊಂಡು ಹೊರಟರು. ಅಲ್ಲಿ ಹೋದ ಬಳಿಕ ಮಾವಿನ ಗಿಡಗಳನ್ನೂ, ಕಾಯಿಪಲ್ಯಗಳನ್ನೂ ನೋಡುವದರಲ್ಲಿ ಶಕುಂತಲೆ ಎಷ್ಟೋ ವೇಳೆಯನ್ನು ಕಳೆದಳು; ಬಳಿಕ ಆ ಬಾವಿಯ ಬಳಿಗೆ ಬಂದಳು. ಇಷ್ಟರಲ್ಲಿ ನೆರೆಯ ಹೊಲದಿಂದ ಯಾರೋ ತಮ್ಮನ್ನು ಕೂಗಿ ದರೆಂದು ನಾನಾಸಾಹೇಬರು ಮತ್ತು ಶಕುಂತಲೆಯ ತಂದೆ ಆ ಕಡೆಗೆ ಹೊರಟರು. ಶಕುಂತಲೆ ತಿರುಗಾಡಿ ದಣಿದದ್ದರಿಂದ, "ನಾನಿಲ್ಲಿಯೇ ಬಾವಿಯ ಕಟ್ಟೆಯ ಮೇಲೆ ಕುಳಿತಿರುವೆ; ನೀವು ಹೋಗಿ ಬರ್ರಿ." ಎಂದು ಹೇಳಿ ತಾನು ಅಲ್ಲಿಯೇ ಗಿಡದ ನೆರಳಲ್ಲಿ ಬಾವಿಯ ದಂಡೆಯ ಮೇಲೆ

ಕುಳಿತಳು.

ನಾಲ್ಕೂ ಬದಿಗೆ ಗಚ್ಚು ಕಲ್ಲಿನಿಂದ ಒಳ್ಳೇ ಅಚ್ಚುಕಟ್ಟಾಗಿ ಆ ಬಾವಿಯನ್ನು ಕಟ್ಟಿದ್ದರು. ಬಾವಿಯಲ್ಲಿ ಕೆಳಗಿಳಿಯಲು ಮೆಟ್ಟಿಲುಗಳೂ ಚೆನ್ನಾಗಿದ್ದವು; ಅವುಗಳಲ್ಲಿ ಏಳೆಂಟು ಮಾತ್ರ ಮೇಲೆ ಕಾಣುತ್ತಿದ್ದವು. ಈ ಕಾಲದಲ್ಲಿಯೂ ಬಾವಿ ತುಂಬಿದೆಯಲ್ಲ ಎಂದು ಶಕುಂತಲೆಗೆ ಆಶ್ಚರ್ಯ! ನೀರು ಕಪ್ಪಾಗಿತ್ತು! 'ಬಾವಿಯಲ್ಲಿ ನೀರು ಮೇಲಂಚಿನ ವರೆಗೆ ಇರಬೇಕು; ಮಧ್ಯಾಹ್ನದಲ್ಲಿ ಗಾಳಿಯೆಲ್ಲ ನಿಂತು ನೀರು ಶಾಂತವಾಗಿರಬೇಕು. ಇಂತಹ ವೇಳೆಯಲ್ಲಿ ಮೇಲೆ ಹಬ್ಬಿದ ಗಿಡದ ಟೊಂಗೆಗಳ ಮಧ್ಯದಿಂದ ಸೂರ್ಯಪ್ರಕಾಶವು ಕೆಳಗೆ ಕಪ್ಪು ನೀರಿನ ಮೇಲೆ ಬೀಳುತ್ತಿದ್ದರೆ, ಅದೆಂತಹ ಹೊಂಬಣ್ಣದಿಂದ ಮಿನುಗುತ್ತಿರಬೇಕು!' ಈ ಕಲ್ಪನೆ ಅವಳಲ್ಲಿ ಇದೇ ವೇಳೆಗೆ ಬರಲಿಕ್ಕೂ ಕಾರಣವಿತ್ತು. ಕಪ್ಪಲಿ ಹೊಡೆಯುವದು ಸತತ ನಡೆದೇ ಇತ್ತು; ಅಲ್ಲದೆ ಹತ್ತು ಹದಿನೈದು ಹುಡುಗರು ನೀರಿನಲ್ಲಿ ಧುಮ್ಮಿಕ್ಕಿ ಈಜುತ್ತಿದ್ದರು; ಇದರಿಂದ ನೀರಿನ ಸಳಸಳ ಸಪ್ಪಳ ನಡೆದೇ ಇತ್ತು. ಒಬ್ಬರನ್ನೊಬ್ಬರು ನೀರಿನಲ್ಲಿ ನೂಕಿಸುವದು, ನೀರಿನಲ್ಲಿಯೇ ಮುಟ್ಟಾಟವಾಡುವದು, ಇಲ್ಲವೆ ಮೇಲೆ ಓಡುತ್ತ ಹೋಗಿ, ದಂಡೆಯ ಮೇಲಿಂದ ಇಲ್ಲವೆ ಕಪ್ಪಲಿಯ ಕಟ್ಟೆಯ ಮೇಲಿಂದ ಕೆಳಗೆ ಜಿಗಿಯುವದು, ಒಬ್ಬರೊಬ್ಬರ ಹೆಸರನ್ನು ಹಿಡಿದು ಕೂಗುವದು, ಬಯ್ಯುವದು—ಇದನ್ನೆಲ್ಲ ಆ ಹುಡುಗರು ಒಂದೇ ಸವನೆ ನಡೆಸಿಯೇ ಬಿಟ್ಟಿದ್ದರು. ಅವರೊಳಗಿನ ಒಬ್ಬ ಹುಡುಗ ಮಾತ್ರ ಚಿಕ್ಕವನಿದ್ದ; ಬಹಳವಾದರೆ ಹತ್ತು ವರ್ಷದವನಿರಬಹುದು. ಆದರೆ ಅವನು ಈಜುವದು ಮಾತ್ರ ಮೀನಿನಂತಿತ್ತು. ಈಗಿಲ್ಲಿ ಕಾಣಿಸಿದ ಅನ್ನುವಷ್ಟರಲ್ಲಿ ನೀರಿನಲ್ಲಿ ಮುಳುಗಿರುತ್ತಿದ್ದ; ಮತ್ತೆ ನೋಡುವಷ್ಟರಲ್ಲಿ ಮೇಲಕ್ಕೆದ್ದಿರುತ್ತಿದ್ದ.

ಆ ಚಿಕ್ಕ ಹುಡುಗನ ಚಲನವಲನಗಳನ್ನು ಶಕುಂತಲೆ ನಟ್ಟದೃಷ್ಟಿಯಿಂದ ನೋಡುತ್ತ ಕುಳಿತಿದ್ದಳು. ಅಷ್ಟರಲ್ಲಿಯೇ ಯಾರೋ ಅವಳನ್ನು ಕೇಳಿದರು, "ಈಸಲಿಕ್ಕೆ ಬರುವದಿಲ್ಲವೇ ?"

ದಂಡೆಯ ಮೇಲೆ ಕುಳಿತವಳು ತಾನೊಬ್ಬಳೇ ಎಂದು ಅವಳ ಭಾವನೆಯಾಗಿತ್ತು. ಅದಕ್ಕಾಗಿ ಆ ಪ್ರಶ್ನೆಯನ್ನು ಕೇಳುತ್ತಲೇ ಅವಳು ಬೆಚ್ಚಿಬಿದ್ದು ತಲೆಯನ್ನು ಮೇಲಕ್ಕೆತ್ತಿದಳು. ಇಬ್ಬರು ತರುಣರು ಅವಳ ದೃಷ್ಟಿಗೆ ಬಿದ್ದರು.

ಅವರಲ್ಲಿ ಶಕುಂತಲೆ ಮೊದಲು ಯಾರನ್ನು ನೋಡಿದಳೋ, ಅವನನ್ನು ಮಾತು ಅವಳು ಇದುವರೆಗೆ ಎಲ್ಲಿಯೂ ನೋಡಿರಲಿಲ್ಲ; ಅದರಿಂದ ಆಶ್ಚರ್ಯದ ಸುಳಿ ಯೊಂದು ಅವಳ ಮುಖದಲ್ಲಿ ಮೂಡಿತು; ಆದರೆ ಆ ಎರಡನೆಯ ತರುಣ ನನ್ನು ನೋಡುತ್ತಲೇ ಆ ಆಶ್ಚರ್ಯದ ಸುಳಿವು ಹೇಳಕೇಳದೆ ಮಾಯ ವಾಯಿತು. ತನ್ನನ್ನು ಪ್ರಶ್ನಿಸಿದವನು ಇವನೇ ಇರಬೇಕೆಂದು ಅವಳಿಗೆನಿಸಿತು; ಅವಳ ಮುಖದಲ್ಲಿ ಮಂದಹಾಸ ಮೂಡಿತು; ಕಣ್ಣುಗಳು ಮಿಸುಗಿದವು. ಅವನ ಹೆಸರೇನೋ ಅವಳಿಗೆ ಒಮ್ಮೆಲೆ ನೆನಪಾಗಲಿಲ್ಲ. "ಶಾಬಾಸ ಪದ್ಮಾಕರ," "well done ಸೊಹನಿ" ಎಂದು ಕೂಗಿದ್ದು ಮಾತ್ರ ಅವಳ ನೆನಪಿಗೆ ಬಂತು. ಆಗವಳು ಮುಕ್ತ ಮನಸ್ಸಿನಿಂದ ನಕ್ಕಳು. "ಈಜಲು ಬರುವ ದಿಲ್ಲವೇ ?" ಎಂಬ ಅವನ ಪ್ರಶ್ನೆಗೆ ತಾನಿನ್ನೂ ಉತ್ತರವನ್ನೇ ಕೊಟ್ಟಿಲ್ಲ ಎಂಬುದು ಫಕ್ಕನೆ ನೆನಪಾಗಿ "ಬರುವದಿಲ್ಲ" ಎಂದು ಹೇಳಲು ಗೋಣ ಲ್ಲಾಡಿಸಿದಳು.

ಪದ್ಮಾಕರನು ನಕ್ಕು ಮತ್ತೆ ಕೇಳಿದ, "ಕಲಿಸಿದರೆ ಕಲಿಯುವ ಇಚ್ಛೆ ಯಿದೆಯೋ ಹಾಗಾದರೆ ?" ಅವಳು ಗೊಂದಲದಲ್ಲಿ ಬಿದ್ದಳು. ಆದರೂ ಏನೋ ಉತ್ತರ ಕೊಡುವದೆಂದು ಅಸ್ಪಷ್ಟವಾಗಿ ಹೇಳಿದಳು, "ತಂದೆಯವರು ಒಪ್ಪಿಗೆ ಕೊಟ್ಟರೆ........"

ಮರುದಿನ ಅವಳು ಈಜಲು ಕಲಿಯತೊಡಗಿದಳು.

ಪದ್ಮಾಕರನ ಸ್ವಭಾವದಲ್ಲಿ ಪರಸ್ಪರ ವಿರೋಧೀ ಗುಣಗಳು ಬೆರೆತ ದ್ದನ್ನು ಶಕುಂತಲೆ ಕಂಡುಕೊಂಡಳು; ಅಂತೂ ಅವನ ಸ್ವಭಾವದ ಆಳವೇ ಅವಳಿಗೆ ಹತ್ತದಾಯಿತು. ಮೊದಲ ಸಲ ಬಾವಿಯ ಮೇಲೆ ಭೆಟ್ಟಿಯಾದಾಗ ಅವನಾಗಿಯೇ ತನ್ನ ಗುರುತು ಹಿಡಿದು ಮಾತನಾಡಿಸಿದ್ದನ್ನು ಕಂಡು ಶಕುಂ ತಲೆ, ಅವನು ಸ್ವಭಾವದಿಂದ ತುಂಟನಾಗಿರಬೇಕೆಂದು ನೆನೆದಳು. ಆದರೆ ದಿನಗಳು ಕಳೆದಂತೆ ಅವಳ ಈ ತರ್ಕ ಸರಿಯಾಗಿದೆಯೆನಿಸಲಿಲ್ಲ. ಒಮ್ಮೊಮ್ಮೆ ಅವನು ತೀರ ಗಂಭೀರನಾಗಿ ಬಿಡುತ್ತಿದ್ದ; ನೋಡುವವರಿಗೆ ಇವನು ಮಾತ ನ್ನಾದರೂ ಆಡುವನೋ ಇಲ್ಲವೋ ಎಂದೆನಿಸುತ್ತಿತ್ತು. ವಿಶೇಷ ಪರಿಚಯ ವಿಲ್ಲದವರೊಡನೆಯೂ ಕೂಡ ಒಂದೊಂದು ಸಲ ಅವನು ಒಳ್ಳೇ ಆವೇಶದಿಂದ ವಾದಿಸುತ್ತಿದ್ದ. ವಾದದ ಭರದಲ್ಲಿ 'ನಾನವರ ಮನವನ್ನೆಲ್ಲಿ ನೋಯಿಸು

ತ್ತೀನೋ' ಎಂದು ಕೂಡ ವಿಚಾರ ಮಾಡದೆ ಏನನ್ನಾದರೂ ಮಾತಾಡಿಬಿಡು ತ್ತಿದ್ದ. ತಂದೆಯವರಿಗೆ ಮತ್ತು ನಾನಾಸಾಹೇಬರಿಗೆ ಶಕುಂತಲೆ ಮೊದಲ ಸಲ ಅವನ ಗುರುತನ್ನು ಮಾಡಿಕೊಟ್ಟಾಗ, ಅವನನ್ನು ನೋಡಿ ನಾನಾ ಸಾಹೇಬರು ತಂದೆಯವರಿಗೆ ಹೇಳಿದರು "ಇವರನ್ನು ನಾನು ಪ್ರತ್ಯಕ್ಷ ನೋಡು ವದು ಈಗಲೇ ಆದರೂ, ಇವರ ಹೆಸರನ್ನು ನಾನು ಕೇಳಿದ್ದೇನೆ. ಈ ಭಾಗದ ಹಳ್ಳಿಗಳಲ್ಲೆಲ್ಲ ಅಡ್ಡಾಡಿ ಒಕ್ಕಲಿಗರಲ್ಲಿ ಜಾಗೃತಿಯನ್ನುಂಟು ಮಾಡುವದೇ ಇವರ ಮುಖ್ಯ ಕೆಲಸ; ಅಲ್ಲವೇ ?" ಪದ್ಮಾಕರನು ವಿನಯದಿಂದಲೋ ಏನೋ ಅನ್ನುವಂತೆ ಸುಮ್ಮನೆ ಇದ್ದ. ಆದರೆ ನಾನಾಸಾಹೇಬರು ಅಂದು ರಾತ್ರಿ ಅವನನ್ನು ತಮ್ಮಲ್ಲಿಯೇ ಊಟಕ್ಕೆ ಬರಹೇಳಿದರು. ಅವನೂ ಅದಕ್ಕ ಒಪ್ಪಿಕೊಂಡನು. ರಾತ್ರಿ ಊಟಕ್ಕೆ ಬಂದಾಗ ಮಾತಿಗೆ ಮಾತು ಹೊರಟು ಧನವಂತರಾದ ಒಕ್ಕಲಿಗರು ಬಡ ಒಕ್ಕಲಿಗರನ್ನು ಹೇಗೆ ಮೋಸಗೊಳಿಸು ತ್ತಾರೆ ಎಂಬುದರ ಬಗ್ಗೆ ತನ್ನ ಅನುಭವಗಳನ್ನು ಪದ್ಮಾಕರನು ಹೇಳತೊಡಗಿ ದನು. ನಾನಾಸಾಹೇಬರು ಅವನ ಈ ಹೇಳಿಕೆಗೆ ಒಪ್ಪದೆ ಪ್ರತಿವಾದಿಸತೊಡ ಗಿದರು. ಅದನ್ನು ಕಂಡು ಪದ್ಮಾಕರನು ಕೊಂಚ ಆವೇಶದಲ್ಲಿಯೇ ಹೇಳಿದ "ನೀವು ನನ್ನ ಹೇಳಿಕೆಯನ್ನು ಒಪ್ಪುವದಿಲ್ಲ, ಎಂಬುದು ನನಗೆ ಗೊತ್ತೇ ಇದೆ. ಯಾಕಂದರೆ ಬಡ ಒಕ್ಕಲಿಗರನ್ನು ನುಂಗಿ ನೀರು ಕುಡಿಯುವಂಥ ಧನವಂತ ಒಕ್ಕಲಿಗರಲ್ಲಿ ನೀವೂ ಒಬ್ಬರು. ಬಡವರ ದುಃಖ ನಿಮಗೆ ಕಾಣು ವದಿಲ್ಲ; ಕಾಣಿಸಿದರೂ ಕಾಣಿಸಿಲ್ಲವೆಂಬ ಸೋಗು ಬೇರೆ. ಸರಕಾರ ಮತ್ತು ಒಕ್ಕಲಿಗರಲ್ಲಿ ತಿಕ್ಕಾಟ ಒಂದು ವೇಳೆ ನಡೆದರೆ—ಇನ್ನು ನಾಲ್ಕೈದು ವರ್ಷ ಗಳಲ್ಲಿ ಅದು ನಿಶ್ಚಿತವಾಗಿ ಪ್ರಾರಂಭವಾಗುವದಿದೆ—ನೀವು ಒಕ್ಕಲಿಗರ ಪಕ್ಷ ವನ್ನು ವಹಿಸದೆ ಸರಕಾರದ ಪಕ್ಷವನ್ನೇ ವಹಿಸುವಿರಿ. ಯಾವ ರೀತಿಯಿಂದ ಲಾದರೂ ಸರಿ, ನಿಮ್ಮ ದೊಡ್ಡ ಆಸ್ತಿಗೆ ಧಕ್ಕೆ ತಗಲದಂತೆ ನೋಡಿಕೊಳ್ಳು ವಿರಿ........"

ಅವನ ಮಾತುಗಳನ್ನು ಕೇಳಿ ನಾನಾಸಾಹೇಬರು ತಡೆದುಕೊಳ್ಳಲಾರದೆ ಸಿಟ್ಟಿಗೆದ್ದು ಏನಾದರೂ ಮಾತಾಡಿಬಿಡುವರೇ ಎಂದು ಶಕುಂತಲೆ ಗಾಬರಿ ಯಾದಳು.

ಆದರೆ ನಾನಾಸಾಹೇಬರು ಸಿಟ್ಟಿಗೇಳಲಿಲ್ಲ; ಶಕುಂತಲೆಯ ತಂದೆಯ

ಕಡೆಗೆ ಹೊರಳಿ ಹೇಳತೊಡಗಿದರು “ ನೋಡಿದಿರಾ ಭಾವೂಸಾಹೇಬ, ಎಷ್ಟು ಸ್ಪಷ್ಟವಾಗಿವೆ ಇವರ ಮಾತು. ಆದರೆ ಪದ್ಮಾಕರ, ನಾನು ನಿಮಗೀಗ ಇಷ್ಟೇ ಹೇಳುತ್ತೇನೆ, ನೀವು ಹೇಳಿದಂತೆ ತಿಕ್ಸಾಟ ಒಂದು ವೇಳೆ ನಿಜವಾಗಿಯೇ ಪ್ರಾರಂಭವಾದರೆ—ನಮ್ಮ ಮಾತಂತೂ ಇರಲಿ—ಬಡ ಒಕ್ಕಲಿಗರು ಕೂಡ ಇದರಲ್ಲಿ ಎಷ್ಟು ಧೈರ್ಯದಿಂದ ಭಾಗ ವಹಿಸುವರೆಂಬುದು ಸಂಶಯಾಸ್ಪದವೇ. ”

“ ತಾವು ಹೇಳುವದು ನಿಜವಿದೆ. ಹಳ್ಳಿಗಳಲ್ಲೆಲ್ಲ ಅಡ್ಡಾಡಿದರೆ, ಒಕ್ಕಲಿಗರಲ್ಲಿ ಕೇವಲ ದಾರಿದ್ರ್ಯವಿಷ್ಟೇ ಅಲ್ಲ, ಅಂಜಿಕೆಯೂ ಇದ್ದುದು ಕಂಡುಬರುವದು. ಸಂಸ್ಥಾನಕ್ಕೆ ಒಂದು ಸಾಮಾನ್ಯ ಅರ್ಜಿ ಮಾಡಿಕೊಳ್ಳಬೇಕಾದಾಗ ಅದರ ಮೇಲೆ ಹೆಬ್ಬಟ್ಟಿನ ಗುರುತು ಮಾಡುವದೆಂದರೂ ಕೂಡ ಅವನಲ್ಲಿ ನಡುಕ ಹುಟ್ಟುತ್ತದೆ. ”

ನಾನಾಸಾಹೇಬರು ಮುಂದುವರಿದರು, “ ನಾನನ್ನುವದಾದರೂ ಏನು? ಜನರ ಜಮೀನುಗಳನ್ನೆಲ್ಲ ಕಸಿದುಕೊಂಡರು, ಅಡವಿಯನ್ನು ಕಾಯ್ದಿಟ್ಟರು, ಇದೆಲ್ಲ ನಿಜ. ಶಾಹೂ ಮಹಾರಾಜರ ಕಾಲದಿಂದಲೂ ನಾವು ನೋಡುತ್ತ ಬಂದಿದ್ದೇವೆ. ಆದರೆ ಈ ಅನ್ಯಾಯದ ವಿರುದ್ಧ ಒಕ್ಕಲಿಗರು ಬಂಡು ಹೂಡಬೇಕು ಎನ್ನುವದರಲ್ಲಿ ಅರ್ಥವೇನಿದೆ ? ಒಕ್ಕಲಿಗರು ಇದೀಗ ಬಹಳ ಅಂಜುಬುರುಕರಾಗಿ ಬಿಟ್ಟಿದ್ದಾರೆ. ” ಅದನ್ನು ಕೇಳಿ ಪದ್ಮಾಕರನು ಮತ್ತೆ ಹೇಳತೊಡಗಿದ “ ಸರಿ, ಆದರೆ ದುಃಖ ಅತೃಪ್ತಿಗಳು ತೀರ ಹೆಚ್ಚಾಗಿ ಅವುಗಳ ಕೊರತೆಯನ್ನು ಹೋಗಲಾಡಿಸಲು ಹತ್ತಿರ ಏನೂ ಉಳಿದಿರದಿದ್ದರೆ, ಅಂಜಿಕೆ ತನ್ನಿಂದ ತಾನೇ ಮಾಯವಾಗುತ್ತದೆ. ಹೊಸ ಸಾಮರ್ಥ್ಯ—ನಿರಾಶೆಯಿಂದುದಿಸಿದ ಸಾಮರ್ಥ್ಯವೆಂದೂ ನೀವದಕ್ಕೆ ಹೇಳಬಹುದು—ಎಲ್ಲಿಂದಲೋ ಮನುಷ್ಯನಿಗೆ ಬಂದುಬಿಡುತ್ತದೆ. ಇತಿಹಾಸವೇ ಇದಕ್ಕೆ ಸಾಕ್ಷಿಯಾಗಿದೆ; ಬೇರೆ ಕಡೆಗಾದದ್ದು ಕೊಲ್ಹಾಪುರ ರಾಜ್ಯದಲ್ಲೇಕಾಗ ಬಾರದು ? ”

ಇದಕ್ಕೆ ನಾನಾಸಾಹೇಬರು ಉತ್ತರವನ್ನು ಕೊಡಲಿಲ್ಲ; ಆ ವಿಷಯವೇ ಅಲ್ಲಿಗೆ ನಿಂತು ಹೋಯಿತು. ಪದ್ಮಾಕರನೂ ಆ ಬಳಿಕ ಸುಮ್ಮನೇ ಕುಳಿತವನು ಹೋಗುವ ವರೆಗೂ ಬಾಯಿ ಬಿಡಲಿಲ್ಲ. ಅವನು ಅವರೆಲ್ಲರನ್ನು

ಬೀಳ್ಕೊಂಡು ಹೊರಹೊರಟಾಗ ಅವನ ಮುಖ ಒಳ್ಳೇ ಗಂಭೀರವಾಗಿದ್ದು ದನ್ನು ಶಕುಂತಲೆ ನಿರೀಕ್ಷಿಸಿದಳು.

ಮರುದಿನ ಮುಂಜಾನೆ ಶಕುಂತಲೆಗೆ ಈಜು ಕಲಿಸಲು ಅವನು ಬಂದಾಗ ಅವನ ಮುಖಮುದ್ರೆ ಪ್ರಸನ್ನವಾಗಿತ್ತು. ಶಕುಂತಲೆ ತಾನೇ ಅವನನ್ನು ಮಾತನಾಡಿಸಿದಳು "ನನಗೆ ಈಸಲು ಎಷ್ಟು ದಿನಗಳಲ್ಲಿ ಬರಬಹುದು ? "

"ಒಂದು ದಿನದಲ್ಲಿ" ಪದ್ಮಾಕರನು ಉತ್ತರ ಕೊಟ್ಟ.

"ಒಂದು ದಿನದಲ್ಲಿ ? ಹಾಗಾದರೆ ಇಂದೇ ನನಗೆ ಈಜಲು ಬರುವದೇ? ಏನಾದರೊಂದು ! ಇದೇನು ಚೇಷ್ಟೆ !"

"ಚೇಷ್ಟೆ ಯಾರು ಮಾಡಿದರು ? ನಿಜವಿದ್ದ ಮಾತನ್ನು ಹೇಳಿದೆ. ಒಂದೇ ಒಂದು ದಿನದಲ್ಲಿ ಮನುಷ್ಯ ಈಸಲು ಕಲಿಯುತ್ತಾನೆ; ಅಥವಾ ಅವನು ಕಲಿಯಲು ಬೇಕು. ಈಸಲು ಕಲಿಸುವ ನನ್ನ Theory ಮಾತ್ರ ಹೀಗೆ ಇದೆ. "

" ಅದೇನು ? "

"ನೀರಿನ ಮೇಲೆ ಈಸಲು ಬೇಕಾದಾಗ, ಮಾಡಬೇಕಾದ ಕೈಕಾಲುಗಳ ಚಲನವಲನಗಳನ್ನು ಮನುಷ್ಯನು ಈಸುವಾಗಲೇ ಮೊದಲು ಮಾಡುವದಿಲ್ಲ ಅವುಗಳೆಲ್ಲ ಅವನಿಗೆ ಮೊದಲೇ ಬರುತ್ತಿರುತ್ತವೆ. 'ನನಗೆ ನೀರಿನಲ್ಲಿ ಮುಳುಗುವದಿರುವದಿಲ್ಲ, ತೇಲುವದಿದೆ ಎಂಬ ವಿಚಾರದಿಂದ ಮನುಷ್ಯನು ತನ್ನ ಮನಸ್ಸನ್ನು ಏಕಾಗ್ರಗೊಳಿಸಿದನೆಂದರೆ, ಆ ಚಲನವಲನೆಗಳು ತಮ್ಮಿಂದ ತಾವೇ ಆಗುತ್ತವೆ. ಅಂದರೆ ಈಜುವದು ಶಾರೀರಿಕ ಕ್ರಿಯೆಯಲ್ಲ, ಮಾನಸಿಕ......"

ಶಕುಂತಲೆ ಜೋರಿನಿಂದ ನಗತೊಡಗಿದಳು. ಅದೇಕೆಂದು ಪದ್ಮಾಕರನು ಕೇಳಿದ್ದಕ್ಕೆ ಅವಳು ನಗುತ್ತಲೇ ಉತ್ತರ ಕೊಟ್ಟಳು "ಎಂಥ ದೊಡ್ಡ ದೊಡ್ಡ ಶಬ್ದಗಳನ್ನು ಪಯೋಗಿಸುವದದು ? ಶಾರೀರಿಕ ಕ್ರಿಯೆ, ಮಾನಸಿಕ ಕ್ರಿಯೆ ! ನೀರಿನ ಬದಲು ಈ ದೊಡ್ಡ ದೊಡ್ಡ ಶಬ್ದಗಳಲ್ಲಿಯೇ ನಾನು ಮುಳುಗಿಬಿಟ್ಟೆನಲ್ಲ ! "

"ಹೀಗೋ !" ಪದ್ಮಾಕರನೆಂದ, "ಹೌದು, ಸ್ವಲ್ಪ ಶಾಸ್ತ್ರಶುದ್ಧವಾಗಿಯೇ ಮಾತಾಡಿದೆ. ಆದರೆ ನನಗೆನಿಸುವಂತೆ ಈ ಸಾಯಕಲ್ ಹೊಡೆ

ಯುವದರಲ್ಲಾಗಲಿ, ಮೋಟಾರ ನಡಿಸುವದರಲ್ಲಾಗಲಿ ಇರುವಂತೆ ಈಸುವ ಕ್ರಿಯೆಯಲ್ಲಾದರೂ ಮನಸ್ಸಿನ ಕಾರ್ಯವೇ ಹೆಚ್ಚು. ಜಾಣ ಮನುಷ್ಯನಿಗೆ ಅದು ಕೂಡಲೇ ಬರಬಹುದು. ನೀವು ಈಜಲು ಇವತ್ತೇ ಕಲಿಯಬಹುದು ಎಂದು ನಾನು ಹೇಳಿದ್ದು ಚೇಷ್ಟೆಯಲ್ಲ."

"ಚೇಷ್ಟೆಯಲ್ಲ, ಆದರೆ ಒಂದು ಮಾತನ್ನು ಮಾತ್ರ ಗೃಹಿತವೆಂದೇ ತಿಳಿದಿರಿ."

"ಅದಾವುದು ?"

"ನಾನು ಜಾಣಳೆಂಬುದು! ನನ್ನ ಜಾಣತನ ಅಂದು ವಾಕ್‌ಸ್ಪರ್ಧೆಯ ದಿನ ನಿಮಗೆ ತಿಳಿಯಲಿಲ್ಲವೆಂದು ಕಾಣುತ್ತದೆ!"

ಅದನ್ನು ನೆನೆದುಕೊಂಡು ಶಕುಂತಲೆ ತನ್ನಷ್ಟಕ್ಕೆ ತಾನೇ ನಗತೊಡಗಿ ದಳು. ಪದ್ಮಾಕರನೂ ನಕ್ಕು ಹೇಳಿದ "ಅಹುದು, ಅಂದು ಮಾತ್ರ ಕೊಂಚ ವಿಚಿತ್ರವೇ ಆಯಿತು."

ಇಷ್ಟರಲ್ಲಿಯೇ ಅವರಿಬ್ಬರೂ ಬಾವಿಯ ಬಳಿಗೆ ಬಂದರು; ಆ ವಿಷಯ ಅಲ್ಲಿಗೇ ನಿಂತಿತು. ನೀರಿನಲ್ಲಿ ಇಳಿಯುವ ಸಿದ್ಧತೆಯನ್ನು ಮಾಡುತ್ತ ಶಕುಂ ತಲೆ ತನ್ನ ಮನದಲ್ಲಿಯೇ ಆಶ್ಚರ್ಯಪಡತೊಡಗಿದಳು, "ಇವನ ಸ್ವಭಾವ ದಲ್ಲಿ ಹುಡುಗಾಟವಿದೆ, ಆನಂದವಿದೆ, ತುಂಟತನವಿದೆ; ವಿಚಾರಶೀಲತೆಯೂ ಇದೆ, ಗಾಂಭೀರ್ಯವೂ ಇದೆ. ಯಾವುದು ನಿಜ?"

ಅವಳು ಕೊಲ್ಹಾಪುರಕ್ಕೆ ತಿರುಗಿ ಬಂದಾಗ ಈ ಪ್ರಶ್ನೆಯನ್ನು ಕುರಿತು ನಡುನಡುವೆ ವಿಚಾರ ಮಾಡುತ್ತಲೇ ಇದ್ದಳು.

೫

ಕಾರಖಾನೆಯನ್ನು ತೆಗೆಯಬೇಕೆಂಬ ನಾನಾಸಾಹೇಬರ ವಿಚಾರ ಒಂದು–ಒಂದೂವರೆ ವರ್ಷಗಳ ವರೆಗೆ ನಡೆದೇ ಇತ್ತು. ಅಂತೂ ಕೊನೆಗೆ ಅದಕ್ಕೊಂದು ನಿಶ್ಚಿತ ಸ್ವರೂಪ ಬರುವ ಮುಹೂರ್ತ ಬಂತು. ನಾನಾ ಸಾಹೇಬರು ಪರದೇಶದಿಂದ ಯಂತ್ರ ಸಾಮುಗ್ರಿಗಳನ್ನು ಯಾವ ಮುಹೂರ್ತ ದಲ್ಲಿ ತರಿಸಬೇಕೆಂದು ಯೋಚಿಸತೊಡಗಿದರು. ಆದರೆ ವಿಚಿತ್ರ! ಮುಂದೆ ಹತ್ತು ಹದಿನೈದು ದಿನಗಳಲ್ಲಿಯೇ ಕೆಲವೊಂದು ಘಟನೆಗಳ ಮೂಲಕ, ಕಾರ ಖಾನೆಯ ವಿಚಾರವೇ ಹಿನ್ನೆಲೆಯಲ್ಲಿ ಬಿದ್ದುಬಿಟ್ಟಿತು. ನಾನಾಸಾಹೇಬರು ಹಣಕ್ಕಾಗಿ ಪಾಲುಗಾರನೆಂದು ಸೊಲ್ಲಾಪುರದ ಜೈನ ವ್ಯಾಪಾರಿಯೊಬ್ಬನನ್ನು ಈ ವ್ಯವಸಾಯದಲ್ಲಿ ಕೂಡಿಸಿಕೊಂಡಿದ್ದರು. ಶಕುಂತಲೆಯ ತಂದೆಯ ಸಲ ಹೆಯ ಮೇರೆಗೆ ನಾನಾಸಾಹೇಬರು ಕಾರಖಾನೆಯನ್ನು ಬ್ರಿಟಿಷ ಹದ್ದಿ ನಲ್ಲಿಯೇ ಸುರು ಮಾಡಬೇಕೆಂದು ಯೋಚಿಸಿದ್ದರು. ಕೊಲ್ಹಾಪುರ ಸಂಸ್ಥಾ ನವು ಹಣವನ್ನು ತೆಗೆದುಕೊಳ್ಳದೆ ಕಾರಖಾನೆಗಾಗಿ ಸ್ಥಳವನ್ನು ಕೊಡಲು ಸಿದ್ಧವಿತ್ತು. ಅಲ್ಲದೆ ವಾಹನ ಸೌಕರ್ಯ, ಸುಂಕದ ಸವಲತ್ತುಗಳನ್ನು ಕೊಡಲು ಸಂಸ್ಥಾನವು ಆಶ್ವಾಸನ ಕೊಟ್ಟಿತ್ತು. ಇದಕ್ಕೆ ಪ್ರತಿಯಾಗಿ ಕಾರ ಖಾನೆಯ ವ್ಯವಸ್ಥೆಯಲ್ಲಿ ತಮ್ಮದೂ ಕೈಯಿರಬೇಕೆಂಬುದು ಸಂಸ್ಥಾನದ ಆಶೆ

ಯಾಗಿತ್ತು. ಆ ಜೈನ ವ್ಯಾಪಾರಿಯೂ ಅಧಿಕಾರಿಗಳ ಸವಿ ಮಾತಿನಿಂದ ಮರುಳಾಗಿ ಬಿಟ್ಟಿದ್ದ. "ಸಂಸ್ಥಾನವು ಇಷ್ಟೊಂದು ದಯೆ ತೋರಲು ಸಿದ್ಧ ವಾಗಿದ್ದರೆ ಅದರ ಲಾಭವನ್ನು ನಾವೇಕೆ ತೆಗೆದುಕೊಳ್ಳಬಾರದು ?" ಎಂಬುದೇ ಅವನ ಮತವಾಗಿತ್ತು. "ಇದು ಕಣ್ಣಿಗೆ ದಯೆ ಎಂದು ತೋರಿದರೂ, ಅದೊಂದು ಮುಚ್ಚಿದ ತಗ್ಗು; ಈ ಸಂಸ್ಥಾನದ ಹದ್ದಿನಲ್ಲಿ ಇವರ ಕೃಪಾಛತ್ರ ದಲ್ಲಿ ಕಾರಖಾನೆಯನ್ನು ತೆಗೆದರೆ ಅದರಿಂದೇನೂ ಲಾಭವಿಲ್ಲ" ಎಂದು ನಾನಾ ಸಾಹೇಬರು ಅವನಿಗೆಷ್ಟೋ ತಿಳಿಸಿ ಹೇಳಿದರು. ಆದರೆ ಆ ಜೈನ ವ್ಯಾಪಾರಿ ಒಪ್ಪದೆ ಕೊನೆಗೂ, ಹೇಳಿಯೆ ಬಿಟ್ಟ, "ನೀವು ಬ್ರಿಟಿಷ ಹದ್ದಿನಲ್ಲಿ ಕಾರಖಾನೆ ಯನ್ನು ತೆಗೆಯುವದಾದರೆ, ನಾನು ಹಣವನ್ನು ಕೊಡುವದಿಲ್ಲ" ಎಂದು. ನಾನಾಸಾಹೇಬರಿಗೆ ಅವನ ಈ ಮೂರ್ಖತನವನ್ನು ಕಂಡು ಸಿಟ್ಟು ಬಂತು. ಆದರೆ ಮಾಡುವದೇನು ? ಈ ಕಾರಖಾನೆಯ ವಿಚಾರ ಇನ್ನು ಕೆಲವು ದಿವಸ ಗಳ ವರೆಗಂತೂ ಸಾಧ್ಯವಿಲ್ಲ ಎಂದು ಸ್ವಸ್ಥ ಕುಳಿತುಬಿಟ್ಟರು. ಸಂಸ್ಥಾನದ ಸಹಾಯದಿಂದ ನಾನೊಬ್ಬನೇ ಕಾರಖಾನೆಯನ್ನು ತೆಗೆಯುತ್ತೇನೆಂದು ಆ ಜೈನ ವ್ಯಾಪಾರಿ ಹೇಳಿದನಂತೆ! ಆದರೆ ಮುಂದೆ ಅವನಿಗೂ ಸಂಸ್ಥಾನಕ್ಕೂ ಬಗೆಯೇ ಹರಿಯಲಿಲ್ಲ! ಶಕುಂತಲೆಯ ತಂದೆ ಭಾವೂಸಾಹೇಬರು ನಾನಾ ಸಾಹೇಬರಿಗೆ ಹೇಳಿದರು, "ಹುಂ, ಇದೆಲ್ಲ ನಮಗೆ ಮೊದಲಿನಿಂದಲೇ ಕಾಣಿಸುತ್ತಿತ್ತು."

ಭಾವೂಸಾಹೇಬರ ಒಂದು, ಒಂದೂವರೆ ವರ್ಷ ಇದರಲ್ಲಿ ಸುಮ್ಮನೆ ಹೋಯಿತೇನೋ ಸರಿ. ಆದರೆ ಇದರಿಂದ ತಮಗೆ ಹಾನಿಯಾಯಿತೆಂದು ಮಾತ್ರ ಅವರು ತಿಳಿಯಲಿಲ್ಲ. ಈ ಅವಧಿಯಲ್ಲಿ ಅವರ ಸ್ವಂತದ ಕೆಲಸಗಳು ಕಡಿಮೆಯಾಗಿದ್ದವು; ಅವರ ಆದಾಯ ಕಡಿಮೆಯಾಗಿತ್ತು. ಆದರೆ ಅವರ ದೃಷ್ಟಿಯಿಂದ ಎರಡು ಮಾತ್ರ ಲಾಭಗಳಾಗಿದ್ದವು. ಒಂದೆಡೆಗೆ ನಾನಾ ಸಾಹೇಬರೊಡನೆ ಸ್ನೇಹ ಬೆಳೆದಿತ್ತು; ಇನ್ನೊಂದೆಡೆ ಪುಣೆ, ಮುಂಬಯಿ ಸಾರಿಗೆ ಕಡಿಮೆಯಾದ್ದರಿಂದ ಶಕುಂತಲೆಯ ಅಭ್ಯಾಸದ ಕಡೆಗೆ ವಿಶೇಷ ಲಕ್ಷ್ಯ ಪೂರೈಸಲು ಅವಕಾಶ ದೊರೆತಿತ್ತು.

ನಾನಾಸಾಹೇಬರು, 'ನನ್ನಿಂದಲೇ ನಿಮಗೆ ಇಷ್ಟೊಂದು ತೊಂದರೆ ಯಾಯಿತು' ಎಂದು ಭಾವೂಸಾಹೇಬರಿಗೆ ಪದೇಪದೇ ಹೇಳುತ್ತಿದ್ದರು.

'ಇದು ನಿಮ್ಮ ತಪ್ಪು ಕಲ್ಪನೆ' ಎಂದು ಅವರು ಎಷ್ಟು ಹೇಳಿದರೂ ನಾನಾ ಸಾಹೇಬರಿಗೆ ಸಮಾಧಾನವಾಗುತ್ತಿದ್ದಿಲ್ಲ. ಒಮ್ಮೆಲೇ ಬಹಳ ಹಣವನ್ನು ಗಳಿಸಲು ಅನುಕೂಲವಾಗುವಂಥ ಒಂದು ಕೆಲಸವನ್ನು ಭಾವೂಸಾಹೇಬರಿಗೆ ಕೊಡಿಸಬೇಕೆಂದು ಅವರ ಆಶೆ ಇತ್ತು: ಅವರ ಈ ಆಶೆ ಸಫಲವಾಗುವ ಕಾಲವೂ ಬೇಗ ಬಂತು. ಮುಂಬಯಿಯಲ್ಲಿ ಅವರಿಗೊಬ್ಬ ಧನಾಢ್ಯ ಪಾರ್ಶೀ ಮಿತ್ರನಿದ್ದ; 'ಪಾವರ ಅಲ್ಕೊಹೋಲ' ನ್ನು ತಯಾರು ಮಾಡುವ ಕಾರಖಾನೆಯೊಂದನ್ನು ತೆಗೆಯಬೇಕೆಂದು ಅವನ ವಿಚಾರವಿತ್ತು; ಆದರೆ ಅದಕ್ಕೆ ತಜ್ಞರ ಸಲಹೆ ಅವಶ್ಯವಾಗಿತ್ತು. ಇದರ ವಿಚಾರವಾಗಿ ನಾನಾಸಾಹೇಬರು ಭಾವೂಸಾಹೇಬರ ಪ್ರಾವೀಣ್ಯವನ್ನು ಕುರಿತು ತಮ್ಮ ಮಿತ್ರನಿಗೆ ಮನವರಿಕೆ ಮಾಡಿಕೊಟ್ಟರು. ಅವರ ಮಿತ್ರನೂ ಅದಕ್ಕೆ ಒಪ್ಪಿಕೊಂಡನು. ಕೊಲ್ಹಾಪುರದ ಮನೆಯನ್ನು ಕಿತ್ತದೆ, ವಾರದಲ್ಲಿ ಮೂರು ದಿನ ಮುಂಬಯಿಗೆ ಹೋಗಿದ್ದು, ತಮ್ಮ ಕೆಲಸವನ್ನು ಪೂರೈಸಿ ಹಿಂದಿರುಗುವದಾಗಿ ಭಾವೂ ಸಾಹೇಬರು ಹೇಳಿದರು. ಇದಕ್ಕೆ ಆ ಪಾರ್ಶೀ ವ್ಯಾಪಾರಿಯೂ ಒಪ್ಪಿಕೊಂಡನು. ಒಂದು ವರ್ಷದ ಮುಟ್ಟಿಗೆ ಹನ್ನೆರಡು ಸಾವಿರ ರೂಪಾಯಿ ಭಾವೂಸಾಹೇಬರಿಗೆ ಕೊಡಬೇಕೆಂದು ಮಾತಾಯಿತು. ಈ ಕರಾರದ ಮೇರೆಗೆ ಭಾವೂಸಾಹೇಬರು ಒಂದು ವರ್ಷ ತಮ್ಮ ಕೆಲಸವನ್ನು ಪೂರೈಸಿ, ಕೊನೆಯ ದಿನ ಬರುವಾಗ ಮುಂಬಯಿಯಿಂದ ಒಂದು ಹೊಸ ಮೋಟಾರನ್ನೇ ಕೊಂಡು ತಂದರು! ಮೋಟಾರ ಕೊಳ್ಳುವ ತಮ್ಮ ವಿಚಾರವನ್ನು ಶಕುಂತಲೆಯಿಂದ ಬಚ್ಚಿಟ್ಟು, ಅವಳನ್ನು ಒಮ್ಮೆಲೆ ಆಶ್ಚರ್ಯಚಕಿತಳನ್ನಾಗಿ ಮಾಡಬೇಕೆಂದು ಅವರ ಆಶೆ!

"ನಾವು ಒಂದು ಮೋಟಾರ ಕೊಳ್ಳುವವರಿದ್ದೇವೆ" ಎಂದು ರಾಧಾನಗರಿಯಲ್ಲಿ ತಮ್ಮ ಶಾಲೆಯ ಮಾಸ್ತರರಿಗೂ ಇತರರಿಗೂ ಹೇಳುತ್ತಿದ್ದ ಶಕುಂತಲೆಗೆ ಈ ಮೋಟಾರು ಸೇರುತ್ತಲೇ ಇರಲಿಲ್ಲ. ಯಾಕಂದರೆ ಅದರ ಬಣ್ಣ ಅಚ್ಚ ಕೆಂಪಿರಲಿಲ್ಲ. ಆದರೆ ಈಗ ಅವಳೂ ಮೊದಲಿನ ಶಕುಂತಲೆಯಾಗಿರಲಿಲ್ಲ. ಡಿ ವ್ಹಲೇರಾನ ಜನ್ಮಸ್ಥಳ, ಕಾಲಗಳನ್ನು ಕುರಿತು ಮಾಸ್ತರರೊಡನೆ ವಾದ ಮಾಡುವ ಶಕುಂತಲೆ, ರಾಧಾನಗರಿಯಲ್ಲಿ ಮರಾಠೀ ಶಾಲೆಗೆ ಹೋಗುತ್ತಿದ್ದ ಶಕುಂತಲೆಯಿಂದ ಬೇರೆಯಾಗಿದ್ದಂತೆ, ಮ್ಯಾಟ್ರಿಕ್ ಪರೀಕ್ಷೆಗೆ ಕಟ್ಟುವ

ಸಿದ್ಧತೆಯಲ್ಲಿದ್ದ ಈಗಿನ ಶಕುಂತಲೆ, ಅಂದಿನವಳಾಗಿರಲಿಲ್ಲ. ಅವಳ ಶರೀರ ದಲ್ಲಿಯೂ ಮನದಲ್ಲಿಯೂ ಅದೆಷ್ಟೋ ವ್ಯತ್ಯಾಸವಾಗಿತ್ತು.

ಇದಕ್ಕೆ ಮೊದಲು ಅವಳು ಸೊರಗಿದಂತೆ ಕಾಣಿಸುತ್ತಿದ್ದಳು; ಇದ ರಿಂದ ಅವಳ ಎತ್ತರವೂ ಹೆಚ್ಚು ಕಾಣುತ್ತಿತ್ತು. ಆದರೆ ಅವಳ ಮೈ ಈಗ ತುಂಬಿಕೊಳ್ಳತೊಡಗಿತ್ತು. ಎತ್ತರವೂ ಹೆಚ್ಚಾಗಿ ಕಾಣುತ್ತಿರಲಿಲ್ಲ. ಅವಳ ಸ್ವಭಾವದಲ್ಲಿದ್ದ ಸರಳತೆ ಅವಳ ಕಣ್ಣುಗಳಲ್ಲಿ ವ್ಯಕ್ತವಾಗುತ್ತಿತ್ತು. ಆದರೂ ಬಾಲ್ಯದ ಮುಗ್ಧತೆ ಅದರಲ್ಲಿರಲಿಲ್ಲ. ಬಾಲಿಕೆ ದೊಡ್ಡವಳಾದಳೆಂ ದರೆ, "ಹಾಂ, ನಿಮ್ಮ ಮನಸ್ಸಿನಲ್ಲಿದ್ದುದನ್ನು ನಾನು ಕಂಡುಹಿಡಿಯಬಲ್ಲೆ," ಎಂಬ ದೃಷ್ಟಿಯಿಂದ ಅವಳ ಕಣ್ಣುಗಳು ಜನರ ಕಡೆಗೆ ಹೊರಳುವವು. ಜಾಣ ತನ, ಚಾತುರ್ಯ ಅವಳಲ್ಲಿ ಮೊದಲೇ ಇದ್ದುದಾದರೆ ಈ ದೃಷ್ಟಿ ಇನ್ನೂ ಬೇಗ ಬರುತ್ತದೆ. ಶಕುಂತಲೆಯ ಕಣ್ಣುಗಳಲ್ಲಿಯೂ ಈ ದೃಷ್ಟಿ ಈಗ ಬಂದಿತ್ತು. ಸುದೃಢವಾದ ಪ್ರಕೃತಿಯಿಂದ ಮೊದಲೇ ಮೋಹಕವಾಗಿ ಕಾಣು ತ್ತಿದ್ದ ಅವಳ ಅಂಗಾಂಗಗಗೆ ಈ ದೃಷ್ಟಿಯಿಂದ ಇನ್ನೂ ಕಳೆ ಬಂದಿತ್ತು. ಅವಳ ಮುಖದಲ್ಲಿ ಕಣ್ಣು ಮೂಗುಗಳು ಎದ್ದು ಕಾಣುತ್ತಿದ್ದವು. ತಂದೆಯ ಹೋಲಿಕೆ ಇದರಲ್ಲಿಯೂ ಇದೆ, ಎನ್ನುವಂತೆ ವಿದ್ವತ್ತೆಯ ತೇಜಸ್ಸೂ ಅವಳ ಮುಖದಲ್ಲಿ ವ್ಯಕ್ತವಾಗುತ್ತಿತ್ತು. ಅವಳೇನೋ ನೋಡಲು ಅಷ್ಟು ಸುಂದರ ಳಾಗಿರಲಿಲ್ಲ. ಆದರೆ ಇಷ್ಟು ಮಾತ್ರ ನಿಜ, ಇನ್ನೊಬ್ಬ ಸುಂದರ ಯುವತಿ ಯೊಡನೆ ಅವಳಿದ್ದರೂ ಕೂಡ, ನೋಡುವವರ ಲಕ್ಷ್ಯ ಅವಳೆಡೆಗೆ ತನ್ನಿಂದ ತಾನೇ ಎಳೆಯಲ್ಪಡುತ್ತಿತ್ತು.

ಆದರೆ ಪದ್ಮಾಕರನು ಅವಳಿಗೆ ಮನಸೋತದ್ದು ಈ ದೃಷ್ಟಿಯಿಂದಲ್ಲ; ಈ ದೃಷ್ಟಿಯ ಪರಿಣಾಮ ಪದ್ಮಾಕರನ ಮೇಲೆ ಯಾವ ರೀತಿಯಲ್ಲೂ ಆಗಿರ ಲಿಲ್ಲ. ಯೌವನ ಸುಲಭ ಹುಡುಗಾಟ, ಆನಂದ ಅವನಲ್ಲಿತ್ತು. ಆದರೆ ಅದು ಕೆಲವೇ ಅಂಶಗಳಲ್ಲಿ. ಅವನ ಸ್ವಭಾವದಲ್ಲಿ ಗಾಂಭೀರ್ಯ ಹೆಚ್ಚು. ಅವನ ಮನಸ್ಸಾದರೂ ಯಾವಾಗಲೂ ಗಂಭೀರ ವಿಚಾರಗಳಲ್ಲಿಯೇ ತೊಡ ಗಿರುತ್ತಿತ್ತು. ಗಂಭೀರ ವಿಷಯಗಳ ಮೇಲೆ ಮಾತನಾಡುಹವರೂ, ಅಂತಹ ಪುಸ್ತಕಗಳನ್ನೋದುವವರೂ ಅವನಿಗೆ ಹೆಚ್ಚು ಮೆಚ್ಚಿಕೆ. ಅದಕ್ಕೆಂದೇ ಅವನು ಭಾವೂಸಾಹೇಬರನ್ನು ಅಷ್ಟೊಂದು ಮೆಚ್ಚಿ ಅವರ ಮನೆಗೆ ಮೇಲಿಂದ

ಮೇಲೆ ಬರುತ್ತಿದ್ದ. ಶಕುಂತಲೆಯೊಡನೆ ಅವನ ಪರಿಚಯವಾದದ್ದು ಈಸುವ ನಿಮಿತ್ತದಿಂದ; ಆದರೆ ಅವರಿಬ್ಬರ ಸ್ನೇಹ ಬೆಳೆಯುತ್ತ ಹೋದದ್ದು ಮಾತ್ರ ಸಾಮಾನ್ಯವಾಗಿ ತರುಣ ಹುಡುಗ ಹುಡಿಗೆಯರ ಸ್ನೇಹದಂತಲ್ಲ; ಶಕುಂತಲೆ ಹೆಚ್ಚಾಗಿ ಓದಿಕೊಂಡವಳೆಂಬುದನ್ನು ಪದ್ಮಾಕರನು ಕಂಡುಕೊಂಡನು. ಅಲ್ಲದೆ ಅವಳ ವಿಚಾರಶೀಲತೆ, ಮಾತು-ನಡತೆಗಳಲ್ಲಿಯ ಗಾಂಭೀರ್ಯ, ಅವಳ ದೇಶಾಭಿಮಾನ ಇವೆಲ್ಲವೂ ಪದ್ಮಾಕರನಿಗೆ ಹೆಚ್ಚು ಮೆಚ್ಚಿಕೆಯಾಗಿದ್ದವು. ಮರಾಠೀ ಕಾವ್ಯದ ಬಗ್ಗೆ ಅವಳಿಗಿದ್ದ ಅಭಿರುಚಿ ಮಾತ್ರ ಪದ್ಮಾಕರನಿಗೆ ಕೊಂಚ ವಿಚಿತ್ರವೆನಿಸಿತು. ಅವಳ ತಂದೆಗಂತೂ ಕಾವ್ಯದಲ್ಲಿ ಅಭಿರುಚಿಯಿರ ಲಿಲ್ಲ. "ಈ ಅಭಿರುಚಿ ನಿನ್ನಲ್ಲಿ ಹೇಗೆ ಬಂತು ?" ಎಂದು ಪದ್ಮಾಕರನು ಅವ ಳನ್ನು ಎಷ್ಟೋ ಸಲ ಚೇಷ್ಟೆಯಿಂದ ಕೇಳಿಯೂ ಬಿಟ್ಟಿದ್ದ. ಅಲ್ಲಿ ಮತ್ತಾರೂ ಇಲ್ಲದಿದ್ದರೆ ಶಕುಂತಲೆಯೂ ಅದಕ್ಕೆ ಸರಿಯಾದ ಉತ್ತರವನ್ನೇ ಕೊಡುತ್ತಿ ದ್ದಳು. "ಕಾವ್ಯದಲ್ಲಿ ಅಭಿರುಚಿಯಿಲ್ಲದವರು ಪಶುಗಳೆಂದು ಸುಭಾಷಿತವೇ ಇದೆ, ಗೊತ್ತಿಲ್ಲವೇ ನಿನಗೆ ?"

ಆದರೆ ಅವಳ ತಂದೆ ಅಲ್ಲಿದ್ದರೆ ಅವಳಿಗೆ ಇಂತಹ ಉತ್ತರವನ್ನು ಕೊಡು ವದು ಸಾಧ್ಯವಾಗುತ್ತಿರಲಿಲ್ಲ. ಅವಳು ಸುಮ್ಮನೆ ಕೂಡಬೇಕಾಗುತ್ತಿತ್ತು. ಜೊತೆಗೆ ತಂದೆಯವರೂ ಚೇಷ್ಟೆಮಾಡಿ ಅದಕ್ಕಿನ್ನೂ ಬಣ್ಣ ಕಟ್ಟುತ್ತಿದ್ದರು. ಅನಿವಾರ್ಯವಾಗಿ ಅದನ್ನೂ ಅವಳು ಕೇಳಬೇಕಾಗುತ್ತಿತ್ತು.

"ಪದ್ಮಾಕರ" ಶಕುಂತಲೆಯ ತಂದೆ ಹೇಳುತ್ತಿದ್ದರು "ಪ್ರತಿಯೊಬ್ಬ ಮನುಷ್ಯನಿಗೂ ಹುಡುಗತನದ್ದೊಂದು ಕಾಲವಿರುತ್ತದೆ. ಆ ಕಾಲದಲ್ಲಿ ಅವ ನಿಗೆ ಕಾವ್ಯದಲ್ಲಿ ಅಭಿರುಚಿ ಹೆಚ್ಚು. ಮನಸ್ಸಿನಿಂದ ದುರ್ಬಲರಾದವರು ಕಾವ್ಯ ಕಟ್ಟುತ್ತಾರೆ, ಕೇಳುತ್ತಾರೆ; ಪ್ರತಿಸಲವೂ ಸಾಹಿತ್ಯ ಸಮ್ಮೇಲನದ ಕಾವ್ಯವಿಭಾಗದಲ್ಲಿ ಸ್ತ್ರೀಯರೂ, ಮಕ್ಕಳೂ ಹೆಚ್ಚಾಗಿ ಸೇರುವ ವಿಷಯ ನಿನಗೆ ಗೊತ್ತೇ ಇರಬಹುದು."

ಅದನ್ನು ಕೇಳಿ ಪದ್ಮಾಕರನು ಜೋರಿನಿಂದ ನಗುತ್ತಿದ್ದನು. ಶಕುಂ ತಲೆ ಮತ್ತಿಷ್ಟು ಸಿಟ್ಟಿಗೆದ್ದು ಹೇಳುತ್ತಿದ್ದಳು "ಏನು ? ನನ್ನಲ್ಲಿಯೂ ಚಿಕ್ಕ ಮಕ್ಕಳಂತೆ ಹುಡುಗಾಟವಿದೆಯೆಂದು ನಿಮ್ಮ ಅಂಬೋಣವೇ ?.......... ಇರಲಿ, ನನ್ನಷ್ಟಕ್ಕೆ ನಾನು."

"ಇರಲಿ, ಅಂದರೆ ನಾನೆಲ್ಲಿ ನಿನ್ನ ಹುಡುಗಾಟವನ್ನು ಕಿತ್ತೊಗೆಯ ಬೇಕೆಂದು ಪ್ರಯತ್ನ ನಡೆಸಿದ್ದೇನೆ? ಇನ್ನು ಸ್ವಲ್ಪ ದೊಡ್ಡವಳಾದಿಯೆಂದರೆ ಅದು ತನ್ನಿಂದ ತಾನೇ ಹೋಗುತ್ತದೆ. ತೀರ ಚಿಕ್ಕವಳಿದ್ದಾಗ ಅಚ್ಚ ಕೆಂಪು ಬಣ್ಣದ ಮೋಟಾರ ಬೇಡುತ್ತಿದ್ದಿ. ಈಗೆಲ್ಲಿ ಉಳಿದಿದೆ ಆ ನಿನ್ನ ಆಶೆ? ಹಾಗೇ ಈ ಕಾವ್ಯದ್ದೂ ಕೂಡ."

ಪದ್ಮಾಕರನು ಭಾವೂಸಾಹೇಬರ ಮನೆಗೆ ಮೇಲಿಂದ ಮೇಲೆ ಬರುತ್ತಿದ್ದುದು ಓಣಿಯ ಜನರಿಗೆಲ್ಲ ತಿಳಿಯಲು ಹೆಚ್ಚು ಹೊತ್ತು ಹತ್ತಲಿಲ್ಲ. ಕೊಲ್ಹಾಪುರವು ಶಹರವೇನೋ ಸರಿ; ಆದರೆ ಅದರ ಬಹು ಭಾಗ ಹಳ್ಳಿಗಳಲ್ಲಿದ್ದಂತೆಯೇ ಇದೆ. ಓಣಿಯ ಒಂದು ತುದಿಗೆ ನಡೆಯುವ ವಿಷಯ ಇನ್ನೊಂದು ತುದಿಯ ವರೆಗೆ ಸಹಜವಾಗಿಯೇ ಮುಟ್ಟಿ ಚರ್ಚೆಯ ವಿಷಯವಾಗುವದು. ಅದರಲ್ಲೂ ಭಾವೂಸಾಹೇಬರ ಮನೆಯೆಂದರೆ ಸಾಮಾನ್ಯರ ಮನೆಯಂತಲ್ಲ; ಮೇಲೆ ಶಕುಂತಲೆ, ಪದ್ಮಾಕರರು ನಾಲ್ಕು ಜನರಿಗೆ ಗೊತ್ತಿದ್ದ ಹುಡುಗರು. ಅದರಿಂದ ಓಣಿಯೊಳಗೆ ಅವರ ಬಗ್ಗೆ 'ಗುಜುಗುಜು' ಮಾತು ಸುರುವಾಯಿತು; ಹೆಣ್ಣುಮಕ್ಕಳಲ್ಲಿಯೂ ಈ ವಿಷಯ ಬಂತು. ಹೀಗೇ ಹಬ್ಬುತ್ತ ಶಕುಂತಲೆಯ ವರ್ಗದಲ್ಲಿಯ ಹುಡಿಗೆಯರ ಕಿವಿಯವರೆಗೂ ಈ ವಿಷಯ ಹೋಯ್ತು. ಒಂದು ದಿನ ಮಧ್ಯಾಹ್ನದ ಬಿಡುವಿನಲ್ಲಿ ಶಕುಂತಲೆಯ ಪಕ್ಕಕ್ಕೆ ಕುಳಿತ ಹುಡಿಗೆಯೊಬ್ಬಳು ಅವಳನ್ನು ಕೇಳಿಯೇ ಬಿಟ್ಟಳು.

"ನಾನೊಂದು ಸುದ್ದಿ ಕೇಳಿದ್ದೇನೆ, ಅದು ಸತ್ಯವೇ?"

"ಅದೇನು?" ಶಕುಂತಲೆ ಕೇಳಿದಳು.

"ಸತ್ಯವಿದ್ದರೆ ಒಮ್ಮೆಲೆ ಒಪ್ಪುವೆಯಾ?"

"ಹೌದು, ಆದರೆ ಅದೇನೆಂಬುದನ್ನಾದರೂ ಮೊದಲು ಹೇಳುವಿಯೋ ಇಲ್ಲವೋ?"

"ಪದ್ಮಾಕರ ಸೊಹನಿಯೊಂದಿಗೆ ನಿನ್ನ ಲಗ್ನವಂತಲ್ಲs!"

"ಅಯ್ಯ, ಯಾರೇ ಅದು ಹೇಳಿದವರು ನಿನಗಿದನ್ನು?" ಎಂದು ಕೇಳುತ್ತ ತನ್ನ ಕಣ್ಣುಗಳ ನೋಟದಿಂದಲೇ ಶಕುಂತಲೆ ಅವಳನ್ನು ಸುಮ್ಮನಿರಿಸಿದಳು. ಆದರೆ ಆ ಪ್ರಶ್ನೆಯಿಂದ ಶಕುಂತಲೆಗೆನಿಸಿದ ಆಶ್ಚರ್ಯ ಅದೆಷ್ಟೋ ಹೊತ್ತು ಹಾಗೇ ಉಳಿಯಿತು. ಎಂದಿಲ್ಲದ ವಿಚಾರವೂ ಒಂದು, ಅಂದು

ಅವಳ ತಲೆಯಲ್ಲಿ ಸುಳಿಯಿತು.

ನಿರ್ಮಲವಾದ ಸ್ನೇಹಾದರಗಳ ದೃಷ್ಟಿಯಿಂದ ಹೊರತು ಅವಳು ಪದ್ಮಾಕರನನ್ನು ಬೇರಾವ ದೃಷ್ಟಿಯಿಂದಲೂ ಇದುವರೆಗೆ ನೋಡಿರಲಿಲ್ಲ. ಅವನ ನಡತೆಯಲ್ಲಾದರೂ ಶುದ್ಧ ಸ್ನೇಹವೊಂದನ್ನು ಬಿಟ್ಟು ಇನ್ನಾವುದನ್ನೂ ಅವಳು ಕಂಡಿರಲಿಲ್ಲ. ಇಷ್ಟೇ ಅಲ್ಲ; ಒಂದಿಲ್ಲೊಂದು ದಿನ ತನ್ನ ಲಗ್ನ ಯಾರೊಡನಾದರೂ ಆಗುವದೆಂಬ ಕಲ್ಪನೆ ಕೂಡ ಅವಳಲ್ಲಿ ಸುಳಿದಿರಲಿಲ್ಲ. ಈ ವಿಷಯದಲ್ಲೆಂದರೆ ಅವಳೊಂದು ಶಿಶುವಿನಂತೆ ಮುಗ್ಧಳೇ. ಆದರೆ ಅಂದು ವರ್ಗದಲ್ಲಿ ಅವಳ ಗೆಳತಿ ಆ ರೀತಿಯಾಗಿ ಪ್ರಶ್ನೆ ಕೇಳಿದಾಗ ಅವಳ ಮುಗ್ಧತೆಯನ್ನು ಕೆಣಕಿದಂತಾಯಿತು. 'ಎಂದಾದರೂ ನನ್ನ ಲಗ್ನವಾಗಲೇಬೇಕಲ್ಲ!' ಎಂಬ ವಿಚಾರ ಅವಳಲ್ಲಿ ಸುಳಿಯಿತು. ಲಗ್ನವಾದರೆ ಗಂಡನ ಮನೆಗೆ ಹೋಗಬೇಕಲ್ಲ, ತಂದೆಯವರನ್ನು ಬಿಟ್ಟು! ಆ ಕಲ್ಪನೆಯೇ ಅವಳಿಗೆ ಸಹನವಾಗದಾಯ್ತು. ತಂದೆಯನ್ನು ಬಿಟ್ಟುಹೋಗುವದು ಸಾಧ್ಯವೇ ಇಲ್ಲ; ಅವರನ್ನು ಬಿಟ್ಟು ಅವಳ ಜೀವನದಲ್ಲಿ ಇನ್ನಾರಿಗೂ ಪ್ರವೇಶವಿಲ್ಲ. ತನ್ನ ತಂದೆಯಲ್ಲಿದ್ದಂಥ ವಿದ್ವತ್ತೆ, ಜಾಣ್ಮೆ ಇನ್ನಾರಲ್ಲಿಯೂ ಇಲ್ಲವೆಂದು ಅವಳಿಗೆ ಬಾಲ್ಯದಲ್ಲಿ ಮನವರಿಕೆಯಾಗಿತ್ತು. ಈ ಅಭಿಮಾನ, ದೊಡ್ಡವಳಾದರೂ ಅವಳಲ್ಲಿ ಇದ್ದೇ ಇತ್ತು. ಅದನ್ನು ಕಲಿಯಬೇಕು, ಇದನ್ನು ಕಲಿಯಬೇಕು ಎಂದು ಅವಳ ಮನಸ್ಸು ಯಾವಾಗಲೂ ಹಾತೊರೆಯುತ್ತಿತ್ತು. ಅದೆಲ್ಲ ಏತಕ್ಕಾಗಿಯೆಂದರೆ ತಂದೆಯವರಿಂದ 'ವಾಹವ್ವಾ' ಎನಿಸಿಕೊಳ್ಳಲಿಕ್ಕೆ! ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಮೊದಲಿನ ನಾಲ್ಕಾರು ನಂಬರುಗಳಲ್ಲಿಯೇ ತನ್ನ ನಂಬರು ಬರಬೇಕೆಂದೂ ಅವಳು ಪ್ರಯತ್ನ ನಡೆಸಿದ್ದಳು. ಹಾಗೆ ಬಂದರೆ ತಂದೆಯವರಿಗೆ ಎಷ್ಟೊಂದು ಅಭಿಮಾನವೆನಿಸೀತೆಂಬ ಕಲ್ಪನೆಯೇ ಅದಕ್ಕೆ ಕಾರಣವಾಗಿತ್ತು. ಅಂತೂ ಅವಳು ಮಾಡುವದೆಲ್ಲ ತಂದೆಗಾಗಿಯೇ. ಅವರನ್ನು ಬಿಟ್ಟು ಅವಳ ಜೀವನ ಬೇರೆಯಾಗಬಹುದೆಂಬ ಕಲ್ಪನೆ ಕೂಡ ಅವಳಲ್ಲಿ ಸುಳಿದಿರಲಿಲ್ಲ. ಲಗ್ನವಾದ ಮೇಲೆ ತಂದೆಯ ಸಹವಾಸ ದೊರಕದೆ ಹೋಗುವದಾದರೆ ಅವಳಿಗೆ ಲಗ್ನ ಕೂಡ ಬೇಕಾಗಿರಲಿಲ್ಲ.

ಹತ್ತು ಹದಿನೈದು ದಿನಗಳ ಹಿಂದೆ ಅವಳ ಪಕ್ಕದ ಮನೆಯ ಹುಡಿಗೆಯೊಬ್ಬಳು ಟಾಂಗೆಯಲ್ಲಿ ಕುಳಿತು ಹೋಗುವದನ್ನು ಅವಳು ನೋಡಿದ್ದಳು.

ಆ ಹುಡಿಗೆಯುಟ್ಟಿದ್ದ ಹಸಿರು ಬಣ್ಣದ ಜರತಾರೀ ಸೀರೆ; ಕೈಯಲ್ಲಿಯೂ ಹಸಿರು ಬಳೆ, ಬಂಗಾರದ ಗೋಟು ಪಾಟಲಿಗಳು ಒಪ್ಪುತ್ತಿದ್ದವು. ಅವ ಳೇನೋ ಅತ್ತೆಯ ಮನೆಗೆ ಹೊರಟಿದ್ದಳಂತೆ! ಅಂದಿನ ಆ ದೃಶ್ಯ ಶಕುಂತ ಲೆಗೆ ನೆನಪಾಯಿತು. ತನ್ನ ವಿಷಯದಲ್ಲಿಯೂ ಅಂತಹ ದೃಶ್ಯವನ್ನು ಕಲ್ಪಿಸಿ ನೋಡಿದಳು, ಅದೂ ಕೂಡ ಅವಳಿಗೆ ಸಹಿಸದಾಯಿತು. ತಂದೆಯನ್ನು ಬಿಟ್ಟು ಶಕುಂತಲೆ ಅತ್ತೆಯ ಮನೆಗೆ ಹೋಗುವಳೇ?

ಅದೇ ಕ್ಷಣದಲ್ಲಿ ಅವಳು ಲಗ್ನವಾಗಲೇ ಕೂಡದೆಂದು ನಿಶ್ಚಯಿಸಿ ಬಿಟ್ಟಳು.

" ಹುಡಿಗೆ ಎಂದ ಬಳಿಕ ಎಂದಿಲ್ಲೊಂದು ದಿನ ಲಗ್ನವಾಗಲೇ ಬೇಕು. ಆದರೆ ಈಗಿನ ಕಾಲದಲ್ಲಿ ಎಷ್ಟೋ ಹುಡಿಗೆಯರು ಲಗ್ನ ಮಾಡಿಕೊಳ್ಳದೆ ಹಾಗೇ ಇರುವರಲ್ಲ! ಅವರಂತೆ ನಾನೂ ಇದ್ದರಾಯಿತು! "

ಅಂದು ಸಂಜೆ ಪದ್ಮಾಕರನು ನಿತ್ಯದಂತೆ ಮನೆಗೆ ಬಂದಾಗ ಶಕುಂತಲೆ ಅವನ ಮಾತಿನ ರೀತಿಯನ್ನೂ, ದೃಷ್ಟಿಯನ್ನೂ ಚೆನ್ನಾಗಿ ಪರೀಕ್ಷಿಸಿ ನೋಡಿ ದಳು. ಅವಳ ಸಂಶಯಕ್ಕೆ ಎಳ್ಳಷ್ಟೂ ಅವಕಾಶ ದೊರೆಯಲಿಲ್ಲ. ಆಗಲೇ ಅವಳ ಮನಸ್ಸು ಕೊಂಚ ಹಗುರಾಯಿತು. ಪದ್ಮಾಕರನ ಸರಳ ದೃಷ್ಟಿಯಲ್ಲಿ ಅದೆಂತಹ ನಿಷ್ಕಪಟ ಭಾವನೆಯಿತ್ತು!

ಮನುಷ್ಯನು ತನ್ನ ಮನಸ್ಸಿನಲ್ಲಿ ನಿಶ್ಚಯವನ್ನೇನೋ ಮಾಡುತ್ತಾನೆ, ಅದನ್ನು ಕೇಳಿ ಸರ್ವಸಾಕ್ಷಿಯೂ ದೂರದರ್ಶಿಯೂ ಆದ ವಿಧಿ ನಗುತ್ತಿರು ತ್ತದೆ !

ಪದ್ಮಾಕರನ ದೃಷ್ಟಿಯಲ್ಲಿಯ ನಿರ್ವಿಕಾರ, ನಿಷ್ಕಪಟ ಭಾವನೆಯನ್ನು ಕಂಡು ಸುಖವಾಗುತ್ತಿತ್ತಲ್ಲಃ ಅವಳಿಗೆ ಮೊದಲು? ಅದೇ ಭಾವನೆಯನ್ನು ಕಂಡು ಅವಳಿಗೆ ಆಶ್ಚರ್ಯ, ಸಿಟ್ಟು, ದುಃಖಗಳುಂಟಾಗಲು ಮುಂದೆ ಮೂರು ವರುಷಗಳು ಕೂಡ ಬೇಕಾಗಲಿಲ್ಲ.

ಅವಳೀಗ ಕಾಲೇಜಿನಲ್ಲಿ ಎರಡನೆಯ ವರುಷದ ಪರೀಕ್ಷೆಗೆ ಕುಳಿತಿದ್ದಳು. ತಂದೆಯವರಂತೆ ರಸಾಯನ ಶಾಸ್ತ್ರಜ್ಞಳಾಗಬೇಕೆಂದು ಅವಳ ಇಚ್ಛೆಯಿದ್ದದ ರಿಂದ ' ಆರ್ಟ್ಸ ' ನ್ನು ಬಿಟ್ಟುಕೊಟ್ಟು ' ಸಾಯಿನ್ಸ್ ' ವಿಷಯವನ್ನೇ ಅವಳು ಆರಿಸಿದ್ದಳು. ಬಿ. ಎಸ್‌ಸಿ. ಯಾದ ಮೇಲೆ ಮುಂದೆ ವಿದ್ಯಾಭ್ಯಾಸಕ್ಕಾಗಿ

ಜರ್ಮನಿಗೆ ಹೋಗುವದಾಗಿಯೂ ಅವಳು ಹೇಳುತ್ತಿದ್ದಳು. ಜನರೆಲ್ಲ ವಿದ್ಯಾಭ್ಯಾಸಕ್ಕಾಗಿ ಅವಳು ಪರದೇಶಕ್ಕೆ ಹೋಗಲು ಬಹಳ ಉತ್ಸುಕಳಾಗಿದ್ದಾಳೆಂದು ತಿಳಿದಿದ್ದರು. ಅವಳ ತಂದೆಯೂ ಹಾಗೇ ನಂಬಿದ್ದರು. ಶಕುಂತಲೆ ತನ್ನ ಬಿ. ಎಸ್‌ಸಿ. ಯನ್ನು ಮುಗಿಸಲು ಇನ್ನೂ ಎರಡು ವರ್ಷಗಳಿರುವಾಗಲೇ ಅವಳು ಜರ್ಮನಿಯಲ್ಲಿ ಯಾವ ವಿಶ್ವವಿದ್ಯಾಲಯ ಚೆನ್ನಾಗಿದೆ, ಎಲ್ಲಿದ್ದರೆ ಎಷ್ಟು ವೆಚ್ಚ ಬರುತ್ತದೆ, ಇತ್ಯಾದಿ ವಿವರಗಳನ್ನೆಲ್ಲ :ಕಲೆ ಹಾಕುತ್ತಿದ್ದಳು. ಈ ವಿವರಗಳನ್ನವರು ಶಕುಂತಲೆಗೆ ಹೇಳತೊಡಗಿದಾಗ ಮದುವೆಯ ಹಂಬಲವುಳ್ಳ ಅವಳು ಲಕ್ಷ್ಯಗೊಟ್ಟು ಕೇಳುತ್ತಿದ್ದಳು. ಆದರೆ ಅವಳ ಅಂತರಂಗದಲ್ಲಿ ಬೇರೆಯ ವಿಚಾರಗಳೇ ನಡೆದಿರುತ್ತಿದ್ದವು. ಪದ್ಮಾಕರನ ಮಾತನ್ನೆಲ್ಲ ನೆನೆಸಿಕೊಂಡು ಅದರಲ್ಲಿ ತನಗೆ ಬೇಕಾದ ಒಂದು ಶಬ್ದವಾದರೂ ಸಿಕ್ಕೀತೇನೋ ಎಂದು ಉತ್ಸುಕತೆಯಿಂದ ಹುಡುಕುತ್ತಿದ್ದಳು. ಪ್ರತ್ಯಕ್ಷ ಶಬ್ದಗಳಿಂದ ವ್ಯಕ್ತವಾಗದ ಭಾವನೆ ಅವನ ನೀತಿ ನಡತೆಯಲ್ಲಿ, ದೃಷ್ಟಿಯಲ್ಲಿ ವ್ಯಕ್ತವಾಗುವದೇನೋ ಎಂದು ಅವನನ್ನು ತಾನು ಕಂಡ ಪ್ರಸಂಗಗಳನ್ನೆಲ್ಲ ನೆನೆಸಿಕೊಳ್ಳುತ್ತಿದ್ದಳು. ಆದರೆ ಅವಳಿಗೆ ಬೇಕಾದುದು ಅಲ್ಲಿಯೂ ದೊರೆಯುತ್ತಿರಲಿಲ್ಲ. ಪದ್ಮಾಕರನ ನಿರ್ವಿಕಾರ ಸರಳ ದೃಷ್ಟಿ ಅವಳಿಗೆ ಬೇಸರವನ್ನುಂಟುಮಾಡಿತು. ಅವನ ಸ್ನೇಹ ಇಷ್ಟೊಂದು ಪವಿತ್ರವಾಗಿರದಿದ್ದರೇ ಅವಳಿಗೆ ಕೊಂಚ ಸಮಾಧಾನವೆನಿಸುತ್ತಿತ್ತು.

ತಮ್ಮ ಮನಸ್ಸಿನ ವ್ಯಾಪಾರಗಳನ್ನೇ ಪೃಥಕ್ಕರಿಸಿ ನೋಡುವದು ಕೆಲವರ ಸ್ವಭಾವವಾಗಿರುತ್ತದೆ. ಪದ್ಮಾಕರನ ವಿಷಯದಲ್ಲಿ ತನ್ನ ಮನೋವೃತ್ತಿ ಯಾವಾಗ ಬದಲಾಯಿತು, ಬರೀ ಶುದ್ಧ ಸ್ನೇಹವೊಂದೇ ಅಲ್ಲ, ಅವನಿಂದ ಬೇಕಾದುದು, ಇನ್ನೂ ಹೆಚ್ಚಿಗೆ ಇದೆ, ಎಂಬ ಭಾವನೆ ತನ್ನಲ್ಲಿ ಯಾವಾಗ ತಲೆದೋರಿತು ಇತ್ಯಾದಿ ವಿಷಯಗಳನ್ನೆಲ್ಲ ಕುರಿತು ಶಕುಂತಲೆ ಮೆಲುಕು ಹಾಕುತ್ತಲೇ ಇದ್ದಳು. ತನ್ನ ಅಂತಃಕರಣ ಅವನ ಅಧೀನಕ್ಕೇಕೆ ಒಳಗಾಯಿತು ಮತ್ತು ಎಂದು ಆಯಿತು ಎಂಬುದನ್ನು ನಿಶ್ಚಯಪೂರ್ವಕವಾಗಿ ಹೇಳುವದು ಅವಳಿಗೆ ಕಠಿಣವೆನಿಸಿದರೂ ಆದ ಈ ವ್ಯತ್ಯಾಸ ಅವಳಿಗೆಂದು ಕಂಡುಬಂದಿತೆಂಬುದನ್ನು ಅವಳು ನಿಶ್ಚಯವಾಗಿ ಹೇಳುತ್ತಿದ್ದಳು.

ಹೊಸ ವರ್ಗವಾದ 'ಇಂಟರ್ ಸಾಯಿನ್ಸ' ದಲ್ಲಿ ಅವಳು ಅವೇ

ಹೋಗಲು ಪ್ರಾರಂಭ ಮಾಡಿದ್ದಳು. ಅಭ್ಯಾಸ ಇನ್ನೂ ಸುರುವಾಗಿರಲಿಲ್ಲ. ಮಳೆಗಾಲ ಮಾತ್ರ ಪ್ರತಿಸಲಕ್ಕಿಂತ ಬೇಗನೇ ಸುರುವಾಗಿತ್ತು, ಒಳ್ಳೇ ಜೋರಿನಲ್ಲಿಯೂ ಇತ್ತು; ಊರಲ್ಲೆಲ್ಲ ಕೆಮ್ಮು, ಜ್ವರಗಳ ಪಿಡುಗು ಹಬ್ಬು ತ್ತಿತ್ತು. ಶಕುಂತಲೆಗೂ ಅದು ತಟ್ಟಿತು. 'ಇದೇನು ಮಹಾ!' ಎಂದು ಮೊದಮೊದಲು ಅವಳು ಈ ವಿಷಯವನ್ನು ತಂದೆಗೆ ತಿಳಿಸಲೇ ಇಲ್ಲ. ಆದರೆ ಮೂರನೆಯ ದಿನ ಅವಳಿಗೆ ತೀರ ನಿಃಶಕ್ತಿಯೆನಿಸಿ ಹಾಸಿಗೆಯ ಮೇಲೆ ಎದ್ದು ಕೂಡುವದೂ ಸಾಧ್ಯವಾಗಲಿಲ್ಲ. ಆಗ ಅವಳ ತಂದೆ ಡಾಕ್ಟರರನ್ನು ಕರೆ ತಂದರು; ಔಷಧ ಸುರುವಾಯಿತು; ಕಟ್ಟಿನ ಜ್ವರವಿರಬೇಕೆಂದು ಡಾಕ್ಟರರು ತರ್ಕ ಮಾಡಿದರು; ಬೇನೆಯನ್ನು ಸಹಿಸುವದು ಶಕುಂತಲೆಗಾಗುತ್ತಿರಲಿಲ್ಲ. ಜ್ವರವೇರಿದಾಗಂತೂ ಅವಳ ಸಂಕಟ ಹೇಳತೀರದು! ಕಣ್ಣುಮುಚ್ಚಿ ಸ್ವಸ್ಥ ವಾಗಿ ಮಲಗಿಬಿಡೆಂದು ಅವಳ ತಾಯಿತಂದೆಗಳು ಹೇಳಿಯೇ ಹೇಳುತ್ತಿದ್ದರು. ಅವಳು ಕೇಳುತ್ತಿರಲಿಲ್ಲ. ತಲೆಯ ಮೇಲಿನ ಬರ್ಫದ ಚೀಲವನ್ನು ಮತ್ತೆ ಮತ್ತೆ ಬದಿಗೆ ಸರಿಸುತ್ತಿದ್ದಳು. ಅತ್ತಿತ್ತ ಹೊರಳಾಡುವದು, ನರಳುವದು, ಬಡಬಡಿಸುವದು ನಡೆದೇ ಇತ್ತು. ಅವಳನ್ನು ಮಾತಾಡಿಸಲು ಎಷ್ಟೋ ಜನ ಬರುತ್ತಿದ್ದರು. ಅವರೊಡನೆಯಾದರೂ ಅವಳ ವರ್ತನ ವಿಚಿತ್ರ ವಾಗಿಯೇ ಇತ್ತು. ಹತ್ತಿರ ಇರಬೇಕಾದವರು ಇಲ್ಲವೆಂದು ಸಿಡಿಮಿಡಿಗೊಳ್ಳು ತ್ತಿದ್ದಳು. ಅವಳ ಈ ಸಿಡುಕು ಮಾತು ಮಾತಿನಲ್ಲಿಯೂ ಕಾಣುತ್ತಿತ್ತು. ಪದ್ಮಾಕರನು ಊರಿಗೆ ಹೋಗಿರಬೇಕೆಂಬ ಕಲ್ಪನೆಯಿಂದಲೇ ಅವಳಿಗೆ ಸಿಟ್ಟು ಬಂದಿತ್ತು. ಹೀಗೆ ಸುಮ್ಮಸುಮ್ಮನೆ ಸಿಟ್ಟಿಗೇಳುವದು ಹುಚ್ಚುತನವೆಂದು ಅವಳು ನೆಟ್ಟಗಿದ್ದಾಗ ಅನಿಸಿದ್ದರೆ ಒಂದು ವೇಳೆ ಸುಮ್ಮನೆ ಬಿಟ್ಟುಬಿಡುತ್ತಿ ದ್ದಳೇನೋ. ಆದರೆ ಈಗ ಮಾತ್ರ ಅವಳಿಗದು ಸಾಧ್ಯವಾಗಲಿಲ್ಲ. ಬೇನೆ ಯಲ್ಲಿ ಮನುಷ್ಯನು ಕೂಡಲೇ ಸಿಟ್ಟಿಗೇಳುತ್ತಾನೆ; ಸಾರಾಸಾರ ವಿಚಾರವೂ ಅವನಲ್ಲಿರುವದಿಲ್ಲ.

ಹೋದ ವರುಷದಿಂದಲೇ ಕೊಲ್ಹಾಪುರದಲ್ಲಿ ರಾಜಕೀಯ ಜಾಗೃತಿ ಯುಂಟಾಗುವ ಲಕ್ಷಣ ಸ್ಪಷ್ಟವಾಗಿ ಕಂಡುಬರುತ್ತಿತ್ತು. ಬ್ರಿಟಿಶರ ರಾಜ್ಯದಲ್ಲಿ ಕಾಂಗ್ರೆಸ್ಸು ಅಧಿಕಾರಾರೂಢವಾಗಿತ್ತು, ಲೋಕಮತದ ಶಕ್ತಿ ಬೆಳೆಯುತ್ತ ಲಿತ್ತು. ಸಂಸ್ಥಾನದಲ್ಲಿಯೂ ಇದರ ಪ್ರತಿಧ್ವನಿ ಕೇಳಬರುತ್ತಿತ್ತು. ಬರೀ

ಮಧ್ಯಮ ವರ್ಗದವರ ಚಳವಳಿಗಿಂತ ಒಕ್ಕಲಿಗರ ಅಸಂತೋಷ ಚಳವಳಿಗಳು ಸರಕಾರದ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಬಲ್ಲವು; ಸಂಸ್ಥಾನದ ಪ್ರಮುಖ ಕಾರ್ಯಕರ್ತರೆಲ್ಲರಿಗೂ ಈ ವಿಷಯ ಗೊತ್ತಿತ್ತು; ಮತ್ತು ಅವರಾದರೂ ಅದೇ ದೃಷ್ಟಿಯಿಂದಲೇ ಚಳವಳಿಯನ್ನು ಸಾಗಿಸಿದ್ದರು. ಶಾಹೂ ಮಹಾರಾಜರ ಕಾಲದಿಂದಲೇ ಪ್ರಜೆಗಳು ತೀರ ದುರ್ಬಲರಾಗಿಬಿಟ್ಟಿದ್ದರು. ರಾಜ್ಯಕಾರಭಾರದ ಬಗ್ಗೆ ಎಳ್ಳಷ್ಟು ಟೀಕೆಯಾದರೂ ಅದನ್ನು ಸಹಿಸಿಕೊಳ್ಳುವ ಶಕ್ತಿ ರಾಜ್ಯದ ಅಧಿಕಾರಿಗಳಲ್ಲಿ ಉಳಿದಿರಲಿಲ್ಲ ಚಳವಳಿಯಲ್ಲಿ ಪ್ರಮುಖ ಭಾಗ ವಹಿಸುವವರಿಗೂ, ಅದರೆಡೆಗೆ ಸಹಾನುಭೂತಿಯಿಂದ ನೋಡುವವರಿಗೂ ಈ ಸಂಗತಿ ಗೊತ್ತೇ ಇತ್ತು. ಇಂತಹ ಪರಿಸ್ಥಿತಿಯಲ್ಲಿ ಪ್ರಜೆಗಳು ಸರಕಾರದ ವಿರುದ್ಧ ಕೂಗನ್ನೆಬ್ಬಿಸಿದರೆ, ಅದಿನ್ನೂ ದೂರದಲ್ಲಿ ಕೇಳಿಸುತ್ತಿರುವಾಗಲೇ, ಅಧಿಕಾರಿಗಳು ಅದನ್ನು ಕೊನೆಗಾಣಿಸಿಬಿಡಬಹುದು. ಹೀಗಾಗಿ ಜನರಿಗೆ ಮುಂದಾಳುಗಳೇ ಇಲ್ಲದಾಗಿದ್ದರು. ಹೊಸ ಮುಂದಾಳುಗಳು ಮುಂದೆ ಬರದಿದ್ದರೆ ಚಳವಳಿಯ ಶಕ್ತಿಯೇ ಕುಗ್ಗುವಂತಿತ್ತು; ಹಾಗೆ ಮುಂದಾಳುಗಳು ಮುಂದೆ ಬರುವದೂ ಕಠಿಣವಾಗಿಯೇ ಇತ್ತು. ಸರಕಾರದ ವಿರುದ್ಧ ಪ್ರಜೆಗಳು ಹೋರಾಡಬೇಕಾದರೆ, ಪ್ರಜೆಗಳಲ್ಲಿ ಒಕ್ಕಟ್ಟು ಅವಶ್ಯವಾಗಿ ಇರಲೇ ಬೇಕು; ಆದರೆ ಕೊಲ್ಹಾಪುರದಲ್ಲಿ ನೋಡಿದರೆ ಬ್ರಾಹ್ಮಣ, ಮರಾಠಾ, ಜೈನ, ಲಿಂಗಾಯತ, ಮುಸಲ್ಮಾನ ಎಂದು ಜಾತಿ ಜಾತಿಗಳಲ್ಲಿ ಒಳಜಗಳಗಳು ನಡೆದೇ ಇದ್ದವು. ಯಾವ ಮಾರ್ಗವನ್ನು ಹಿಡಿಯುವದಾದರೂ ಅದನ್ನು ಇದರೊಳಗಿಂದಲೇ ಹುಡುಕಿ ತೆಗೆಯಬೇಕು ಎಂಬ ನಿರ್ಧಾರದಿಂದ ಅನೇಕರು ಮುಂದೆ ಬಂದು, ಒಕ್ಕಲಿಗರನ್ನು ಬಡಿದೆಬ್ಬಿಸತೊಡಗಿದರು; ಮುಂದೆ ೧೯೩೯ ರ ಜೂನ ತಿಂಗಳಲ್ಲಿ ಕೊಲ್ಹಾಪುರದ ಪ್ರಜಾಪರಿಷತ್ತು ಸ್ಥಾಪಿಸಲ್ಪಟ್ಟಿತು.

ಮೊದಲಿನಿಂದಲೂ ಪದ್ಮಾಕರನು ಈ ಚಳವಳಿಯಲ್ಲಿ ಇದ್ದೇ ಇದ್ದನು. ೧೯೩೭ ರಲ್ಲಿ ಪದವಿಯನ್ನು ದೊರಕಿಸಿದ ಬಳಿಕ ಶಿಕ್ಷಣವನ್ನು ಮತ್ತೆ ಮುಂದುವರಿಸುವ ಯೋಜನೆ ಅವನದಿರಲಿಲ್ಲ; ದೇಶಸೇವೆಯ ಕಾರ್ಯವನ್ನು ಮಾಡುವದೆಂದೇ ಅವನು ನಿಶ್ಚಯಿಸಿದ್ದನು. ಅಥವಾ ಅವನ ಮನೆತನದ ಇತಿಹಾಸವೇ ಅವನನ್ನು ಸಂಸ್ಥಾನದ ರಾಜಕಾರಣದಲ್ಲಿ ಎಳೆದು ತಂದಿತ್ತು.

ಅವನ ಅಜ್ಜ, ಶಾಹೂಮಹಾರಾಜರ ಕಾಲದಲ್ಲಿ ಒಳ್ಳೇ ಮನೆತನಸ್ಥ ಶ್ರೀಮಂತರು; ಆದರೆ ರಾಜಸತ್ತೆಗೆ ಪ್ರತಿಬಂಧವನ್ನು ತಂದೊಡ್ಡುವ ವ್ಯಕ್ತಿಗಳಲ್ಲಿ ಅವರೂ ಒಬ್ಬರಾಗಿದ್ದರು. ಇದರಿಂದ ಉಳಿದ ವ್ಯಕ್ತಿಗಳ ಮೇಲೆ ಗಂಡಾಂತರದ ಪ್ರಸಂಗ ಬಂದಂತೆ, ಅಣ್ಣಾಸಾಹೇಬ ಸೊಹನಿಯವರ ಮೇಲೆಯೂ ಬಂತು; ಅವರ ಆಸ್ತಿಪಾಸ್ತಿಗಳೆಲ್ಲ ಹೋಗಿಬಿಟ್ಟವು. ರಾಜಾಸ್ಥಾನದ ಅವಕೃಪೆಗೆ ಗುರಿಯಾಗಿ, ಬಡತನದಲ್ಲಿ ಜೀವನವನ್ನು ಸಾಗಿಸುವ ಸಮಯ ಸೊಹನಿ ಮನೆತನಕ್ಕೂ ಬಂತು; ಪದ್ಮಾಕರನ ತಂದೆ ಬಾಪೂಸಾಹೇಬರು ೧೯೩೦ ರಿಂದಲೇ ಕೊಲ್ಹಾಪುರದಲ್ಲಿ ಖಾದೀ ಪ್ರಚಾರದ ಕಾರ್ಯವನ್ನು ಕೈಕೊಂಡಿದ್ದರು. ರಾಜಮನೆತನದ ಅವಕೃಪೆಯಿಂದ ಅಣ್ಣಾಸಾಹೇಬರ ಕಾಲದಲ್ಲಿ ಬಂದಿದ್ದ ದಾರಿದ್ರ್ಯದ ಸಂಕಟ, ಬಾಪೂಸಾಹೇಬರಿಗೊಂದು ವ್ರತವಾಗಿಬಿಟ್ಟಿತು. ನಿರ್ದಿಷ್ಟ ವೇಳೆಯಲ್ಲಿ ಅತಿ ಹೆಚ್ಚು ನೂಲು ತೆಗೆದುಕೊಡುವ ನೂಲಿನ ರಾಟೆಗೆ ಒಂದು ಲಕ್ಷ ರೂಪಾಯಿ ಬಹುಮಾನ ಕೊಡಲಾಗುವದೆಂದು ಗಾಂಧೀಜಿಯವರು ಸಾರಿದ್ದರು. ಅದನ್ನು ದೊರಕಿಸಬೇಕೆಂಬ ಮಹತ್ವಾಕಾಂಕ್ಷೆ ಬಾಪೂಸಾಹೇಬರಿಗೆ! ಅದಕ್ಕಾಗಿ ಅಂತಹ ರಾಟೆಯ ಪರಿಶೋಧನೆಯಲ್ಲಿ ಎರಡು ಮೂರು ವರ್ಷಗಳನ್ನು ಕೂಡ ಅವರು ಕಳೆದರು. ಪದ್ಮಾಕರನಾದರೂ ಇಂತಹ ಕುಟುಂಬದಲ್ಲಿಯೇ ಹುಟ್ಟಿದವನು. ಪದವಿ ದೊರೆತ ಮೇಲೆ ಮತ್ತೆ ಅದೇ ದಾರಿಯಿಂದ ಸಾಗುವದು ಅವನಿಂದ ಸಾಧ್ಯವಿರಲಿಲ್ಲ. ಎಮ್. ಎ. ಅಥವಾ ಎಲ್‌ಎಲ್. ಬಿ. ಯಾಗುವದಕ್ಕಿಂತ ಶಕ್ಯವಿದ್ದಷ್ಟು ಕಾರ್ಯವನ್ನು ರಾಜಕಾರಣದಲ್ಲಿಯೇ ಮಾಡಬೇಕೆಂದು ಅವನ ಲಕ್ಷ. ಆದರೆ ಹೊಟ್ಟೆಯ ಉದ್ಯೋಗ ಒಂದು ಬೇಕಲ್ಲ? ಅದಕ್ಕಾಗಿ ಅವನು ಒಂದು "ಖಾದೀ ಭಾಂಡಾರ" ವನ್ನು ತೆರೆದನು. ಅದು ಮಾತ್ರ ಯಾರನ್ನೂ ಆಶ್ಚರ್ಯಚಕಿತರನ್ನಾಗಿ ಮಾಡಲಿಲ್ಲ.

ಇದನ್ನೆಲ್ಲ ನೋಡಿ ಶಕುಂತಲೆಗೆ, ಅವನಲ್ಲಿದ್ದ ಆದರಾಭಿಮಾನಗಳು ಇನ್ನೂ ಹೆಚ್ಚಿದವು; ಅವಳೀಗ ಕಾಲೇಜಿನಲ್ಲಿ ಓದುತ್ತಿದ್ದಳು; ಒಳ್ಳೇ ರೀತಿಯ ಯಶಸ್ಸಿನೊಡನೆ, ಪದವಿಯನ್ನು ದೊರಕಿಸುವದು ಅವಳ ಮಹತ್ವಾಕಾಂಕ್ಷೆಯಾದ್ದರಿಂದ, ಅದಕ್ಕಾಗಿ ಮನಮುಟ್ಟಿ ಅಭ್ಯಾಸವನ್ನು ಮಾಡುತ್ತಿದ್ದಳು. ಆದರೆ ಉಳಿದ ವೇಳೆಯನ್ನೆಲ್ಲ ಪದ್ಮಾಕರನೊಂದಿಗೆ ಕೆಲಸ ಮಾಡುವದರಲ್ಲಾ

ಗಲಿ, ಅಥವಾ ಅವನಿಗೆ ಉಪಯೋಗವಾಗುವಂಥ ಯಾವವೇ ಕೆಲಸವನ್ನು ತಾನೇ ಮಾಡುವದರಲ್ಲಾಗಲಿ ಅವಳು ಕಳೆಯುತ್ತಿದ್ದಳು. ರವಿವಾರ ಅಥವಾ ರಜೆಯ ದಿನ ಖಾದೀ ಮಾರಲು ಊರಲ್ಲೆಲ್ಲ ಅಡ್ಡಾಡುತ್ತಿದ್ದಳು; ಒಂದೊಂದು ದಿನ ಸಂಜೆಯ ಮುಂದೆ ಪದ್ಮಾಕರನ ಖಾದೀ ಭಾಂಡಾರದಲ್ಲಿ ತಾಸೆರಡು ತಾಸುಗಳ ವರೆಗೆ ಅವನೊಂದಿಗೆ ಕೆಲಸವನ್ನು ಮಾಡುತ್ತಿದ್ದಳು. ಪದ್ಮಾಕರನ ಸಹವಾಸ ಮತ್ತು ಅವನ ಮುಖದಿಂದ ಹೊರಬರುವ ಮೆಚ್ಚಿಕೆಯ ಶಬ್ದ ಗಳೆಂದರೆ ಅವಳ ಜೀವನದಲ್ಲಿ ಅವು ಬಹುಮೂಲ್ಯವಾಗಿದ್ದವು. ಆದರೆ ಆಗ ಅವಳಿಗದು ತಿಳಿಯಲಿಲ್ಲ; ಸೂಕ್ಷ್ಮವಾಗಿ ಬೆಳೆಯುತ್ತ ಹೊರಟ ಅವುಗಳ ಮೂಲ್ಯ ಅವಳು ಹಾಸಿಗೆ ಹಿಡಿದಾಗಲೇ ಅವಳಿಗೆ ತಿಳಿದದ್ದು.

ಪದ್ಮಾಕರನು ಬಂದು ತನ್ನ ಹಾಸಿಗೆಯ ಬಳಿ ಕುಳಿತು, ಅತ್ತಿತ್ತಲಿನ ಸುದ್ದಿಗಳನ್ನೆಲ್ಲ ಹೇಳುತ್ತಿದ್ದರೆ ತನ್ನ ಜಡ್ಡು ಹೇಗೋ ಹಾರಿಹೋಗುವದೆಂದು ಅವಳ ಮನಸ್ಸು ಮತ್ತೆ ಮತ್ತೆ ಯೋಚಿಸುತ್ತಿತ್ತು. ಅವನು ಬಾರದೆ ಇದ್ದುದ ಕ್ಕಾಗಿ ಶಕುಂತಲೆಗೆ ಅವನ ಮೇಲೆ ಎಲ್ಲಿಲ್ಲದ ಸಿಟ್ಟು. ಶಿರೋಳಪೇಟೆಯ ಕಡೆಗೆ ಅವನು ಪ್ರಚಾರಕ್ಕಾಗಿ ಹೋದದ್ದು ಅವಳಿಗೆ ಗೊತ್ತಿತ್ತು. ಆದರೂ ಪತ್ರ ಹಾಕಿ ಅವನನ್ನು ಕರೆಕಳುಹಿಸಿರಿ ಎಂದು ತಂದೆಗೆ ಹೇಳಿಬಿಡೋಣವೇ ಎಂದೂ ಒಂದೊಂದು ಸಲ ಅನಿಸುವದು. ಆದರೆ ಅದೇಕೋ ಹಾಗೆ ಹೇಳಲು ಅವಳಿಗೆ ನಾಚಿಕೆ ಎನಿಸತೊಡಗಿತು. ಆ ನಾಚಿಕೆಯ ಅರ್ಥವನ್ನು ನೆನೆದುಕೊಂಡು ಅವಳು ಹಿಂಜರಿದಳು.

ಬರಬರುತ್ತ ಅವಳನ್ನು ಹಿಂಜರಿಯಲು ಹಚ್ಚಿದ್ದ ಆ ಭಾವನೆಯೂ ಅವಳಿಗೆ ರೂಢವಾಯಿತು. ಪದ್ಮಾಕರನ ಬಗ್ಗೆ ತನ್ನಲ್ಲಿ ಅತಿಶಯ ಪ್ರೀತಿ ಯಿದೆ ಎಂಬ ಭಾವನೆಯನ್ನು ಗೃಹೀತವೆಂದೇ ಇಟ್ಟು, ಅವಳು ಮುಂದು ವರೆಯತೊಡಗಿದಳು. ಪದ್ಮಾಕರನಿಗೆ ತನ್ನ ಮೇಲೆ ಪ್ರೀತಿ ಇದೆಯೋ ಇಲ್ಲವೇ ಎಂಬುದನ್ನು ಪರೀಕ್ಷಿಸುವದಕ್ಕಾಗಿ ಅನೇಕ ಯುಕ್ತಿಗಳನ್ನು ಕಂಡು ಹಿಡಿಯುವದರಲ್ಲಿಯೇ ಅವಳ ಮನಸ್ಸು ತೊಡಗಿರುತ್ತಿತ್ತು. ಆದ್ದರೆ ಎಷ್ಟು ಪರೀಕ್ಷಿಸಿದರೂ ಹಾಗಿದೆಯೆಂದು ಅವಳಿಗೆ ವಿಶ್ವಾಸವೆನಿಸದು. ಅದರಿಂದ ಅವಳ ಮನಸ್ಸು ಬಹಳೇ ನೊಂದುಕೊಳ್ಳುತ್ತಿತ್ತು. 'ಪದ್ಮಾಕರನು ಸಾಮಾನ್ಯ ಮನುಷ್ಯರಂತಲ್ಲ, ಅವನಿರುವ ರೀತಿಯೇ ಬೇರೆ; ಅವನ ಪ್ರೇಮ ನನ್ನ ಮೇಲಿಕ

ದಿದ್ದರೆ, ಪ್ರೇಮ ಪ್ರೇಮವೆಂದು ತಾನು ಕೂಗುವದರಲ್ಲೇನೂ ಅರ್ಥವಿಲ್ಲ' ವೆಂದು ತನಗೆ ತಾನೇ ಹೇಳಿಕೊಳ್ಳುತ್ತಿದ್ದಳು; ಆದರೆ ಅವಳ ಮನಸ್ಸು ಕೇಳುತ್ತಲೇ ಇರಲಿಲ್ಲ. ಪದ್ಮಾಕರನು ಮನಸ್ಸಿನಲ್ಲಿ ಒಳಗೊಳಗೇ ತನ್ನ ಬಗ್ಗೆ ಅನುರಕ್ತನಾಗಿರಬಹುದೆಂದು ಅವಳ ಮನಸ್ಸು ಮತ್ತೆ ಆಶಿಸುತ್ತಿತ್ತು. ಅದಕ್ಕೇ ಹೆಚ್ಚಿನ ಶಿಕ್ಷಣಕ್ಕಾಗಿ ಅವಳನ್ನು ಜರ್ಮನಿಗೆ ಕಳಿಸುವದೆಂದು ಅವಳ ತಂದೆ ಮಾತನಾಡತೊಡಗಿದರೆ, ಅವಳೇನೋ ಕೇಳುತ್ತಿದ್ದಳು. ಆದರೆ ಒಳಗೊಳಗೆ ಅವಳ ವಿಚಾರಗಳೇ ಬೇರೆಯಾಗಿರುತ್ತಿದ್ದವು.

* * * *

ಕಾಲೇಜದ ಮುಖ್ಯ ಕಟ್ಟಡದ ಹಿಂಬದಿಗೆ, ದಕ್ಷಿಣದಲ್ಲಿ ಹಳೆಯ ಅರಮನೆಯ ಪಟಾಂಗಣವಿದೆ. ಮಹಾರಾಜರು ತಮ್ಮ ಮೆಚ್ಚಿಕೆಯ ಜನರೊಂದಿಗೆ ನಿತ್ಯ ನಸುಕಿನಲ್ಲಿ ಕುದುರೆಸವಾರಿಗೆ ಹೊರಟು ಹಿಂದಿರುಗುವಾಗ, ಈ ಹಳೆಯರಮನೆಯಲ್ಲಿಯ ದೇವಿಯ ದರ್ಶನವನ್ನು ಪಡೆದು, ಫಲಾಹಾರವನ್ನೆಲ್ಲ ಪೂರೈಸಿಕೊಂಡು ಹೊಸ ಅರಮನೆಗೆ ಹೊರಡುವದು ರೂಢಿಯಾಗಿತ್ತು. ಶನಿವಾರ, ಕೊಲ್ಹಾಪುರದಲ್ಲಿ ಮುಂಜಾನೆ ಕಾಲೇಜು. ಕಾಲೇಜು ಸುರುವಾಗಲು ಇನ್ನೂ ಕೊಂಚ ಹೊತ್ತು ಇರುವಾಗಲೇ ಮಹಾರಾಜರು ಕುದುರೆ ಸವಾರಿಯನ್ನು ಮುಗಿಸಿಕೊಂಡು ತಮ್ಮ ಪರಿವಾರದೊಂದಿಗೆ ಆ ಪಟಾಂಗಣದಲ್ಲಿ ವಿಶ್ರಾಂತಿಗಾಗಿ ಬಂದು ಕುಳ್ಳಿರುತ್ತಿದ್ದರು. ದಣಿದ ಬೆವರಿನಿಂದ ಆರ್ದ್ರವಾದಂಥ ತೇಜಃಪುಂಜವಾದ ಅವರ ಕುದುರೆಗಳು, ಅವುಗಳ ಮೈಮೇಲೆ ಬಿದ್ದ ಸೂರ್ಯನ ಎಳೆ ಬಿಸಿಲು, ಕುದುರೆ ಸವಾರಿಗಾಗಿ ವಿಶಿಷ್ಟ ವೇಷವನ್ನು ಧರಿಸಿ, ತಲೆಗೆ ಬಣ್ಣಬಣ್ಣದ ರುಮಾಲನ್ನು ಸುತ್ತಿ, ಆ ಕುದುರೆಗಳ ಮೇಲೆ ಒಳ್ಳೇ ದರ್ಪದಿಂದ ಕುಳಿತ ಸವಾರರು, ಕುದುರೆಗಳ ಲಗಾಮನ್ನು ಕೊಂಚ ಸಡಿಲು ಬಿಟ್ಟು, ಅವುಗಳ ಮೇಲೆ ಕುಳಿತೇ ಅವರು ನಡೆಸಿದ ವಿನೋದ, ಸುಮ್ಮನೆ ಒಂದೆಡೆಗೆ ನಿಲ್ಲಲಾರದೆ ನೆಲವನ್ನು ಕೆದರಿ ಹೇಕರಿಸುತ್ತಿದ್ದ ಕುದುರೆಗಳು— ಇವುಗಳನ್ನೆಲ್ಲ ನೋಡಲು ಕಾಲೇಜದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಆ ಕಟ್ಟಡದ ಬದಿಗೆ ಅಥವಾ ಕಾಲೇಜದ ಮೂರನೆಯಂತಸ್ತಿನ ಮಾಳಿಗೆಯಲ್ಲಿ ಗುಂಪುಗೂಡಿ ನಿಲ್ಲುತ್ತಿದ್ದರು. ಮೊದಲ

ನೆಯ ತಾಸು ಪ್ರಾರಂಭವಾಗುವ ಗಂಟೆ ಬಡಿದಾಗಲೇ ಅವರು ಆ ಸ್ಥಳವನ್ನು ಬಿಟ್ಟು ಕದಲುತ್ತಿದ್ದರು.

೧೯೩೬ಲ ನೆಯ ಇಸ್ವಿ ಸಪ್ಟೆಂಬರ ತಿಂಗಳಿನ ಒಂದು ಶನಿವಾರ; ಅಂದು ಮಾತ್ರ ಗಂಟೆಯಾದರೂ ವಿದ್ಯಾರ್ಥಿಗಳು ತಮ್ಮ ವರ್ಗಗಳ ಕಡೆಗೆ ಹೊರಳ ಲಿಲ್ಲ; ನಿತ್ಯ ಹತ್ತು ಹದಿನೈದು ನಿಮಿಷಗಳ ವರೆಗೆ ಮಾತ್ರ .ವಿಶ್ರಾಂತಿಯನ್ನು ಪಡೆದು ತಮ್ಮ ಅರಮನೆಯ ದಾರೀ ಹಿಡಿಯುತ್ತಿದ್ದ ಮಹಾರಾಜರೂ ಇಂದು ಹಾಗೆ ಮಾಡಲಿಲ್ಲ. ಇಂದೇನೋ ಬೇರೆಯೇ ನಡೆದಿತ್ತು; ವಿದ್ಯಾರ್ಥಿಗಳಿಗೂ ಮೊದಲೇ ಇದರ ಸುಳಿವು ಗೊತ್ತಿತ್ತೆಂದು ಕಾಣುತ್ತದೆ. ಕಾಲೇಜ ಕಟ್ಟಡಕ್ಕೆ ಹೊಂದಿಯೇ ಪಶ್ಚಿಮ ದಿಕ್ಕಿಗೆ ಹಳೆಯರಮನೆಯ ಭವ್ಯವಾದ ಪ್ರವೇಶದ್ವಾರ ವಿದೆ. ಈ ದ್ವಾರದ ಇಬ್ಬದಿಗೂ ದೊಡ್ಡ ದೊಡ್ಡ ಆನೆಗಳು ತಲೆದೂಗುತ್ತ ನಿಂತಿರುತ್ತವೆ. ಮೇಲೆ ಕಮಾನಿನಲ್ಲಿ ನಗಾರಿ ನೌಬತ್ತುಗಳನ್ನಿಡುವ ಮನೆ ಯಿದೆ. ಅಲ್ಲಿ ನಿರ್ದಿಷ್ಟ ವೇಳೆಗೆ " ಸನಇ " ಕೇಳಬರುತ್ತದೆ; ಅಲ್ಲದೆ ಸ್ವತಃ ಮಹಾರಾಜರಾಗಲಿ ಅಥವಾ ಅವರ ಕುಟುಂಬದ ಸನ್ಮಾನ್ಯ ವ್ಯಕ್ತಿಗಳಾಗಲಿ ಬಂದರೆ ಅಲ್ಲಿಯ ನಗಾರಿಯನ್ನು ಬಾರಿಸಲಾಗುತ್ತಿತ್ತು. ತಮ್ಮ ನಿತ್ಯದ ಕುದುರೆಸವಾರಿಯ ನಂತರ ವಿಶ್ರಾಂತಿಯನ್ನು ಪಡೆದು ಮಹಾರಾಜರೂ ಅವರ ಪರಿವಾರದವರೂ ಇದೇ ಮಾರ್ಗದಿಂದಲೆ,—ಆ ಭವ್ಯ ಕಮಾನಿನೊಳ ಗಿಂದ ಹಾಯ್ದು ಮುಂದುವರಿಯುತ್ತಿದ್ದರು. ಪ್ರಜೆಗಳ ತಕರಾರುಗಳನ್ನೆಲ್ಲ ಮಹಾರಾಜರ ಕಿವಿಯ ಮೇಲೆ ಹಾಕಲು, ಮುಂದಾಳುಗಳು ಅದೆಷ್ಟೋ ಪ್ರಯತ್ನ ಮಾಡಿದರು. ಆದರೆ ಮಹಾರಾಜರ ಭೆಟ್ಟಿಯಾಗುವ ಸಂಭವವೇ ಇರಲಿಲ್ಲ. ಅದಕ್ಕೆಂದೇ ಹೀಗೆ ನಿಶ್ಚಯವನ್ನು ಮಾಡಿಬಿಟ್ಟರು. ಮಹಾ ರಾಜರು ತಮ್ಮ ಸವಾರಿಯ ನಂತರ ವಿಶ್ರಾಂತಿಯನ್ನು ಪಡೆದು ಹೊರಬೀಳು ವಾಗ ಅವರ ಕುದುರೆಯನ್ನು ತಡೆಗಟ್ಟಿಯೇ ಬಿಡುವದೆಂದು. ಹೀಗೆ ನಿಶ್ಚ ಯಿಸಿದ ಸುದ್ದಿ ಬಹು ಜನರಿಗೆ ಅದಾಗಲೇ ತಿಳಿದುಬಿಟ್ಟಿತ್ತು. ಕಾಲೇಜಿನ ಆವಾರದಲ್ಲಿ ಮತ್ತು ಮಾಳಿಗೆಯ ಮೇಲೆ ವಿದ್ಯಾರ್ಥಿಗಳು ಗುಂಪುಗಟ್ಟಿ ನೆರೆ ದಂತೆ ಈ ಪ್ರವೇಶದ್ವಾರದ ಬಳಿ ನಾಗರಿಕರ ಸಮುದಾಯ ಕೂಡಿತ್ತು. ಈ ದ್ವಾರದಿಂದ ಮುಖ್ಯ ರಸ್ತೆಯ ವರೆಗಿನ ದಾರಿಯನ್ನು ಪೋಲೀಸರು ಗುರುತು ಮಾಡಿ ಇಟ್ಟಿದ್ದರು. ಏನೋ ಭಯಂಕರ ದಂಗೆಯಾಗುವದೆಂಬ ಕಲ್ಪನೆ

ಯಿಂದ ಸಶಸ್ತ್ರ ಕುದುರೆಸವಾರರೂ ಪೋಲೀಸರೂ ಇಲ್ಲಿ ಸಿದ್ಧರಾಗಿ ನಿಂತಿದ್ದರು. ಇಪ್ಪತ್ತು ವರ್ಷಗಳಿಂದ ಗಾಢನಿದ್ರೆಯಲ್ಲಿದ್ದ ಕೊಲ್ಹಾಪುರದಲ್ಲಿ ಇಂಥ ಒಂದು ಸಣ್ಣ ಘಟನೆ ಕೂಡ ಜನರಿಗೆ ರೋಮಾಂಚಕಾರಿಯಾಗಿತ್ತು. ಮಹಾರಾಜರ ಕುದುರೆಯನ್ನು ತಡೆಗಟ್ಟಲು ನಿಂತ ನಾಲ್ಕೈದು ವ್ಯಕ್ತಿಗಳನ್ನು ನೋಡಿ ಈಗೇನೋ ವಿಲಕ್ಷಣ ಘಟನೆ ನಡೆಯುವದೆಂದು ಜನ ಆಡಿಕೊಳ್ಳುತ್ತಿದ್ದರು. ಮಹಾರಾಜರ ಸ್ವಾರಿ ಹೊರಬೀಳುವದು ತಡವಾದಂತೆ, ಜನರ ಕಲ್ಪನೆ ಇನ್ನಷ್ಟು ದೃಢವಾಗತೊಡಗಿತು. ಅಂತೂ ಪರಿಸ್ಥಿತಿಗೆ ನಾಟಕದ ಕಳೆ ಕಟ್ಟಿತ್ತು.

ಮಹಾರಾಜರಿಗೆ ಜನರ ತಕರಾರುಗಳ ವರದಿಯನ್ನೊಪ್ಪಿಸುವ ಮುಂದಾಳುಗಳಲ್ಲಿ ಪದ್ಮಾಕರನೂ ಇದ್ದನು. ಕಾಲೇಜದ ಮಾಳಿಗೆಯ ಮೇಲೆ ನಿಂತಿದ್ದ ಶಕುಂತಲೆ, ಅವನನ್ನು ಮನವಾರೆ ನೋಡಿಕೊಳ್ಳುತ್ತಿದ್ದಳು; ಅವಳ ಬಳಿಯಲ್ಲಿ ನಿಂತಿದ್ದ ವಿದ್ಯಾರ್ಥಿಗಳು, " ಅವನೇ, ಅವನೇ ಪದ್ಮಾಕರ ಸೊಹನಿ " ಎಂದು ತಮ್ಮತಮ್ಮೊಳಗೇ ಮಾತಾಡಿಕೊಳ್ಳುತ್ತಿದ್ದರು. ಅದನ್ನು ಕೇಳುತ್ತಿದ್ದ ಶಕುಂತಲೆಯ ಶರೀರವು ಹರ್ಷಪುಲಕಿತವಾಗುತ್ತಿತ್ತು. ಅವಳು ಒಳಗೊಳಗೇ ಹೇಳಿಕೊಳ್ಳುತ್ತಿದ್ದಳು, " ಹಾಂ, ಅವನೇ ಪದ್ಮಾಕರ, ನಾನು ಪ್ರೀತಿಸುವ ಪದ್ಮಾಕರ ! ಆದರೆ ಅವನು ನನ್ನನ್ನು ಪ್ರೀತಿಸುತ್ತಾನೋ ಇಲ್ಲವೋ ಹೇಳಲಾರೆ ! ನನ್ನ ದುರ್ದೈವ, ಇನ್ನೇನು ? " ಜನಸಂದಣಿಯು ಚಿಂತಾಯುಕ್ತವಾಗಿ ' ಇನ್ನೇನು ಘಟಿಸುವದೋ ' ಎಂದು ಎದುರು ನೋಡುತ್ತಲಿತ್ತು. 'ಮಹಾರಾಜರೂ ಅವರ ಸವಾರರೂ ದಿನದಂತೆಯೇ ಹೊರಬಂದು ಕುದುರೆಗಳನ್ನು ನಿಲ್ಲಿಸದೆ ವೇಗವಾಗಿ ಓಡಿಸಿಬಿಟ್ಟರೆ ? ಮುಂದಾಳುಗಳ ಗತಿ ? ಅವರಿಗೆ ಕುದುರೆಗಳ ಖುರಪುಟದ ಪ್ರಸಾದವೇ ಸಿಗಬಹುದಲ್ಲ ! ' ಎಂಬ ಪಿಸುಗುಟ್ಟುವ ಮಾತನ್ನು ಕೇಳಿ ಶಕುಂತಲೆಯ ಹೃದಯ ನಡುಗುತ್ತಿತ್ತು ! ಆದರೆ ಏನಾದರೂ ಪದ್ಮಾಕರನು ಮಾತ್ರ ಹಿಂಜರಿಯುವವನಲ್ಲ ಎಂಬುದು ಶಕುಂತಲೆಗೆ ಗೊತ್ತು. ಅವನಿಗೆ ನಿಶ್ಚಯಿಸಿದಷ್ಟು ಆಗಲೇ ಬೇಕು; ಭೀತಿ ಎಂಬುದು ಅವನಲ್ಲಿರಲೇ ಇಲ್ಲ; ಗಾಂಧೀಜಿಯವರ ನಿಸ್ಸೀಮ ಅನುಯಾಯಿಗಳಲ್ಲಿ ಅವನೊಬ್ಬನು. ಅವನ ಬಗ್ಗೆ ಆದರಾಭಿಮಾನಗಳಿಂದ ಶಕುಂತಲೆಯ ಅಂತಃಕರಣ ಉಕ್ಕಿ ಬರುತ್ತಿತ್ತು. ಆದರೆ ಮತ್ತೆ ಮತ್ತೆ ಅವಳು ಹಳಹಳಿಸು

ತ್ತಿದ್ದ ವಿಷಯ ಒಂದಿತ್ತು; ತಾನು ಪದ್ಮಾಕರನ ಬಗ್ಗೆ ಇಷ್ಟು ಅನುರಕ್ತಳಾಗಿ ದ್ದರೂ ಅವನಿಗೇಕೆ ಅದು ಕಾಣಿಸದು? ತಾನು ಇಚ್ಛಿಸುವ ಪ್ರೀತಿ ಅವನ ಅಂತಃಕರಣದಲ್ಲಿ ಎಳ್ಳಷ್ಟೂ ಇಲ್ಲವೇ? ಆ ಪ್ರೀತಿ ಉಂಟೋ ಇಲ್ಲವೋ ಎಂದು ಪರೀಕ್ಷಿಸುವ ಪ್ರಯತ್ನ ಮಾಡಿ ಅವಳು ದಣಿದುಹೋಗಿದ್ದಳು.

ಅಷ್ಟರಲ್ಲಿಯೇ ಪ್ರವೇಶದ್ವಾರದ ಮೇಲಿನ ನಗಾರಿ ಬಡಿಯಿತು. ಮಹಾ ರಾಜರ ಸವಾರಿ ಹೊರಬಿದ್ದಿತೆಂದು ಕೂಡಿದ ಜನರೆಲ್ಲ ನೋಡತೊಡಗಿದರು. ಮರುಕ್ಷಣದಲ್ಲಿಯೇ ಬಾಗಿಲ ಬಳಿ ಕುದುರೆಗಳ ಖುರಪುಟದ ಸಪ್ಪಳ ಕೇಳ ಬಂತು. ಪೋಲೀಸರು ಶೀಟಿಗಳನ್ನೂದಿದರು. ' ದೂರ ಸರಿಯಿರಿ, ದೂರ ಸರಿಯಿರಿ ' ಎಂಬ ಕೂಗು ದೂರದಿಂದಲೇ ಬಂತು. ಬಾಗಿಲಿನಿಂದ ಮೊದಲು ಹೊರಬಂದವರು ಮಹಾರಾಜರೇ; ತಕರಾರುಗಳ ವರದಿಯನ್ನು ಕೈಯಲ್ಲಿ ಹಿಡಿದ ಮುಂದಾಳುಗಳಲ್ಲಿ ಒಂದಿಬ್ಬರು ಒಂದೆರಡು ಹೆಜ್ಜೆ ಮುಂದುವರಿದಂತೆ ಮಾಡಿದರು. ಇನ್ನೊಂದೇ ಕ್ಷಣದಲ್ಲಿ ರೋಮಾಂಚಕಾರಕ ಘಟನೆ ನಡೆದು ಹೋಗುವದು! ' ಮಹಾತ್ಮಾ ಗಾಂಧೀಕಿ ಜಯ ' ಎಂಬ ಕೂಗೂ ಭಾವ ನಾವೇಶದಲ್ಲಿ ಕೇಳಬರುತ್ತಿತ್ತು! ಸಶಸ್ತ್ರ ಕುದುರೆ ಸವಾರರ ಕೈಗಳೂ ಕುದ ರೆಗಳ ಲಗಾಮನ್ನು ಜಗ್ಗಿ ಹಿಡಿದು ನಿಲ್ಲಿಸಿದವು. ಪಟಾಂಗಣದಲ್ಲಿ, ರಸ್ತೆಯ ಮೇಲೆ, ಮನೆಮನೆಗಳಲ್ಲಿ ನಿಂತ ಜನರೆಲ್ಲ ಇನ್ನೇನು ಸಂಭವಿಸುವದೋ ಎಂದು ಉಸಿರನ್ನು ಬಿಗಿಹಿಡಿದು ಎವೆಯಿಕ್ಕದೆ ನೋಡುತ್ತಿದ್ದರು.

ಆದರೆ ಅಂಥ ರೋಮಾಂಚಕಾರಕ ಘಟನೆ ಯಾವುದೂ ನಡೆಯಲಿಲ್ಲ. ಪದ್ಮಾಕರನೂ ಅವನ ಜೊತೆಗಿದ್ದ ನಾಲ್ಕು ಜನರೂ ಮಹಾರಾಜರ ಕುದು' ರೆಯ ಮುಂದೆ ಬಂದರು. ಮಹಾರಾಜರ ಕುದುರೆ ನಿಂತಲ್ಲಿಯೇ ನಿಂತಿತು. ಅದರ ಹಿಂದಿನ ಹತ್ತಿಪ್ಪತ್ತು ಕುದುರೆಗಳೂ ಅಲ್ಲಿಯೇ ನಿಂತವು. ' ಅದೇನು? ಎಂದು ಮಹಾರಾಜರು ತಾವಾಗಿಯೇ ಪ್ರಶ್ನಿಸಿದರು.

" ಪ್ರಜೆಗಳ ತಕರಾರುಗಳ ವರದಿಯನ್ನು ಮಹಾರಾಜರಿಗೆ ಕೊಡುವ ದಿದೆ. "

ವರದಿ ಮಹಾರಾಜರ ಕೈಗೆ ಬಂತು. ಕುದುರೆ ಮುಂದೆ ಸರಿಯಿತು; ಇನ್ನುಳಿದ ಪರಿವಾರವೂ ವೇಗವಾಗಿ ಅದನ್ನೇ ಅನುಸರಿಸಿತು. ಇಬ್ಬದಿಗೂ ನಿಂತ ಜನರು ಬಗ್ಗಿ ಬಗ್ಗಿ ಮಹಾರಾಜರನ್ನು ವಂದಿಸುತ್ತಲೇ ಇದ್ದರು.

ಮುಂದೆ ಒಂದೇ ತಾಸಿನಲ್ಲಿ ಊರಲ್ಲಿ ವಿಧವಿಧದ ಸುದ್ದಿಗಳು ಹಬ್ಬಿದವು. "ಮುಂದಾಳುಗಳನ್ನು ಮಹಾರಾಜರು ತಮ್ಮ ಅರಮನೆಗೇ ಕರೆಸಿದ್ದಾರೆ" ಎಂದು ಕೆಲವರು, ಅವರನ್ನು ಸೆರೆಹಿಡಿಯಲು ವಾರಂಟು ಕೊಟ್ಟಿದ್ದಾರೆ ಎಂದು ಕೆಲವರು, ಅವರ ಮನೆಗಳನ್ನು ಝಡತಿ ಮಾಡುವರೆಂದು ಕೆಲವರು, ಇನ್ನೂ ಏನೇನನ್ನೋ ಹೇಳುತ್ತಲಿದ್ದರು. ಕೆಲವರಂತೂ ಅವರನ್ನು ಆಗಲೇ ಹಿಡಿದು ಪನ್ಹಾಳಕ್ಕೆ ಒಯ್ದು ಕೂಡ ಬಿಟ್ಟರು ಎಂದು ಹೇಳುತ್ತಿದ್ದರು.

ಶಕುಂತಲೆ ದಾರಿಯಲ್ಲಿ ಇವೆಲ್ಲ ಸುದ್ದಿಗಳನ್ನು ಒಂದೊಂದಾಗಿ ಕೇಳುತ್ತಲೇ ಕಾಲೇಜಿನಿಂದ ಮನೆಗೆ ಬಂದಳು. ಈ ಸುದ್ದಿಗಳಲ್ಲಿ ಏನೂ ಹುರುಳಿಲ್ಲವೆಂಬುದು ಅವಳಿಗೆ ಗೊತ್ತಿತ್ತು. ಆದರೂ ಪದ್ಮಾಕರನು ಹಿಡಿದ ಮಾರ್ಗ ಮಾತ್ರ ಮುಳ್ಳಿನಿಂದ ತುಂಬಿದ್ದೆಂದು ಅವಳಿಗೀಗ ಸ್ಪಷ್ಟವಾಗಿ ಕಂಡಿತು. ಆ ಮಾರ್ಗದಿಂದ ಪದ್ಮಾಕರನು ಹಿಂದಿರುಗುವದು ಸಾಧ್ಯವಿರಲಿಲ್ಲ. ಅವನನ್ನು ಹಾಗೆ ಹಿಂದಿರುಗಿಸುವ ಇಚ್ಛೆಯೂ ಅವಳಿಗಿರಲಿಲ್ಲ. ಅವನನ್ನು ಸಂಕಟಗಳು ಮುತ್ತಬಹುದೆಂದೂ ಅವಳೆಣಿಸಿರಲಿಲ್ಲ. ಆದರೆ ಅವನ ಪ್ರೇಮ ತನ್ನ ಮೇಲಿದೆಯೋ ಇಲ್ಲವೋ ಎಂಬುದು ತನಗೆ ದೃಢವಾಗಿ ತಿಳಿಯುವ ಮೊದಲೇ ಅವನು ಸಂಕಟದಲ್ಲಿ ಸಿಕ್ಕು ದೂರ ಹೋಗಿಬಿಡಬಹುದಲ್ಲ, ಎಂಬ ಭೀತಿ ಅವಳನ್ನು ಆವರಿಸಿತ್ತು.

ಹಬ್ಬಿದ ಸುದ್ದಿಗಳಲ್ಲಿ ಹುರುಳೇನೂ ಇರಲಿಲ್ಲ. ಪದ್ಮಾಕರನು ದಿನದಂತೆ ಅಂದೂ ಬಂದು ಅವಳೊಡನೆ ಮಾತಾಡತೊಡಗಿದನು. "ಇಂದು ಮುಂಜಾನೆ ನಡೆದ ಘಟನೆಯೆಂದರೆ, ಸರಕಾರ, ಪ್ರಜೆ ಇವರಲ್ಲಿ ನಡೆದ ಮೊದಲನೆಯ 'ಸಲಾಮು' ಮಾತ್ರ" ಎಂದು ಪದ್ಮಾಕರನು ನಗುನಗುತ್ತಲೇ ನುಡಿದನು. ಚಳವಳಿಯು ಒಳ್ಳೇ ಜೋರಿನಿಂದ ಸಾಗುವದಕ್ಕಾಗಿ ಕೈಕೊಳ್ಳಲಾಗುವ ಉಪಾಯಗಳನ್ನು ಒಂದೊಂದಾಗಿ ಹೇಳಿ ವಿವರಿಸುತ್ತಿದ್ದನು. ಅವನ ಮಾತಿನ ಧಾರೆ ನಡುವೆಯೇ ನಿಂತಿತು.

"ನನ್ನ ಮಾತಿನ ಕಡೆಗೆ ನಿನ್ನ ಲಕ್ಷ್ಯವೇ ಇಲ್ಲ."

"ಅದೇಕೆ? ಇದೆ, ಪೂರ್ತಿ ಇದೆ" ಶಕುಂತಲೆ ಉತ್ತರ ಕೊಟ್ಟಳು. "ಆದರೆ, ಅದು ಬರೀ ನಿನ್ನ ಮಾತಿನ ಕಡೆಗಷ್ಟೇ ಇಲ್ಲ."

" ಮತ್ತೇತರ ಕಡೆಗಿದೆ ಹಾಗಾದರೆ? "

" ಭವಿತವ್ಯದ ಕಡೆಗೂ ಇದೆ. "

" ಕೊಲ್ಹಾಪುರದ ಭವಿತವ್ಯದೆಡೆಗೇ? "

" ಅಹುದು, ಜೊತೆಗೆ ನನ್ನ ಭವಿತವ್ಯದೆಡೆಗೂ ಇದೆ."

" ಅದೇಕೆ? ನಿನ್ನ ಭವಿತವ್ಯವೂ ಹೊಯ್ದಾಡುತ್ತಿದೆಯೋ ಏನು? "

ಅವಳು ತನ್ನ ಕೆಳದುಟಿಯನ್ನು ಕಚ್ಚಿ ಹಿಡಿದಳು; ಮರುಮಾತಾಡಲೇ ಇಲ್ಲ.

ಪದ್ಮಾಕರನೇ ಪ್ರಾರಂಭ ಮಾಡಿದನು, " ನಿನ್ನ ಭವಿತವ್ಯ ಇನ್ನೂ ಹೊಯ್ದಾಟದಲ್ಲಿದೆ ಎನ್ನುವಿಯಲ್ಲs? ನನಗಿಷ್ಟೇ ಏಕೆ, ಜನರಿಗೆಲ್ಲ ನಿನ್ನ ಉಜ್ವಲ ಭವಿಷ್ಯ ಸ್ಪಷ್ಟವಾಗಿದೆ............ ಇನ್ನು ಒಂದೂವರೆ ವರುಷಗಳಲ್ಲಿ ಬಿ. ಎಸ್ ಸಿ. ಯಾಗುವಿ. ಬಳಿಕ ಜರ್ಮನಿಗೆ ಹೋಗಿಬಂದಿಯೆಂದರೆ ತಮ್ಮಷ್ಟು ದೊಡ್ಡವರು ಯಾರು?—ಆಗ ನನ್ನ ಸ್ಥಿತಿ ಏನಾಗುತ್ತದೋ ಏನೋ! ಆದರೆ ಯಾವಾಗಲಾದರೂ ನಾವು ಒಟ್ಟಿಗೆ ಕಲೆತೆವೆಂದರೆ, ನಿನ್ನೆಡೆಗೆ ಬೊಟ್ಟು ಮಾಡಿ, ' ಇವರದೂ ನನ್ನದೂ ಬಹಳ ಸ್ನೇಹ; ಹಿಂದೆ ನನ್ನ ಕೆಲಸದಲ್ಲಿ ಅವರು ಎಷ್ಟೋ ಸಹಾಯ ಮಾಡಿದ್ದಾರೆ. ' ಎಂದು ನನ್ನ ಮಿತ್ರರಿಗೆ ಹೇಳಬಲ್ಲೆ."

ಶಕುಂತಲೆ ಬೆಚ್ಚಿ ಬಿದ್ದು, ಮುಖ ಮೇಲೆತ್ತಿ ಕ್ಷಣಹೊತ್ತು ಅವನೆಡೆಗೆ ನಟ್ಟ ದೃಷ್ಟಿಯಿಂದ ನೋಡಿ ಮೆಲ್ಲಗೆ ಕೇಳಿದಳು " ಇಷ್ಟೇನೇ? "

ಅವಳ ಪ್ರಶ್ನೆಯ ಆಶಯ ಪದ್ಮಾಕರನ ಮನವನ್ನು ಮುಟ್ಟಲಿಲ್ಲ. ಅವನು ಸಹಜವಾಗಿಯೇ ಮಾರುತ್ತರಿಸಿದನು, " ಇಷ್ಟೇ ಅಂದರೇನು? ಯಾವುದೋ ಕಾರಣದಿಂದ ಮನುಷ್ಯರು ಒಂದೆಡೆಗೆ ಕಲೆಯುತ್ತಾರೆ. ಪರಸ್ಪರರಲ್ಲಿ ಸಹಾನುಭೂತಿಯುಂಟಾದರೆ ಸಹಾಯವನ್ನೂ ಮಾಡುತ್ತಾರೆ; ಆದರೆ ಅವರ ಮಾರ್ಗ ಭಿನ್ನಭಿನ್ನವಾಗಿರುವದರಿಂದ ಅವಧಿ ಮುಗಿದೊಡನೆಯೇ ಆಗಲಿ, ತಮ್ಮ ತಮ್ಮ ಮಾರ್ಗಗಳನ್ನನುಸರಿಸುತ್ತಾರೆ. "

" ನಿನ್ನ ನನ್ನ ಮಾರ್ಗಗಳು ಒಂದೇ ಆಗಿರುವದು ಸಾಧ್ಯವಿಲ್ಲವೇ? "

" ನನ್ನ ತಲೆಯಲ್ಲಿ ಹಾಗೆಂದಿಗೂ ಬರಲೇ ಇಲ್ಲ. "

ಶಕುಂತಲೆಯ ತೀಕ್ಷ್ಣದೃಷ್ಟಿ ಅವನನ್ನು ತಾಗಿತು; ಮುಖ ಮೇಲೆತ್ತಲಾರದೆ, ಆವಳು ತಲೆ ತಗ್ಗಿಸಿದಳು. ಹುದುಗಲಾರದ ದುಃಖ ತಾನೇ ಹೊರಬೀಳಹತ್ತಿತು.

ಶಕುಂತಲೆ ಅಲ್ಲಿಂದೆದ್ದವಳೇ ತನ್ನ ಕಿರುಮನೆಗೆ ಹೊರಟುಹೋದಳು.

## ೬

ಈ ಮೂರು ನಾಲ್ಕು ತಿಂಗಳಲ್ಲಿ ಕೊಲ್ಹಾಪುರದ ರಾಜಕೀಯ ಚಳವಳಿ ಒಳ್ಳೇ ಉಗ್ರಸ್ವರೂಪವನ್ನು ಧಾರಣ ಮಾಡುತ್ತ ನಡೆದಿತ್ತು. ಪ್ರಜೆಗಳ ಗೋಳಿಗೆ ಕೊರತೆಯೆನ್ನುವದಿದ್ದಿರಲೇ ಇಲ್ಲ ಎಂದೂ. ಆದರೆ ಅದನ್ನು ಬಯಲಿಗೆಳೆಯುವ ಧೈರ್ಯ ಮಾತ್ರ ಯಾರಿಗೂ ಇದ್ದಿರಲಿಲ್ಲ. ಆದರೆ ಇಂದು? ಕಾಲಮಾನ ಬದಲಾಗಿತ್ತು. ಸಾಮಾನ್ಯ ಒಕ್ಕಲಿಗನಲ್ಲಿಯೂ ಆ ಧೈರ್ಯ ಬಂದಿತ್ತು. ಪ್ರಜೆಗಳ ಮನೋವೃತ್ತಿಯಲ್ಲಾದ ಈ ಬದಲಾವಣೆ ಅಧಿಕಾರಿಗಳಿಗೂ ಕ್ರಮೇಣ ತಿಳಿಯತೊಡಗಿತ್ತು. ‘ ಪ್ರಜೆಗಳ ಗೋಳಿನ ಕೂಗು ರಾಜನ ಕಿವಿಯನ್ನು ಮುಟ್ಟಲೇಕೂಡದು; ಒಂದುವೇಳೆ ಮುಟ್ಟಿದರೂ ಅಲ್ಲಿ ಅದು ಬಹಳ ಹೊತ್ತು ನಿಲ್ಲಕೂಡದು ’ ಎಂಬ ಉದ್ದೇಶವುಳ್ಳ ಅಧಿಕಾರಿಗಳೇ ರಾಜನನ್ನು ಸುತ್ತುಗಟ್ಟಿರುವವರು; ಮತ್ತೆ ತಮ್ಮ ಮಾತುಗಳು ರಾಜನಿಗೆ ಸ್ವಾದಕವಾಗಿರುವಂತೆಯೂ ಅವರು ನೋಡಿಕೊಳ್ಳುತ್ತಾರೆ. ಕೊಲ್ಹಾಪುರದ ಪ್ರಜೆಗಳು ಗೋಳುಬಾಳಿನಲ್ಲಿ ಈಗ ಮೂವತ್ತು ವರ್ಷಗಳನ್ನು ಕಳೆದರೇನೋ ನಿಜ; ಆದರೂ ಶಾಹೂ ಮಹಾರಾಜರ ನಂತರ ಕೂಡ ರಾಜರಿಗೆ ಮುಜರೆ ಮಾಡುವ ಜನರ ಮುಖಗಳಷ್ಟೇ ಕಾಣುತ್ತಿದ್ದವು; ದುಃಖದಿಂದ ಕೊರಗಿದ ಹೃದಯಗಳು ಕಾಣಿಸುವಂತಿರಲಿಲ್ಲ. ಈ ಪರಿಸ್ಥಿತಿಯೂ ಬೇಕೆಂದೆ ನಿರ್ಮಿಸಲ್ಪಟ್ಟದ್ದು.

ಸಾಮಾಜಿಕ ಜೀವನದ ನಿಯಮವೂ ಗುರುತ್ವಾಕರ್ಷಣದ ನಿಯಮದಂತೆ ಅಮೋಘವಾದುದು. ಪೀಡೆ, ಜಾಗೃತಿ, ಹೆಚ್ಚಿನ ಪೀಡೆ, ಜಾಗೃತಿ ಕಳಚಿ ಬಿದ್ದ ಆಭಾಸ, ಬಳಿಕ ಜಾಗೃತಿ ಅಂಕುರಿಸಿ ತಳಿತುದು—ಹೀಗೆ ಚಳವಳಿಗಳ ಮೂಲಕವಾಗಿ ಸೆರೆ ಸಿಕ್ಕ ಸಮಾಜ ಮೆಲ್ಲಗೆ ತಲೆಯೆತ್ತುತ್ತಿರುತ್ತದೆ. ಈ ಚಳವಳಿಗಳ ಅವಧಿ ಹೆಚ್ಚುಕಡಿಮೆಯಾಗಿರಬಹುದು. ಆದರೆ ಈ ನಿಯಮ ತಪ್ಪುವಂತಿಲ್ಲ. ಬ್ರಿಟಿಷ ಸತ್ತೆಯಲ್ಲಿಯ ನಮ್ಮ ರಾಜಕೀಯ ಇತಿಹಾಸವನ್ನು ನೋಡಿದರೆ ೧೯೦೮ ರಲ್ಲಿ, ೧೯೨೦ ರಲ್ಲಿ, ೧೯೩೦ ರಲ್ಲಿ, ಬಳಿಕ ೧೯೪೨ ರಲ್ಲಿ ಹೀಗೆ ಹತ್ತತ್ತು ವರ್ಷಗಳ ಅಂತರವನ್ನು ಬಿಟ್ಟು ಜನರಲ್ಲಿ ಜಾಗೃತಿ ಚಿಗಿತು ಫಲಿಸಿದುದನ್ನು ಕಾಣುತ್ತೇವೆ. ೧೯೦೮ ರ ಸುಮಾರಿಗೆ ಕೊಲ್ಹಾಪುರದಲ್ಲಿ ಅಂಕುರಿಸಬೇಕೆಂದಿದ್ದ ರಾಜಕೀಯ ಚಳವಳಿ ಬೇರುಸಹಿತ ಕಿತ್ತೊಗೆಯಲ್ಪಟ್ಟಿತು. ಮತ್ತೆ ಮೂವತ್ತು ವರ್ಷಗಳ ವರೆಗೆ ಅದರ ಸುಳಿವೇ ಇರಲಿಲ್ಲ. ಆದರೆ ಈ ಅವಧಿಯಲ್ಲಿ ಪ್ರಜೆಗಳ ಮನೋಭೂಮಿಕೆ ಸಿದ್ಧವಾಗುತ್ತಲಿತ್ತೆಂದು ಕಾಣುತ್ತದೆ. ೧೯೩೭ ರ ಸುಮಾರಿಗೆ ಜನತೆ ತನ್ನ ನಿದ್ರೆಯನ್ನು ಕೊಡಹಿ ಚೆಲ್ಲಿ ಎಚ್ಚತ್ತಿತು; ಪರಿಸ್ಥಿತಿ ಅಸಹನೀಯವಾಗಿತ್ತು. ಸುಗ್ಗಿವ ಧೈರ್ಯವಿಲ್ಲದ್ದರಿಂದ ನಿರಾಶೆಯ ಕೂಗೂ ಅಲ್ಲಲ್ಲಿ ಕೇಳತೊಡಗಿತ್ತು.

ಮೊದಮೊದಲು ಅಧಿಕಾರಿಗಳಿಗೆ ಈ ಚಳವಳಿಯ ಬಗ್ಗೆ ಭೀತಿ ಇರಲಿಲ್ಲ. ಆದರೆ ಬರಬರುತ್ತ ಚಳವಳಿಯು ಉಗ್ರರೂಪ ಧಾರಣ ಮಾಡತೊಡಗಿದಂತೆ ಅವರಿಗೂ ಉಪಾಯವನ್ನು ಯೋಜಿಸಬೇಕಾಯಿತು. ಅವರು ಯೋಜಿಸಿದ ಉಪಾಯ ರಾಜನೀತಿಯಲ್ಲಿ ಎರಡನೆಯದು, ದಾನ. ರಾಜ್ಯದಲ್ಲಿ ಸುಧಾರಣೆ ಮಾಡುವದಾಗಿ ವಚನವಿತ್ತು ಅಧಿಕಾರಿಗಳು ಕಾಲ ನೂಕಲೆತ್ನಿಸಿದರು. ಆದರೆ ಅದೂ ಫಲಿಸದಾಯ್ತು. ರಾಜ್ಯಕರ್ತರು ವಚನದ ಗೋಜಿಗೆ ಹೋಗದೆ ಸುಮ್ಮನಿದ್ದುಬಿಟ್ಟರು. ೧೯೩೮ ನೆಯ ಇಸ್ವಿ ಡಿಸೆಂಬರಿನಲ್ಲಿ ಒಕ್ಕಲಿಗರ ಚಳವಳಿ ಉಗ್ರವಾಗುತ್ತಿದ್ದ ಲಕ್ಷಣ ಸ್ಪಷ್ಟವಾಗಿ ಕಾಣತೊಡಗಿದವು. ಹೊಸ ವರುಷದ ಮೊದಲಿಗೆ ಅದೊಂದು ಅಭೂತಪೂರ್ವ ಘಟನೆಯೇ ನಡೆಯಿತು. ಶಿರೋಳಪೇಟೆಯ ಒಕ್ಕಲಿಗರು ಸುತ್ತಲಿನ ಜನರನ್ನೆಲ್ಲ ಕೂಡಿಸಿಕೊಂಡು ಒಂದು ದಿನ ನಸುಕಿನಲ್ಲಿ ಕೊಲ್ಹಾಪುರ ನಿಲ್ದಾಣದಲ್ಲಿ

ನುಗ್ಗಿ ಬಿಟ್ಟರು; ಅವರಿಗೇನೋ ದಿವಾಣರನ್ನು ಕಾಣುವದಿತ್ತಂತೆ! ಅದಕ್ಕಾಗಿ ಅಲ್ಲಿಂದ ತಂಡತಂಡವಾಗಿ ದಿವಾಣರ ಬಂಗಲೆಯ ಕಡೆಗೆ ಸಾಗಿದರು. ಈಗ ಮಾತ್ರ ಈ ಬಂಡು ತಮ್ಮ ಆಳವನ್ನು ದಾಟಿಹೋಗುವದೆಂದು ಅಧಿಕಾರಿಗಳಿಗೆನಿಸತೊಡಗಿತು. ತಮ್ಮ ಮೆಚ್ಚಿಕೆಯ ಉಪಾಯವನ್ನು ಅವರು ಕೂಡಲೇ ಕೈಕೊಂಡರು. ಮುಂದಾಳುಗಳನ್ನೆಲ್ಲ ಸೆರೆ ಹಿಡಿದು ಅವರ ಮೇಲೆ ಖಟ್ಲೆ ಹೊರಿಸಲಾಯಿತು. ಸಕ್ತಮಜೂರಿ ಶಿಕ್ಷೆಯನ್ನು ವಿಧಿಸಿ ಅವರಲ್ಲಿ ಕೆಲವರನ್ನು ಸೆರೆಮನೆಗೂ ಅಟ್ಟಿಯಾಯಿತು. ಪದ್ಮಾಕರನೂ ಇವರಲ್ಲೊಬ್ಬನಾಗಿದ್ದ; ಅವನಿಗೆ ಒಂದೂವರೆ ವರ್ಷದ ಸಕ್ತಮಜೂರಿಯನ್ನು ವಿಧಿಸಲಾಗಿತ್ತು.

ಈ ಕೈದಿಗಳನ್ನು ಸೆರೆಮನೆಗೆ ಸಾಗಿಸುವದಕ್ಕಾಗಿ ಕೋರ್ಟಿನ ಹೊರಗೆ ಗಾಡಿಯು ಸಿದ್ಧವಾಗಿತ್ತು. ಇವರನ್ನು ಕಾಣಲು ಕೋರ್ಟಿನ ಒಳಗೆ ಯಾರನ್ನೂ ಬಿಟ್ಟಿರಲಿಲ್ಲ; ಆದರೆ ಹೊರಗೆ ಜನಸಂದಣಿಯೇ ಕೂಡಿತ್ತು. ದಾರಿಯಲ್ಲಿ ಕುದುರೆಸವಾರರು, ಲಾಠೀ ಹಿಡಿದ ಸಿಪಾಯಿಗಳು ಕಾವಲಿಗಾಗಿ ನಿಂತಿದ್ದರು. ಶಿಕ್ಷೆಯಾದರೂ ನಗುಮುಖದಿಂದ ಹೊರಬರುತ್ತಿದ್ದ ಮುಂದಾಳುಗಳನ್ನು ಕಂಡು ಜನರು ಜಯಜಯಕಾರವನ್ನು ಮಾಡಿದರು. "ಮಹಾತ್ಮಾ ಗಾಂಧೀಕಿ ಜಯ," "ಇನ್ಕಿಲಾಬ ಝಿಂದಾಬಾದ!" ಯಾರೋ ಒಬ್ಬರು ನೂಕುನುಗ್ಗಲಲ್ಲಿಯೇ ಸರಿಸುತ್ತ ಬಂದು ಅವರ ಕೊರಳಲ್ಲಿ ಮಾಲೆಯನ್ನು ಅಡಕಿಸಿದರು.

ಪದ್ಮಾಕರನು ಗಾಡಿಯಲ್ಲಿ ಹತ್ತಬೇಕೆಂದಿದ್ದನು; ಆದರೆ ಅಷ್ಟರಲ್ಲಿ ಯಾರೋ ಅವನನ್ನು ಮೃದುವಾಗಿ ಹಿಂದಿನಿಂದ ಕೂಗಿದಂತಾಯಿತು. ಪದ್ಮಾಕರನಿಗೆ ಧ್ವನಿಯು ಗುರುತು ಹತ್ತಿತು. ಹಿಂತಿರುಗಿ ನೋಡಿದನು; ಶಕುಂತಲೆ!

"ನಾನು ಇನ್ನು ಒಂದೂವರೆ ವರುಷಕ್ಕೆ ಬಂದುಬಿಡುವೆ." ಪದ್ಮಾಕರನು ನಗುಮುಖದಿಂದಲೇ ಅವಳಿಗೆ ಹೇಳಿದನು.

ಶಕುಂತಲೆಯ ಬಾಯಿಂದ ಮಾತೇ ಹೊರಡಲಿಲ್ಲ; ಅವಳು ತನ್ನ ಕೈಯನ್ನು ಪದ್ಮಾಕರನ ಕೈಯಲ್ಲಿರಿಸಿದಳು ಮಾತ್ರ.

"ನಾನು ಬಿಡುಗಡೆ ಹೊಂದಿ ಬರುವವರೆಗೆ ಏನಾಗುವದೋ ಯಾರಿಗೆ

ಗೊತ್ತು? ಆದರೂ ಮತ್ತೆ ನಿನ್ನನ್ನು ಕಾಣುವೆನೆಂದು ನನ್ನ ಆಶೆ" ಪದ್ಮಾಕರನು ತಾನೇ ಮತ್ತೆ ಮಾತನಾಡಿದನು.

ಶಕುಂತಲೆಗೂ ಹೇಳಬೇಕೆನ್ನಿಸಿತು— 'ನಾನು ನಿನ್ನ ದಾರಿಯನ್ನೇ ಕಾಯುತ್ತ ಕೂತಿರುತ್ತೇನೆ' ಎಂದು. ಆದರೆ 'ಈ ಶಬ್ದಗಳಿಗೆ ಅವನ ದೃಷ್ಟಿಯಿಂದ ಬೆಲೆಯೇನಿದೆ?' ಎಂಬ ವಿಚಾರ ಅಂತಹ ಪರಿಸ್ಥಿತಿಯಲ್ಲಿಯೂ ಅವಳ ತಲೆಯಲ್ಲಿ ಫಕ್ಕನೆ ಸುಳಿದುಹೋಯಿತು. ಅವಳು ಮಾತನಾಡಲೇ ಇಲ್ಲ; ಜನ ಮತ್ತೆ ಕೂಗಿದರು "ಮಹಾತ್ಮಾ ಗಾಂಧೀಕಿ ಜಯ". ಇಷ್ಟರಲ್ಲಿ ಯಾರೋ ನುಗ್ಗುತ್ತ ಬಂದು ಪದ್ಮಾಕರನ ಕೊರಳಲ್ಲಿ ಮತ್ತೊಂದು ಮಾಲೆಯನ್ನು ಸಿಕ್ಕಿಸಿದರು. ಅದನ್ನೇ ನೋಡುತ್ತಿದ್ದ ಶಕುಂತಲೆ ಮನದಲ್ಲಿ ಪಿಸುಗುಟ್ಟಿದಳು "ಈ ಹೂಮಾಲೆಗಿಂತ ನಯವಾದ ಭಾವನೆಯ ಮಾಲೆಯನ್ನು ನಾನು ತೊಡಿಸಲು ಬಂದಿದ್ದೆ. ಆದರೆ ನಿನಗೆಲ್ಲಿ ಅದರ ಪರಿವೆ? ನಿನಗೆ ಬೇಕಾಗಿದ್ದರಲ್ಲವೇ ಅವೆಲ್ಲ? ನಿನ್ನ ದೋಷವೂ ಅದರಲ್ಲಿಲ್ಲವೆನ್ನು; ........ ನನ್ನ ಭಾವನೆಗಳನ್ನು ಪರಿಗ್ರಹಿಸದಿದ್ದರೂ ನೀನು ನನಗೆ ಪ್ರಿಯನೇ ........ ಸೆರೆಮನೆಯಲ್ಲಿ ಅದೆಂತಹ ದುಃಖ, ಅದೆಂತಹ ಕಾಠಿಣ್ಯ ನಿನಗಾಗಿ ಕಾದಿದೆಯೋ! ಅದರಲ್ಲಿಯೂ ಜಪ್ಪಿಸಿ, ಜೋಕೆಯಾಗಿರು. ನಿನ್ನೊಲವೇ...."

ಪೋಲೀಸ ಅಮಲ್ದಾರನೊಬ್ಬನು ಪದ್ಮಾಕರನ ಭುಜತಟ್ಟಿ ಸನ್ನೆ ಮಾಡಿದನು. ಪದ್ಮಾಕರನು ಶಕುಂತಲೆಯಿಂದ ದೂರ ಸರಿದು ಗಾಡಿಯಲ್ಲಿ ಹತ್ತಿದನು. ಇದುವರೆಗೆ ಅವಳಿಗಿದ್ದ ಅವನ ಸ್ಪರ್ಶಸುಖ ಈಗ ದೂರವಾಯಿತು. ಮರುಕ್ಷಣದಲ್ಲಿಯೇ ಗಾಡಿ ಹೊರಟುಬಿಟ್ಟಿತು; ಜನರು ಮತ್ತೆ ಕೂಗಿದರು 'ಮಹಾತ್ಮಾ ಗಾಂಧೀಕಿ ಜಯ'; ಗಾಡಿಯಲ್ಲಿ ಕುಳಿತ ಮುಂದಾಳುಗಳೂ ಪ್ರತ್ಯುತ್ತರವನ್ನು ಕೊಟ್ಟರು. ಗಾಡಿಯ ಒಂದು ಬದಿಗೆ ಪೋಲೀಸರ ಕಣ್ಣು ತಪ್ಪಿಸಿ, ಅದಾರು ಕಾಂಗ್ರೆಸ ನಿಶಾನೆಯನ್ನು ಹಚ್ಚಿದ್ದರೋ!— ಗಾಡಿಯು ವೇಗವಾಗಿ ಸಾಗಿದಾಗ ಧೂಳಿಯ ಮಬ್ಬಿನಲ್ಲಿ ಅದು ಹಾರಾಡುತ್ತ ಒಳ್ಳೇ ದರ್ಪದಿಂದ ಸಾಗಿತ್ತು.

ಶಕುಂತಲೆ ಮನೆ ಮುಟ್ಟಿದಾಗ ಅವಳ ಹೃದಯಕ್ರಿಯೆ ನಡೆದಿದೆಯೋ ಇಲ್ಲವೋ ಎಂದು ಅವಳಿಗೇ ಸಂಶಯವಾಯಿತು. ಪದ್ಮಾಕರನ ಪ್ರೇಮವನ್ನು ದೊರಕಿಸಲು ಅವಳು ಇಷ್ಟೊಂದು ಹೆಣಗಾಡಿದ್ದಳು. ಆದರೆ ಅದೆಲ್ಲವೂ

ವ್ಯರ್ಥವಾಗಿತ್ತು. ಇಷ್ಟು ದಿನಗಳ ವರೆಗೆ ಅವನ ಭೆಟ್ಟಿ, ಸಹವಾಸಗಳಾದರೂ ದೊರೆಯುತ್ತಿದ್ದವು! ಆದರೆ ಇಂದು ಅದೂ ದೂರವಾಯ್ತು! ಇನ್ನು ಒಂದೂವರೆ ವರ್ಷಗಳ ವರೆಗೆ ಪದ್ಮಾಕರನ ಮುಖವನ್ನು ಕಾಣುವಂತಿಲ್ಲ !

ದುಃಖದ ಹೊರೆ ಹೊರಲು ಅಸಹ್ಯವಾಗಿ, ತಂದೆಯವರಿಗೆ ಇದನ್ನೆಲ್ಲ ಹೇಳಿಬಿಡಲೇನೋ ಎಂದು ಶಕುಂತಲೆ ಅನೇಕ ಸಲ ಯೋಚಿಸಿದಳು; ಆದರೆ ಅವಳಿಗೆ ಹೇಳುವದಾಗಲಿಲ್ಲ. ತಂದೆಯೊಡನೆ ಮನಬಿಚ್ಚಿ ಎಲ್ಲ ವಿಷಯ ಗಳನ್ನು ಹೇಳಿಬಿಡುವದು ಅವಳ ಸ್ವಭಾವವಾಗಿತ್ತು; ಆದರೆ ಇದೊಂದನ್ನು ಮಾತ್ರ ಅವಳು ಹೇಳಲಿಲ್ಲ. ಬಹುಮೂಲ್ಯವಾದ ವಸ್ತುವನ್ನು ಜತನವಾಗಿ ಕಾಯ್ದಿಡುವಂತೆ ಅವಳು ಪದ್ಮಾಕರನ ಬಗ್ಗೆ ಇದ್ದ ಪ್ರೇಮವನ್ನು ಹೃದಯ ದಲ್ಲಿಯೇ ಬಚ್ಚಿಟ್ಟಿದ್ದಳು. ಈಗವಳಿಗೆ ನಿರಾಶೆಯ ದುಃಖವಾಯಿತು. ಆದರೆ ಅದನ್ನೂ ಅವಳು ಯಾರೊಡನೆ ಹಂಚಿಕೊಳ್ಳುವ ಗೊಂದಲಕ್ಕೆ ಹೋಗಲಿಲ್ಲ.

ಅವಳೇನೂ ಹೇಳದೆಯೇ ಅವಳ ತಂದೆಗೆ ಎಲ್ಲ ವಿಚಾರ ತಿಳಿದು ಬಿಟ್ಟಿತ್ತೋ ಏನೋ? ಅವಳ ಪರೀಕ್ಷೆಗೆ ಇನ್ನೆರಡು ತಿಂಗಳು ಮಾತ್ರ ಮಿಕ್ಕಿದ್ದರೂ ಅವಳ ಅಭ್ಯಾಸದ ವಿಚಾರವಾಗಿ ಅವರೇನನ್ನೂ ಕೇಳುತ್ತಿರಲಿಲ್ಲ. ಮತ್ತೆ ತಾವೇ " ಅದೇನು ಅಂತಹ ದೊಡ್ಡ ಪರೀಕ್ಷೆ? ಕ್ಲಾಸು ದೊರೆಯಲೇ ಬೇಕೆಂದೆಲ್ಲಿದೆ ? " ಎಂದು ಸಮಾಧಾನ ಹೇಳುತ್ತಿದ್ದರು. ಸಾಧ್ಯವಿದ್ದಷ್ಟು ವೇಳೆಯನ್ನು ಶಕುಂತಲೆಯೊಡನೆಯೇ ಕಳೆಯುತ್ತಿದ್ದರು. ಮತ್ತೆ ತಾವು ನಾನಾಸಾಹೇಬರೊಂದಿಗೆ ಮಾತನಾಡುವಾಗ ತಮ್ಮ ಜೀವನದಲ್ಲಿ ನಿರಾ ಶೆಯ ಆಘಾತಗಳು ಹೇಗೆ ಬಡಿದವು? ಬಡಿದರೂ ದಿನ ಕಳೆದಂತೆ ಹೇಗೆ ಮರೆತುಹೋದವು— ಇತ್ಯಾದಿಗಳನ್ನೆಲ್ಲ ವಿವರಿಸಿ ಹೇಳುತ್ತಿದ್ದರು. ಅದನ್ನು ಕೇಳಿದಾಗ ' ನನ್ನನ್ನು ಸಮಾಧಾನಗೊಳಿಸಲೆಂದೇ ಇವರು ಈ ಪ್ರಯತ್ನ ವನ್ನು ನಡೆಸಿದ್ದಾರೆ ' ಎಂದು ಶಕುಂತಲೆಗೆನಿಸಿಬಿಡುತ್ತಿತ್ತು.

ಮಾರ್ಚ ತಿಂಗಳಲ್ಲಿ ಅವಳ ಪರೀಕ್ಷೆ ಪ್ರಾರಂಭವಾಯಿತು. ಕ್ಲಾಸು ದೊರೆಯುವ ಆಶೆ ಅವಳಿಗಿರಲಿಲ್ಲ; ಪಾಸಾಗುವ ವಿಶ್ವಾಸ ಮಾತ್ರ ನಿಶ್ಚಯ ವಾಗಿಯೂ ಇತ್ತು. ಮೂರನೆಯ ದಿನ ಪೇಪರ ಮುಗಿಸಿ ಮಧ್ಯಾಹ್ನ ಮನೆಗೆ ಬಂದಾಗ ಅವಳ ತಂದೆ ಭಾವೂಸಾಹೇಬರು ಕೇಳಿದರು "ನಾಳೆ ನಿನ್ನ

ಕೊನೆಯ ಪೇಪರಲ್ಲವೇ ?"

"ಹೌದು, ಆದರೆ ಪ್ರಾಕ್ಟಿಕಲ್ಸ ಇವೆಯಲ್ಲ" ಶಕುಂತಲೆಯೆಂದಳು.

"ಹಾಗಾದರೆ ಇದೆಲ್ಲ ಪೂರ್ಣ ಎಂದಿಗೆ ಮುಗಿಯುವದು ?"

"ಸೋಮವಾರ ಮಧ್ಯಾಹ್ನ."

"ಸರಿ, ಹಾಗಾದರೆ, ನಾವು ಸೋಮವಾರ ಸಂಜೆಗೆ ಇಲ್ಲಿಂದ ಹೊರಡೋಣ; ಆ ಪ್ರಕಾರ ನಾನವರಿಗೆ ತಿಳಿಸಿಬಿಡುತ್ತೇನೆ."

ಅವರ ಈ ಮಾತಿನ ಅರ್ಥ ಶಕುಂತಲೆಗಾಗಲಿಲ್ಲ. ಎಲ್ಲಿಯಾದರೂ ಊರಿಗೆ ಹೋಗುವ ಬಗ್ಗೆ ಹಿಂದೆ ಮಾತುಕಥೆಯಾಗಿರಲಿಲ್ಲ. "ಅವರಿಗೆ ತಿಳಿಸಿಬಿಡುತ್ತೇನೆ" ಅಂದರೆ ಯಾರಿಗೆ ? ಎಂಬ ಪ್ರಶ್ನೆ ಅವಳೆದುರು ನಿಂತಿತು; ಪ್ರಶ್ನಾರ್ಥಕ ಮುಖದಿಂದ ಅವಳು ಭಾವೂಸಾಹೇಬರನ್ನು ನೋಡತೊಡಗಿದಳು. ಅವಳ ಇಂಗಿತವನ್ನು ತಿಳಿದು ಭಾವೂಸಾಹೇಬರು ಅವಳೆಡೆಗೆ ಒಂದು ತಾರಿನ ಕಾಗದವನ್ನು ಎಸೆದರು. ಅದರ ಮೇಲಿನ ಬಡೋದೆಯ ಅಂಚೆಯ ಮುದ್ರೆಯನ್ನು ನೋಡಿ ಶಕುಂತಲೆಯೆಂದಳು "ಹಾಂ. ಬಡೋದೆಯಿಂದ ತಾರು ಬಂತೇ ? ನಿಮ್ಮ ಕರಾರುಗಳಿಗೆಲ್ಲ ಒಪ್ಪಿದರೆಂದು ಕಾಣುತ್ತದೆ."

ಬಡೋದೆಯ ಸರಕಾರ ಮತ್ತು ಭಾವೂಸಾಹೇಬರಲ್ಲಿ ಕಳೆದ ಇಪ್ಪತ್ತು ಇಪ್ಪತ್ತೈದು ದಿನಗಳಲ್ಲಿ ನಡೆದ ಪತ್ರವ್ಯವಹಾರ ಶಕುಂತಲೆಗೆ ಗೊತ್ತಿತ್ತು. ಯಾವುದೋ ಒಂದು ವಿಷಯದಲ್ಲಿ ಸಲಹೆಯನ್ನು ನೀಡುವದಕ್ಕಾಗಿ ಎಂಟು ಹತ್ತು ತಿಂಗಳ ಮಟ್ಟಿಗೆ ಬಡೋದೆ ಸರಕಾರವು ಭಾವೂಸಾಹೇಬರನ್ನು ಆಮಂತ್ರಿಸಿತ್ತು. ಆದರೆ ಸರಕಾರದ ಕರಾರುಗಳು ಭಾವೂಸಾಹೇಬರಿಗೆ ಒಪ್ಪಿಗೆಯಾಗಿರಲಿಲ್ಲ. ಅದಕ್ಕೆಂದು ಆಗದೆಂದು ಅವರು ಮೊದಲೇ ತಿಳಿಸಿಬಿಟ್ಟಿದ್ದರು.

ಭಾವೂಸಾಹೇಬರ ಹಳೆಯ ಸ್ನೇಹಿತರಾದ ದಾದಾಸಾಹೇಬ ರಾಣೇ ಪಾಟೀಲರು ಬಡೋದೆಯಲ್ಲಿಯೇ ಇರುತ್ತಿದ್ದರು. ಬಡೋದೆಯ ಸರಕಾರದಲ್ಲಿ ಅವರ ಮಾತಿಗೆ ಬೆಲೆ ಬಹಳ. ಸರಕಾರಕ್ಕೂ ಭಾವೂಸಾಹೇಬರಿಗೂ ಆದ ವ್ಯವಹಾರವನ್ನು ನೋಡಿ ಅವರು ನೊಂದುಕೊಂಡರು. ಪ್ರಯತ್ನಮಾಡಿ ಕೊನೆಗೆ ಭಾವೂಸಾಹೇಬರ ಕರಾರಿಗೆ ಸರಕಾರವು ಒಪ್ಪುವಂತೆಯೂ ಮಾಡಿದರು. ಆಗಲೇ ದಿವಾಣರಿಂದ ಭಾವೂಸಾಹೇಬರಿಗೆ ತಾರು ಬಂದದ್ದು "ನಿಮ್ಮ ಕರಾರುಗಳು ನಮಗೆ ಒಪ್ಪಿಗೆಯಾಗಿವೆ; ಎಂದು ಹೊರಡುವಿರೆಂಬು

ದನ್ನು ಕೂಡಲೆ ತಿಳಿಸಬೇಕು. ”

ತಾರನ್ನು ಓದಿಕೊಂಡು ಶಕುಂತಲೆ ಕೇಳಿದಳು: “ ನೆಟ್ಟಗಾಯಿತು;— ನೀವೆಂದು ಹೊರಡುವಿರಿ ಹಾಗಾದರೆ ? ”

“ ಸಾಧ್ಯವಿದ್ದಷ್ಟು ಬೇಗನೇ ಹೊರಡಬೇಕು. ಆದರೆ ನಿನ್ನ ಪರೀಕ್ಷೆ ಸೋಮವಾರ ಮುಗಿಯುವದೆನ್ನುವಿಯಲ್ಲ ? ಬಳಿಕ ಅಲ್ಲಿಯ ವರೆಗೆ ನಿಲ್ಲಲೇ ಬೇಕಾಯಿತು. ”

“ ಅದೇಕೆ ! ನೀವು ಹೋಗಬಹುದಲ್ಲ ? ”

“ ನಾನೊಬ್ಬನೇ ? ನಿನ್ನನ್ನೂ ಸಂಗಡ ಕರೆದುಕೊಂಡು ಹೋಗ ಬೇಕೆಂದು ಮಾಡಿದ್ದೇನೆ. ಬಹಳ ದಿನಗಳಾದವು,—ನೀನೂ ಎಲ್ಲಿ ಹೋಗಿಲ್ಲ; ಸ್ವಲ್ಪ ಹವೆ ಬದಲಾದರೆ ಎಷ್ಟೋ ನೆಟ್ಟಗೆನಿಸುವದು. ”

“ ನನ್ನ ದುಃಖ ಇವರಿಗೆ ತಿಳಿದಿದೆಯೆ ? ಅದರ ಭಾರವನ್ನಿಳಿಸಲು ಪ್ರಯತ್ನ ನಡೆಸಿದ್ದಾರೆಯೆ ? ” ಶಕುಂತಲೆ ಮನದಲ್ಲಿಯೇ ಯೋಚಿಸಿದಳು ಆದರೆ ಮಾತನಾಡಲಿಲ್ಲ.

ಭಾವೂಸಾಹೇಬರು ತಾವೇ ಮುಂದುವರಿಸಿದರು, “ ಈ ಬೇಸಿಗೆಯ ದಿನದಲ್ಲಿ ಬಡೋದೆಯ ಹವೆ ನೆಟ್ಟಗಲ್ಲ; ಹಾಗೆ ನೋಡದರೆ ಇಲ್ಲಿಯ ಹವೆಯೆ ಶೀತವಾಗಿ ಚೆನ್ನಾಗಿದೆ. ಏನೇ ಇರಲಿ, ಕೆಲವು ದಿನಗಳ ಮಟ್ಟಿಗಾದರೂ; ಈ ಕೊಲ್ಹಾಪುರ ಬೇಡ. ದೂರ ಹೋಗಿಬಿಡೋಣ ಎಲ್ಲಿಗಾದರೂ..........; ಬಡೋದೆಯ ಹವೆ ಬೆಚ್ಚಗಿದ್ದರೂ ಊರು ನೋಡುವ ಹಾಗಿದೆ; ದಾದಾ ಸಾಹೇಬರ ಬಂಗಲೆ ಚೆನ್ನಾಗಿದೆ.... ದಾದಾಸಾಹೇಬರ ನೆನಪಿಲ್ಲವೇ ನಿನಗೆ ? ಕ್ಷಯದ ಬೇನೆ ಎಂಬ ಸಂಶಯದಿಂದ ಜಯಸಿಂಗಪುರಕ್ಕೆ ಬಂದಿದ್ದರಲ್ಲ ? ನಾವೆಷ್ಟೋ ಸಲ ಅವರ ಮನೆಗೆ ಹೋಗಿದ್ದೆವು; ಆದರೆ ನೀನಿನ್ನೂ ಆಗ ಚಿಕ್ಕವಳಿದ್ದಿ. ”

“ ಆದರೂ ನನಗೆಲ್ಲ ನೆನಪಿದೆ,— ಅವರೊಬ್ಬ ಸೇವಕನ ಬಳಿ ನಾನು ಗುಜರಾಥೀ ಕಲಿಯುತ್ತಿದ್ದೆ; ಅಲ್ಲವೇ ? ”

“ ಹೌದು, ಈಗ ನೀನು ನನ್ನೊಡನೆ ಬಂದರೆ, ಅವರಿಗೆ ಬಹಳ ಸಂತೋಷವಾಗುವದು. ಹಾಗಾದರೆ ಸೋಮವಾರ ನಿನ್ನ ಪರೀಕ್ಷೆ ಮುಗಿಯಿತೆಂದರೆ ಹೊರಟುಬಿಡೋಣ. ”

ಶಕುಂತಲೆ ಒಪ್ಪಿ ಭಾವೂಸಾಹೇಬರೊಡನೆ ಬಡೋದೆಗೆ ಹೊರಟು ಹೋದಳು.

ಹೊರನಾಡಿನವರು ಬಂದು ನೋಡತಕ್ಕಂಥ ವಸ್ತುಗಳು ಬಡೋದೆಯಲ್ಲಿಯೂ ಅದರ ಅಕ್ಕಪಕ್ಕದಲ್ಲಿಯೂ ಎಷ್ಟೋ ಇವೆ. ಶಕುಂತಲೆಗೆ ಮಾತ್ರ ಹೋದ ನಾಲ್ಕು ದಿನಗಳಲ್ಲಿ ರಾಜವಾಡೆಯೊಂದನ್ನು ಬಿಟ್ಟು ಮತ್ತೇನನ್ನೂ ನೋಡುವದಾಗಲಿಲ್ಲ. ಭಾವೂಸಾಹೇಬರು ದಿನವೆಲ್ಲ ಕೆಲಸದಲ್ಲಿ ತೊಡಗಿರುತ್ತಿದ್ದರು. ಸರದಾರ ದಾದಾಸಾಹೇಬರು ರಾಜವಾಡೆಯಲ್ಲಿರುತ್ತಿದ್ದರು. ಹೀಗಾಗಿ ಅವಳಿಗೆ ಹೊರಬೀಳುವದೇ ಆಗಿರಲಿಲ್ಲ. ಐದನೆಯ ದಿನ ರಾತ್ರಿ ಒಬ್ಬ ತರುಣ ಗೃಹಸ್ಥರು ದಾದಾಸಾಹೇಬರನ್ನು ಕಾಣಲು ಅವರ ಮನೆಗೆ ಬಂದರು. ದಾದಾಸಾಹೇಬರು ತಮ್ಮ ಮನೆಗೆ ಬಂದ ಅತಿಥಿಗಳಿಗೂ ಅವರಿಗೂ ಪರಸ್ಪರ ಪರಿಚಯ ಮಾಡಿಕೊಟ್ಟರು. ಆಮೇಲೆ ಆ, ಈ ಮಾತು ಕಥೆಗಳಾದ ಮೇಲೆ ದಾದಾಸಾಹೇಬರು ಆ ಗೃಹಸ್ಥರಿಗೆಂದರು, " ಬಾಳಾಸಾಹೇಬ, ತಮಗೊಂದು ಸಣ್ಣ ಕೆಲಸವನ್ನು ಹೇಳುವದಿದೆ, ಹೇಳಬಹುದೇ?

" ಓ, ಅವಶ್ಯವಾಗಿ " ಬಾಳಾಸಾಹೇಬರು ಮಾರ್ನುಡಿದರು.

" ನಮ್ಮ ಈ ಶಕುಂತಲಾದೇವಿಗೆ ಬಡೋದೆಯನ್ನು ತೋರಿಸುವದಿದೆ; ಇವರ ತಂದೆ ಭಾವೂಸಾಹೇಬರು ತಮ್ಮ ಕೆಲಸದಲ್ಲಿ ತೊಡಗಿರುತ್ತಾರೆ; ನಾನು ನನ್ನ ಕೆಲಸದಲ್ಲಿ; ರಾಜರ ಕೃಪಾಛತ್ರದಲ್ಲಿದ್ದವರಿಗೆ ಸ್ವಾತಂತ್ರ್ಯವೆಲ್ಲಿಂದ ಬಂತು ?— ನಿಮಗೇನು ಈ ವಿಷಯ ಹೊಸದಲ್ಲ— ಬಂದ ದಿನ ನಾನು ರಾಜವಾಡೆಯನ್ನು ತೋರಿಸಿದ್ದೇ ತೋರಿಸಿದ್ದು; ಅದರ ಮೇಲೆ ಎಲ್ಲಿಯೂ ಹೋಗಿಲ್ಲ. ಬಂಗಲೆಯಲ್ಲಿ ಒಬ್ಬರೇ ಕುಳಿತಿರುತ್ತಾರೆ; ಮನಸ್ಸಿನೊಳಗೆ ಅವರು ನನ್ನನ್ನು ಬಯ್ಯುತ್ತಿರಲೂಬಹುದು. "

" ಹಾಗೇನೂ ಇಲ್ಲ ಮತ್ತೆ " ಶಕುಂತಲೆಯೆಂದಳು.

" ಹಾಂ, ಅವರು ಹೀಗನ್ನುತ್ತಿದ್ದರೂ ಒಳಗೊಳಗೇ ನನ್ನ ಮೇಲೆ ಸಿಟ್ಟಿಗೆದ್ದಿರಬಹುದು; ಅಥವಾ ನನಗಂತೂ ಹಾಗೆನಿಸುತ್ತದೆ. ಅದಕ್ಕೆಂದೇ ಬಾಳಾಸಾಹೇಬ, ಇವರನ್ನು ಕರೆದೊಯ್ದು ಅತ್ತಿತ್ತ ಅಡ್ಡಾಡಿ, ನೋಡತಕ್ಕ ಸ್ಥಳ ವಸ್ತುಗಳನ್ನೆಲ್ಲ ತೋರಿಸುವ ಹೊಣೆಯನ್ನು ತಾವು ಹೊರುವಿರಾದರೆ ನನ್ನ ಮೇಲೆ ಉಪಕಾರ ಮಾಡಿದಂತಾಗುವದು. "

ಅವರ ದರಬಾರೀ ಮಾತಿನ ಶೈಲಿಯನ್ನು ಕಂಡು ಶಕುಂತಲೆ ಒಳಗೊಳಗೇ ನಕ್ಕಳು. ದಾದಾಸಾಹೇಬರೆಂದರೆ ಅವಳಿಗೆನಿಸಿತು, "ಕಾದಂಬರಿಯಲ್ಲಿ ಅಥವಾ ಚಿತ್ರಪಟದ ಕಥೆಯಲ್ಲಿ ಬರಲು ಯೋಗ್ಯವಾದ ಒಂದು ಪಾತ್ರ" ಎಂದು.

"ನನ್ನ ಕಡೆಗೆ ತಾವು ಒಪ್ಪಿಸುವ ಕೆಲಸವಿದೇನೇ ಹಾಗಾದರೆ!" ಬಾಳಾಸಾಹೇಬರು ಕೇಳಿದರು. ದಾದಾಸಾಹೇಬರದು ಸ್ವಲ್ಪ ಚೇಷ್ಟೆಯ ಸ್ವಭಾವ. ಅವರೆಂದರು, "ಅಂದರೆ? ಇದೆಂತಹ ನಯವಾದ ಹೊಣೆ ನಿಮಗೆ ಗೊತ್ತೇ?"

ಅವರ ಮಾತನ್ನು ಕೇಳಿ ಎಲ್ಲರೂ ನಗತೊಡಗಿದರು.

ಬಳಿಕ ಹತ್ತು ಹದಿನೈದು ದಿನ, ಶಕುಂತಲೆ, ಬಾಳಾಸಾಹೇಬರೊಡನೆ ಅತ್ತಿತ್ತ ತಿರುಗಾಡಿ ಬಡೋದೆಯನ್ನು ನೋಡಿದಳು. ಈ ತಿರುಗಾಟದಲ್ಲಿ ಅವರೀರ್ವರಲ್ಲಿ ದೃಢವಾದ ಪರಿಚಯ ಬೆಳೆದಿತ್ತು ಎಂದು ಮಾತ್ರ ಹೇಳಲು ಬರುವದಿಲ್ಲ. ವಿಶೇಷ ಉತ್ಸಾಹ ಅವಳ ಮುಖದ ಮೇಲೂ ತೋರುತ್ತಿರಲಿಲ್ಲ. ಬಾಳಾಸಾಹೇಬರೂ ಹೆಚ್ಚು ಮಾತಾಡುತ್ತಿರಲಿಲ್ಲ. ಪರಸ್ಪರರನ್ನು ತಿಳಿದುಕೊಳ್ಳುವ ಕುತೂಹಲ ಅವರೀರ್ವರಲ್ಲೂ ಹೆಚ್ಚಾಗಿರಲಿಲ್ಲ.

ಬಾಳಾಸಾಹೇಬರ ಮನೆತನದ ಹೆಸರು ಮರಾಠೆ; ಅವರ ಕಾಲೇಜ ಶಿಕ್ಷಣವೆಲ್ಲ ಬಡೋದೆಯಲ್ಲಿ ಅವರ ಸೋದರಮಾವನ ಮನೆಯಲ್ಲಿಯೇ ಆಗಿತ್ತು. ಬಳಿಕ ಅವರು ಕೆಲದಿನ ಬಡೋದೆಯ ಬ್ಯಾಂಕಿನಲ್ಲಿ ಕೆಲಸಮಾಡುತ್ತಿದ್ದರು. ಅದನ್ನು ಬಿಟ್ಟ ಮೇಲೆ ಬಡೋದೆಯ ಸೆಂಟ್ರಲ್ ಲೈಬ್ರರಿಯಲ್ಲಿ 'ಅಸಿಸ್ಟಂಟ ಕ್ಯುರೇಟರ' ಎಂದೂ ಕೆಲದಿನ ಕೆಲಸ ಮಾಡಿದರು; ಆದರೆ ಇವೆರಡೂ ಅವರಿಗೆ ಮೆಚ್ಚಿಕೆಯಾಗಿರಲಿಲ್ಲ. ಅದಕ್ಕಾಗಿ 'ಆಲ್ ಇಂಡಿಯಾ ರೇಡಿಯೋ' ಮುಂಬಯಿಯಲ್ಲಿ ದೊಡ್ಡ ಪಗಾರದ ಒಂದು ನೌಕರಿಯನ್ನು ದೊರಕಿಸುವದಕ್ಕಾಗಿ ಪ್ರಯತ್ನ ನಡೆಸಿದ್ದರು. ಶಕುಂತಲೆಗೆ ಇದೆಲ್ಲ ಗೊತ್ತಿತ್ತು; ಇದರ ಮುಂದಿನದೇನೂ ಗೊತ್ತಿರಲಿಲ್ಲ. ಗೊತ್ತುಮಾಡಿಕೊಳ್ಳಬೇಕೆಂಬ ಹವ್ಯಾಸವೂ ಅವಳಿಗಿರಲಿಲ್ಲ. ಅವರೀರ್ವರೂ ಬಡೋದೆಯಲ್ಲಿ ಕೂಡಿ ತಿರುಗಾಡುತ್ತಿದ್ದಾಗ, ಯಾವದೇ ಬಗೆಯ ರಾಜಕೀಯ, ಸಾಮಾಜಿಕ ಅಥವಾ ಸಾಹಿತ್ಯಿಕ ಚರ್ಚೆ ಅವರಲ್ಲಾಗಿರಲಿಲ್ಲ. ಅವರ ಸಹವಾಸ ಅವಳಿಗೆ

ಅಷ್ಟೊಂದು ಬೇಕೂ ಆಗಿರಲಿಲ್ಲ, ಬೇಡವೂ ಆಗಿರಲಿಲ್ಲ. ಬಾಳಾಸಾಹೇಬರ ವಯಸ್ಸು ಸುಮಾರು ಮೂವತ್ತರ ಮೇರೆಯಲ್ಲಿದ್ದಿರಬಹುದು; ಅದಕೂ ಹೆಚ್ಚೇನಿಲ್ಲ. ಆದರೆ ಅದೇಕೋ ಯಾರಿಗೆ ಗೊತ್ತು, ಅವರೊಡನೆ ಮನಬಿಚ್ಚಿ ಮಾತನಾಡಬೇಕೆಂದು ಶಕುಂತಲೆಗೆಂದೂ ಅನಿಸಲೇ ಇಲ್ಲ.

ಶಕುಂತಲೆ, ಭಾವೂಸಾಹೇಬರೊಡನೆ ತಿರುಗಿ ಕೊಲ್ಹಾಪುರಕ್ಕೆ ಬಂದಾಗ ಬಾಳಾಸಾಹೇಬರನ್ನು ಅವಳು ಮರೆತುಬಿಟ್ಟಿದ್ದಳು. ಬಡೋದೆಯನ್ನು ಬಿಟ್ಟು ಬರುವಾಗ ಶಕುಂತಲೆ ಬಾಳಾಸಾಹೇಬರಿಗೆ, 'ನೆನಪಿರಲಿ ಮತ್ತೆ', ಎಂದು ಹೇಳಿದ್ದಳು. ಅದಕ್ಕೆ ಉತ್ತರವಾಗಿ ಬಾಳಾಸಾಹೇಬರೂ, 'ಇರದೇ ಏನು? ಎಂದಾದರೂ ಪತ್ರ ಹಾಕಿದರೆ, ಅದಕ್ಕೆ ಉತ್ತರ ಬರೆಯುವಷ್ಟು ದಯೆಯಿರಲಿ ತೀರಿತು' ಎಂದಂದಿದ್ದರು. ಆದರೆ ಇದೆಲ್ಲ ಕೇವಲ ಔಪಚಾರಿಕವಾಗಿತ್ತು. ಒಂದೆರಡು ತಿಂಗಳುಗಳು ಕಳೆದರೂ ಶಕುಂತಲೆಗೆ ಬಾಳಾಸಾಹೇಬರಿಂದ ಯಾವ ಪತ್ರವೂ ಬರಲಿಲ್ಲ; ಅವಳೂ ಆ ವಿಷಯವನ್ನು ಮರೆತುಬಿಟ್ಟಳು.

* * * *

ಬೇಸಿಗೆ ಕಳೆದು ಮಳೆಗಾಲವು ಕಾಲಿಟ್ಟಿತು. ಕಾಲೇಜ ಮತ್ತೆ ಪ್ರಾರಂಭವಾಯಿತು. ಶಕುಂತಲೆ ಈಗ ಬಿ. ಎಸ್‌ಸಿ. ವರ್ಗದಲ್ಲಿ ಓದುತ್ತಿದ್ದಳು. ಆದರೆ ಅಭ್ಯಾಸ ಮಾಡಬೇಕೆಂಬ ಮೊದಲಿನ ಲವಲವಿಕೆ ಅವಳಲ್ಲೀಗ ಉಳಿದಿರಲಿಲ್ಲ. ಕಾಲೇಜಕ್ಕೇನೋ ನಿತ್ಯ ಹೋಗುತ್ತಿದ್ದಳು. ಅದು ಬರೀ ಮನಸ್ಸಿಗೊಂದು ಉದ್ಯೋಗವನ್ನು ಹಚ್ಚುವದಕ್ಕಾಗಿಯೇ ಏನೋ! ಅವಳೊಬ್ಬಳೇ ಕುಳಿತಳೆಂದರೆ, ಅವಳಿಗೆ ತಾಗಿದ ಪೆಟ್ಟು ಮತ್ತೆ ಮತ್ತೆ ನೋವನ್ನೂ ನಿರಾಶೆಯನ್ನೂ ಉಂಟು ಮಾಡುತ್ತಿತ್ತು. ಆ ನಿರಾಶೆ ಆಳವಾಗಿ ಅವಳ ಮನದಲ್ಲಿ ಭೇದಿಸಿತ್ತು. ತಿಂಗಳ ಕೊನೆಗೆ ನಾಲ್ಕಾರು ದಿನ ಭಾವೂಸಾಹೇಬರು ಬಡೋದೆಯಿಂದ ಬಂದಾಗ ಮಾತ್ರ ಅವಳಿಗೆ ಹಗುರೆನಿಸುತ್ತಿತ್ತು; ಆದರೆ ಉಳಿದ ಹೊತ್ತಿನಲ್ಲಿ ಅವಳ ಲಕ್ಷ್ಯ ಬೇರಾವುದರ ಕಡೆಗೂ ಹೋಗುತ್ತಿರಲಿಲ್ಲ.

ಪದ್ಮಾಕರನ ಪ್ರೇಮವನ್ನು ದೊರಕಿಸುವದಕ್ಕಾಗಿ ಅವಳು ಮಾಡಿದ ಪ್ರಯತ್ನ ವ್ಯರ್ಥವಾಗಿತ್ತು. ಜೀವನದುದ್ದಕ್ಕೂ ಅವನ ಸಹವಾಸ ದೊರಕಿಸುವದು ಅಶಕ್ಯವೆಂದು ಅವಳಿಗೆನಿಸಿಹೋಗಿತ್ತು; ಈ ಆಶೆ ಕೂಡ ಇನ್ನು ಮನದಲ್ಲಿ ಸುಳಿಯಬಾರದೆಂದು ಅವಳ ಆಶೆ; ಆದರೆ ಅವಳ ಈ ಆಶೆ ಈಡೇರುತ್ತಿರಲಿಲ್ಲ. ಮನಸ್ಸು ಉದ್ವಿಗ್ನಗೊಂಡಾಗ ಅದನ್ನು ಹಗುರು ಮಾಡಲು ಅದೆಷ್ಟೋ ಉಪಾಯಗಳನ್ನು ಅವಳು ಮಾಡುತ್ತಿದ್ದಳು; ತಂಗಿ 'ಛಬೂತಾಯಿ' ಗೆ ಪಾಠ ಹೇಳುತ್ತಿದ್ದಳು. ಇಲ್ಲವೆ ಅವಳ ಚಿಕ್ಕ ತಮ್ಮ 'ಮಧು' ನನ್ನು ಕರೆದುಕೊಂಡು ಪೇಟೆಯ ಕಡೆಗೆ ಹೋಗಿಬರುತ್ತಿದ್ದಳು. ಇಲ್ಲವೆ ಮಂಗಳ ವಾರಪೇಟೆಯಲ್ಲಿದ್ದ ಅವಳ ಗೆಳತಿ ಸಿಂಧು ಫಡನೀಸಳ ಮನೆಗೆ ಹೋಗಿ ಕುಳಿತುಕೊಳ್ಳುತ್ತಿದ್ದಳು. ಆದರೆ ಇವುಗಳಿಂದ ವಿಶೇಷ ಪ್ರಯೋಜನವೇನೂ ಆಗುತ್ತಿರಲಿಲ್ಲ. ಎಷ್ಟೋ ಸಲ ಹೀಗೂ ಆಗುವ ಸಂಭವವಿದೆ, ಮನುಷ್ಯನಿಗೆ ತಾನು ಕೈಕೊಳ್ಳುವ ಉಪಾಯಗಳಿಂದ ಪ್ರಯೋಜನವಿಲ್ಲವೆಂದು ಗೊತ್ತಿರುತ್ತದೆ. ಆದರೂ ಅವನು ಅವುಗಳನ್ನೇ ಬೆಂಬತ್ತುತ್ತಾನೆ!

ಅದೊಂದು ದಿನ ಸಂಜೆ, ಶಕುಂತಲೆ ತನ್ನ ಗೆಳತಿ ಸಿಂಧು ಫಡನೀಸಳ ಮನೆಗೆ ಹೋಗಿದ್ದಳು. ಇಬ್ಬರೂ ಅಟ್ಟದ ಮೇಲಿನ ಕೋಣೆಯಲ್ಲಿ ಮಾತನಾಡುತ್ತ ಕುಳಿತಿದ್ದರು. ಹೊರಗಿನ ಗ್ಯಾಲರಿಯ ಮೇಲೆ ಸಿಂಧುವಿನ ಇಬ್ಬರು ಚಿಕ್ಕ ತಂಗಿಯರೂ ಅವರ ಗೆಳತಿಯರೂ ಗೊಂಬೆಯ ಆಟವನ್ನು ನಡೆಸಿದ್ದರು. ಆಡುತ್ತಿರುವಾಗ ನಡುವೆಯೇ ತಮ್ಮ ಆಟವನ್ನು ಬಿಟ್ಟು ಆ ಹುಡುಗಿಯರೆಲ್ಲ ಗ್ಯಾಲರಿಯಲ್ಲಿ ಬಗ್ಗಿ, 'ಇಲ್ಲಿ ನೋಡು, ಇಲ್ಲಿ ನೋಡು' ಎಂದು ಒಬ್ಬರನ್ನೊಬ್ಬರು ಎಳೆದು ತೋರಿಸಹತ್ತಿದರು. ಸಿಂಧುವಿನ ಒಬ್ಬ ತಂಗಿ ಅವಳ ಬಳಿ ಬಂದು, ಅವಳ ಭುಜವನ್ನು ತಟ್ಟಿ ಮತ್ತೆ ಮತ್ತೆ ಹೇಳಿದಳು, 'ಅಕ್ಕಾ, ಹೊರಗೆ ನೋಡು ಬಾ, ಏನೋ ಬಂದಿದೆ' ಎಂದು.

'ಏನೇ ಸುಮ್ಮನೆ ಹೋಗು, ನಿಂದೊಂದು' ಎಂದು ಸಿಂಧು ಅವಳನ್ನು ಬೆದರಿಸಿ ಕಳಿಸಬೇಕೆಂದಳು. ಆದರೆ ಅವಳು ಕೇಳಲೇ ಇಲ್ಲ. ಮತ್ತೆ ಶಕುಂತಲೆಯ ಭುಜವನ್ನು ತಟ್ಟಿ ಅವಳು ಹೇಳಿದಳು, "ನೀವೂ ನೋಡಬರ್ರಿ, ಹೊರಗೇನೋ ಬಂದಿದೆ" ಎಂದು.

"ನಡೆಯವಾ, ನೋಡಿ ಬರೋಣ" ಎನ್ನುತ್ತ ಶಕುಂತಲೆಯನ್ನು

ಕರೆದುಕೊಂಡು ಸಿಂಧು ಮುಂದೆ ಹೊರಟಳು; "ಇದ್ದಿದ್ದೀತು ಏನಾದರೂ ಸಿನೇಮದ ಜಾಹೀರಾತು; ಇವಳದೊಂದು ತ್ರಾಸವೇ."

ಅವರು ನೋಡಹೋದುದು ಸಿನೇಮದ ಜಾಹೀರಾತು ಆಗಿರಲಿಲ್ಲ. ಅದೊಂದು ವಿಚಿತ್ರ ದೃಶ್ಯವೇ ಆಗಿತ್ತು. ಶಕುಂತಲೆ ತನ್ನ ಎಡಗೈಯ್ಯಮೇಲೆ ತಲೆಯನ್ನಿರಿಸಿ ಬಗ್ಗಿ ನೋಡಿದಳು. ಉರುಟಾದ ಬಟ್ಟೆಯ ಒಂದೇ ವಿಧದ ಉಡುಪನ್ನು ಧರಿಸಿದ ನೂರಿನ್ನೂರು ಜನರು ಪದ್ಮಾಳಿಯ ಕಡೆಯಿಂದ ಊರಲ್ಲಿ ಹೊರಟಿದ್ದಾರೆ; ಅವರ ಕೈಯ ಕಬ್ಬಿಣದ ಬೇಡಿಗಳ ಸಪ್ಪಳ ಕಿವಿಯನ್ನು ತುಂಬಿಬಿಟ್ಟಿತ್ತು. ಈ ಶಬ್ದ ಕಿವಿಗೆ ತಾಗಿದೊಡನೆಯೇ ಇದೆಲ್ಲ ಏನಿದೆಯೆಂಬು ದನ್ನು ಶಕುಂತಲೆ ಕೂಡಲೆ ಗುರುತಿಸಿಬಿಟ್ಟಳು. ಅಪರಾಧಿ ಕೈದಿಗಳನ್ನು ಪದ್ಮಾಳಿಯ ರೇಸ ಕೋರ್ಸಿನ ಮೇಲೆ ಕೂಲಿಯ ಕೆಲಸಕ್ಕಾಗಿ ಕರೆದುಕೊಂಡು ಹೋಗುತ್ತಿದ್ದುದು ಅವಳಿಗೆ ಗೊತ್ತಿತ್ತು. ಆದರೆ ಇತ್ತೀಚೆ, ಆ ಕೈದಿಗಳೊಡನೆ ರಾಜಕೀಯ ಕೈದಿಗಳನ್ನೂ ಕೈಗೆ ಬೇಡಿ ತೊಡಿಸಿ ಅಲ್ಲಿ ಕೆಲಸಕ್ಕಾಗಿ ಕರೆದು ಕೊಂಡು ಹೋಗುತ್ತಿದ್ದರಂತೆ, ಬೇಕೆಂದೇ ಊರಲ್ಲಿ ಮೆರವಣಿಗೆ ತೆಗೆದು! ಇದರಿಂದ ಆ ರಾಜಕೀಯ ಕೈದಿಗಳಿಗೆ ಅಪಮಾನವೆನಿಸಿ ಅವರು ತಪ್ಪು ಒಪ್ಪಲೆಂದು ಅವರ ಆಶಯವಿತ್ತೇನೋ! ಆದರೆ ಅದರ ಪರಿಣಾಮ ವಿರುದ್ಧ ವಾಗಿಯೇ ಆಗುತ್ತಿತ್ತು. ಕಳ್ಳರು ಕಾಕರೊಡನೆ ಕೈಯಲ್ಲಿ ಬೇಡಿ ಧರಿಸಿ ಕೂಡಿ ನಡೆದ ಈ ರಾಜಕೀಯ ಕೈದಿಗಳನ್ನು ನೋಡಲು ರಸ್ತೆಯ ಇಬ್ಬದಿ ಗಳಲ್ಲೂ ಜನಸಂದಣಿ ಕೂಡಿರುತ್ತಿತ್ತು. ಅವರ ಬಾಯಿಂದ ಮಾತು ಹೊರಡ ದಿದ್ದರೂ 'ನೀವು ನಮಗೆ ಪೂಜ್ಯರು; ನಿಮ್ಮನ್ನು ದುಃಖಕ್ಕೀಡು ಮಾಡಿದ ಸರಕಾರ ನಮಗೂ ಮಾನ್ಯವಿಲ್ಲ.' ಎಂದು ಅವರ ಮುಖದಲ್ಲಿ ಮೂಡಿದ ಭಾವನೆಗಳು ಸ್ಪಷ್ಟವಾಗಿ ಹೇಳುತ್ತಿದ್ದವು.

ಈ ಎಲ್ಲ ಸಂಗತಿಗಳು ಶಕುಂತಲೆಯ ತಲೆಯಲ್ಲಿ ಒಮ್ಮೆಲೇ ನುಸುಳಿ ಬಿಟ್ಟವು. ಇನ್ನೂ ಸ್ವಲ್ಪ ಹೊತ್ತು ಅಲ್ಲಿಯೇ ನಿಂತರೆ, ಕೈದಿಗಳ ಸಾಲಿಗೆ ಸಾಲು ಅಲ್ಲಿಂದ ಹಾಯ್ದು ಹೋಗುವದು; ಅದರಲ್ಲಿ ರಾಜಕೀಯ ಕೈದಿ ಗಳೂ ಒಂದು ವೇಳೆ ಇದ್ದಿರಬಹುದು. ಅವರಲ್ಲಿ ಪದ್ಮಾಕರನೂ ಇದ್ದರೆ ........? ಅಕಸ್ಮಾತ್ ಅವನು ಮುಖವನ್ನು ಮೇಲೆತ್ತಿ ನೋಡಿದರೆ? ತಮ್ಮಿಬ್ಬರ ದೃಷ್ಟಿಯೂ ಒಂದಾದರೆ........?

ಆ ಕಲ್ಪನೆಯೇ ಶಕುಂತಲೆಗೆ ಸಹಿಸದಾಯಿತು. ಅವಳು ಓಡೋಡುತ್ತ ಒಳಗೆ ಹೋಗಿ ಒಂದು ಕುರ್ಚಿಯ ಮ್ಲೆ ಕೊಡಹಿಬಿಟ್ಟು, ತನ್ನ ತಲೆಯನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡಳು.

ಕೈದಿಗಳ ಬೇಡಿಯ ಸಪ್ಪಳ ಎಷ್ಟೋ ಹೊತ್ತಿನ ವರೆಗೆ ಅವಳ ಕಿವಿಗಳಲ್ಲಿ ಪ್ರತಿಧ್ವನಿಸುತ್ತಲೇ ಇತ್ತು !

# ೭

೧೯೪೦ ನೆಯ ಇಸ್ವಿ ಫೆಬ್ರುವರಿ ತಿಂಗಳಲ್ಲಿ ಭಾವೂಸಾಹೇಬರು ಬಡೋದೆಯಲ್ಲಿಯ ತಮ್ಮ ಕೆಲಸವನ್ನು ಮುಗಿಸಿಕೊಂಡು ಕೊಲ್ಹಾಪುರಕ್ಕೆ ತಿರುಗಿದರು. ಅವರು ಬಂದು ಸುಮಾರು ಮೂರು ವಾರಗಳಾಗಿರಬಹುದು; ಆದೊಂದು ಅವರಿಗೆ ಬಡೋದೆಯಿಂದ ಪತ್ರ ಬಂತು. ಅದನ್ನೋದಿ ಅವರು ಬಹಳ ಗೊಂದಲದಲ್ಲಿ ಬಿದ್ದಂತೆ ಕಂಡಿತು. ಶಕುಂತಲೆಗೆ ಆ ಪತ್ರವನ್ನು ತೋರಿಸುವದೋ ಬೇಡವೋ ಎಂದು ಅವರು ಯೋಚಿಸುತ್ತಿದ್ದರು. ಪತ್ರ, ಬಾಳಾಸಾಹೇಬ ಮರಾಠೆಯವರದು. ಅದರಲ್ಲಿ ಅವರು ಬರೆದಿದ್ದ ವಿಷಯವಿದು. “ ನಾನು ಪತ್ರ ಬರೆದುದರ ಉದ್ದೇಶ ತಮಗೆ ಗೊತ್ತಿರಲಾರದು. ಬರೆದ ವಿಷಯ ಅನಿರೀಕ್ಷಿತವೆಂದೆನಿಸಿದರೂ ಅದು ತಮಗೆ ಬೇಸರವನ್ನುಂಟು ಮಾಡಲಾರದೆಂದು ನಾನು ಆಶಿಸುತ್ತೇನೆ. ನನ್ನ ಉದ್ದೇಶವನ್ನು ಹೇಗೆ ವ್ಯಕ್ತ ಮಾಡಬೇಕೆಂಬುದೇ ತಿಳಿಯದಾಗಿದೆ. ಆದರಲ್ಲಿಯೂ ಪತ್ರ ಬರಿಯುವ ಕಲೆ ನನಗೆ ಹೊಸದು; ವಿಷಯದ ಮೂಲಕ ಅದು ಇನ್ನಷ್ಟು ಕಠಿಣವಾಗಿದೆ. ಆದಕ್ಕೆಂದೇ ಹೆಚ್ಚಿನ ಪ್ರಸ್ತಾವನೆಯನ್ನೇನೂ ಜೋಡಿಸದೆ ಹೇಳಬೇಕಾದ ವಿಷಯದ ಕಡೆಗೇ ಹೊರಳುವೆ. ತಮ್ಮ ಕನ್ಯೆ ಶಕುಂತಲೆಯನ್ನು ವಿವಾಹವಾಗುವ ಆಶೆ ನನಗಿದೆ. ಆವಳು ನನಗೆ ಮೆಚ್ಚಿಕೆಯಾಗಿದ್ದಾಳೆ; ಅವಳಿಗೆ ನಾನು ಮೆಚ್ಚಿಕೆಯಾಗಿರುವೆನೋ ಇಲ್ಲವೋ ಮಾತ್ರ ಗೊತ್ತಿಲ್ಲ! ಅವಳ

ಅಭಿಪ್ರಾಯವನ್ನು ತಾವು ಕೇಳಿಕೊಂಡು ನನಗೆ ತಿಳಿಸಬಹುದು.

ಬಡೋದೆಯಲ್ಲಿಯ ತಮ್ಮ ಕೆಲಸವನ್ನು ಪೂರೈಸಿಕೊಂಡು, ತಾವು ಕೊಲ್ಹಾಪುರಕ್ಕೆ ಹೋದ ವಿಷಯ ನಮ್ಮ ಸೋದರಮಾವನಿಂದ ನನಗೆ ತಿಳಿಯಿತು; ತಾವು ಅಲ್ಲಿರುವಾಗಲೇ ತಮ್ಮನ್ನು ಕಾಣಬೇಕೆಂದಿದ್ದೆ. ಆದರೆ ಅದು ಸಾಧ್ಯವಾಗಲಿಲ್ಲ. ಕಳೆದ ನಾಲ್ಕೈದು ತಿಂಗಳಿಂದ ನಾನು ಬಡೋದೆಯಲ್ಲಿಲ್ಲ; ಆಲ್ ಇಂಡಿಯಾ ರೇಡಿಯೋ, ಮುಂಬಯಿಯಲ್ಲಿಯೇ ಕೆಲಸ ಮಾಡುತ್ತಿದ್ದೇನೆ. ಈ ನೌಕರಿಯಲ್ಲಿ ನಾನು ಬೇಗನೆ 'ಕಾಯಂ' ಆಗಬಹುದೆಂದೂ ಆಶೆಯಿದೆ. ಅದಕ್ಕೆಂದೇ ಇಷ್ಟು ದಿನಗಳ ವರೆಗೆ ಬಿಟ್ಟಿದ್ದ ಲಗ್ನದ ವಿಚಾರ ಇಂದು ಮತ್ತೆ ನನ್ನ ತಲೆಯಲ್ಲಿ ಸುಳಿಯತೊಡಗಿದೆ.

ಲಗ್ನದ ವಿಚಾರವಾಗಿ ಮಾತೆತ್ತಿದ್ದೇನೆಂದ ಬಳಿಕ, ಕೆಲವೊಂದು ವಿಚಾರಗಳನ್ನು ತಮಗೆ ಸ್ಪಷ್ಟಪಡಿಸುವದು ಅತ್ಯಗತ್ಯವಿದೆ. ಪಿತ್ರಾರ್ಜಿತ ಆಸ್ತಿ ನನಗೇನೂ ಇಲ್ಲ; ನನಗೆ ಹಿರಿಯರೆಂದರೆ ನಮ್ಮ ಸೋದರಮಾವ ಒಬ್ಬರೇ. ನಾನು ಮಹತ್ವಾಕಾಂಕ್ಷೆಯುಳ್ಳ ಒಬ್ಬ ಪದವೀಧರ ಯುವಕ. ( ನನಗೀಗ ಮೂವತ್ತೆರಡನೆಯ ವರುಷ ನಡೆದಿದೆ ). ಕಾಯಂ ನೌಕರಿಯೂ ಇದೆ; ಇದಿಷ್ಟೇ ನನ್ನ ಯೋಗ್ಯತೆಯೆಂದು ಹೇಳಬಹುದು. ನನ್ನ ಸ್ವಭಾವದ ಪರಿಚಯ ಅಲ್ಪವಾದರೂ ತಮ್ಮ ಕನ್ಯೆಗೆ ಆಗಿರಬಹುದು. ಕೊಂಚ ಹಟದ ಸ್ವಭಾವ ನನ್ನದಿದ್ದರೂ ಕೂಡ........"

ಭಾವೂಸಾಹೇಬರು ಮುಂದೆ ಓದಲಿಲ್ಲ; ಓದಿದಷ್ಟನ್ನೇ ಕುರಿತು ವಿಚಾರಮಾಡತೊಡಗಿದರು. ಶಕುಂತಲೆಗೆ ಆ ಪತ್ರವನ್ನು ತೋರಿಸುವದೋ ಇಲ್ಲವೋ ಎಂದವರ ಮನಸ್ಸು ಹೊಯ್ದಾಟದಲ್ಲಿ ತೊಡಗಿತ್ತು. ಬಾಳಾಸಾಹೇಬರ ಪತ್ರದಲ್ಲಿ ಅನುಚಿತವಾದುದೇನೂ ಇರಲಿಲ್ಲ. ಆದರೆ ವಿಶೇಷ ಪರಿಚಯವಿಲ್ಲದ ಒಬ್ಬ ಯುವಕನು, ವಿವಾಹದ ಬಗ್ಗೆ ತನ್ನನ್ನು ಕೇಳುತ್ತಿದ್ದಾನೆಂದರೆ ಶಕುಂತಲೆ ಏನೆಂದುಕೊಳ್ಳುವಳೋ ಎಂದು ಅವರಿಗೆ ಚಿಂತೆ; ಶಕುಂತಲೆಗೆ ಅದನ್ನು ತೋರಿಸುವಂತೆಯೇ ಇಲ್ಲವೆಂದು ಅವರೊಂದು ಸಲ ನಿಶ್ಚಯಿಸಿದರು; ಹಾಗೆ ತೋರಿಸಿದುದು ಅವಳಿಗೆ ಮೆಚ್ಚಿಕೆಯಾಗದಿದ್ದರೆ? 'ಏನೇ ಇರಲಿ, ಈಗಂತೂ ಇಟ್ಟುಬಿಟ್ಟು ನಾಲ್ಕು ದಿನಗಳಾದ ಮೇಲೆಯೇ ಮತ್ತೆ ವಿಚಾರ ಮಾಡೋಣ' ಎಂದು ಅವರು ಅದನ್ನು ಹಾಗೇ ಸರಿಸಿ

ಬಿಟ್ಟರು.

ನಾಲ್ಕೈದು ದಿನಗಳುರುಳಿದವು; ಶಕುಂತಲೆ ಚೇಷ್ಟೆ, ವಿನೋದಗಳಲ್ಲಿ ತೊಡಗಿದಂತಹ ಸಮಯವನ್ನು ನೋಡಿ, ಭಾವೂಸಾಹೇಬರು ಅವಳಿಗೆಂದರು "ಒಂದು ಪತ್ರ ಬಂದಿದೆ; ತೋರಿಸಲೇ ?"

"ಯಾರದು ?" ಶಕುಂತಲೆ ಕುತೂಹಲದಿಂದ ಕೇಳಿದಳು.

"ಬಾಳಾಸಾಹೇಬರ ನೆನಪಿಲ್ಲವೇ ನಿನಗೆ ?"

ಹುಬ್ಬುಗಂಟಿಕ್ಕಿ ಶಕುಂತಲೆ ಕೇಳಿದಳು "ಬಾಳಾಸಾಹೇಬ ?"

"ಹಾಂ, ಬಾಳಾಸಾಹೇಬ ಮರಾಠೆ, ಸರದಾರ ದಾದಾಸಾಹೇಬರ ಮನೆಯಲ್ಲಿ s !"

"ಹಾಂ, ಅವರೇ ! ಬಡೋದೆಯಲ್ಲಿದ್ದವರು."

"ಹೌದು. ಆದರೆ ಅವರೀಗ ಬಡೋದೆಯಲ್ಲಿಲ್ಲ."

"ಹಾಗಾದರೆ ?"

"ಈಗವರು ಮುಂಬಯಿಯಲ್ಲಿದ್ದಾರೆ, ಆಲ್ ಇಂಡಿಯಾ ರೇಡಿಯೋ ದಲ್ಲಿ."

"ರೇಡಿಯೋದಲ್ಲಿ ಕೆಲಸ ದೊರೆಯುವದಿದೆ ಎಂದು ಆಗಲೇ ಹೇಳು ತ್ತಿದ್ದರು; ಅದೇ ದೊರೆಯಿತೇನೋ ಹಾಗಾದರೆ ?"

"ಹೌದು, ಅವರ ಬಗ್ಗೆ ನಿನ್ನ ಅಭಿಪ್ರಾಯವೇನು ?"

"ನನ್ನ ಅಭಿಪ್ರಾಯ ? ಅದೇನು ತಾನೇ ಇರಬಲ್ಲದು ?"

"ಆದರೂ........"

"ನೆಟ್ಟಗಿದ್ದಾರೆ; ........ಅದೇಕೆ ಬೇಕಾಯಿತು ?"

"ಅವರಿಂದಲೇ ನನಗೆ ಪತ್ರ ಬಂದದ್ದು ! ಪತ್ರದಲ್ಲಿ ನಿನ್ನ ವಿಷಯ ವನ್ನೇ ಅವರು ಬರೆದಿದ್ದಾರೆ; ನೋಡುವದಿದೆಯೇನು ನಿನಗೆ ಪತ್ರವನ್ನು ?"

"ನೋಡೋಣ."

ಭಾವೂಸಾಹೇಬರು ಎದ್ದು, ಟೇಬಲ್ಲಿನ ಡ್ರಾಅರದಲ್ಲಿಟ್ಟಿದ್ದ ಪತ್ರವನ್ನು ತೆಗೆದು ಅವಳ ಕೈಗೆ ಕೊಟ್ಟರು. ಓದಿಕೊಳ್ಳಲೆಂದು ಅವಳೊಬ್ಬಳನ್ನೇ ಬಿಟ್ಟು 'ಛಬೂ' ಎಂದು ಚಿಕ್ಕ ಮಗಳನ್ನು ಕೂಗುತ್ತ, ಏನೋ ಕೆಲಸದ ನೆಪ ತೆಗೆದು ಹೊರಗೆ ಹೋಗಿಬಿಟ್ಟರು.

ಆ ಪತ್ರವನ್ನೋದಿ ಶಕುಂತಲೆಗೆ ಬಹಳೇ ಆಶ್ಚರ್ಯವಾಯಿತು. ಬಾಳಾ ಸಾಹೇಬರು ತಮ್ಮ ಆಶೆಯನ್ನು ಹೀಗೆ ವ್ಯಕ್ತ ಮಾಡಬಹುದೆಂದು ಅವಳೆಂದೂ ಎಣಿಸಿರಲಿಲ್ಲ. ಅವಳ ಮನಸ್ಸು ಅವರ ಬಗ್ಗೆ ನಿರ್ವಿಕಾರವಾಗಿತ್ತು. ಕಳೆದ ಏಳೆಂಟು ತಿಂಗಳಲ್ಲಿ ಬಾಳಾಸಾಹೇಬರ ನೆನಪು ಕೂಡ ಅವಳ ಸ್ಮೃತಿಪಟಲ ದಿಂದ ಹಾರಿಹೋಗಿತ್ತು. ಅವರೊಡನೆ ಅವಳಿಗಿದ್ದುದು ಕೇವಲ ಹತ್ತು ಹದಿ ನೈದು ದಿನ ಕೂಡಿ ಆಡ್ಡಾಡಿದುದರ ಪರಿಚಯ ಮಾತ್ರ; ಅವರ ಮುಖದ ನೆನಪೂ ಅವಳಿಗೀಗ ಸರಿಯಾಗಿ ಇದ್ದಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವರು ಅವಳನ್ನು ಲಗ್ನಕ್ಕಾಗಿ ಕೇಳುವದೆಂದರೆ! ಅವಳಿಗೆ ವಿಚಿತ್ರವೆನಿಸಿತು; ಅದನ್ನೋದಿ ಅವಳು ಕೊಂಚ ಒಳಗೊಳಗೇ ನಕ್ಕಳು ಕೂಡ.

ಆದರೆ ಆಶ್ಚರ್ಯದ ಆವೇಗವೆಲ್ಲ ಆರಿಹೋದ ಮೇಲೆ ಶಕುಂತಲೆ ಗಂಭೀರವಾಗಿ ವಿಚಾರ ಮಾಡತೊಡಗಿದಳು; ಪತ್ರವನ್ನು ಮತ್ತೊಮ್ಮೆ ಓದಿ ನೋಡಿದಳು. ಬಾಳಾಸಾಹೇಬರು ಒಳ್ಳೇ ವ್ಯವಸ್ಥಿತವಾಗಿ ಅದನ್ನು ಬರೆದಿದ್ದರು, ಬರೆಯುವದರಲ್ಲಿ ಅವರ ಮನಸ್ಸಿನ ಸರಳತೆಯೂ ವ್ಯಕ್ತವಾಗುತ್ತಿತ್ತು. ಪತ್ರ ಬರೆದುದರಲ್ಲಿ ಅವರ ದೋಷ ಎಳ್ಳಷ್ಟೂ ಇರಲಿಲ್ಲ. ಅವರಿಗೆ ವಿವಾಹದ ವಿಚಾರ ಮನದಲ್ಲಿ ಬಂತು. ಅದನ್ನು ಭಾವೂಸಾಹೇಬರಿಗೆ ತಿಳಿಸಿಬಿಟ್ಟರು. ಅದರಲ್ಲಿ ತಪ್ಪೇನು? ಶಕುಂತಲೆ ಅವರ ಮನಸ್ಸಿಗೆ ಒಪ್ಪಿಗೆಯಾಗಿದ್ದಳು. ಆದಕ್ಕೆಂದಲೇ ಅವರು ಅವಳೊಡನೆ ಲಗ್ನದ ಮಾತೆತ್ತಿದುದು! ಇದರಲ್ಲಿ ಹಾಗೆ ಅನುಚಿತವಾದರೂ ಏನಿದೆ?

ಇನ್ನೇನು, ಒಂದು ಸಣ್ಣ ತಪ್ಪು ಇಲ್ಲಿಯೂ ಇದೆ ಎನ್ನಬಹುದು. ಕನ್ಯೆ ಪುರುಷನಿಗೆ ಮೆಚ್ಚಿಕೆಯಾಗಿ ಲಗ್ನವಾಗಬೇಕೆಂದು ಆಶೆಯಾದರೆ ಅವನು ಅವಳ ನಿಕಟ ಸಹವಾಸವನ್ನು ಪಡೆಯಬೇಕು, ಪ್ರಿಯಾರಾಧನೆ ಮಾಡಬೇಕು, ಬಳಿಕ ಸಂಧಿಯನ್ನು ದೊರಕಿಸಿ ಏಕಾಂತದಲ್ಲಿ ಅವಳಿಗೆ ತನ್ನ ಉದ್ದೇಶವನ್ನು ತಿಳಿಸಬೇಕು,—ಇದರಲ್ಲಿ ಕಾವ್ಯವಿದೆ. ಬಾಳಾಸಾಹೇಬರ ಪತ್ರದಲ್ಲಿ ಒಂದೂ ದೋಷವಿರಲಿಲ್ಲ; ಶಬ್ದಗಳೆಲ್ಲ ಸರಳವಾಗಿದ್ದವು; ಮಾತು ಸಕಾರಣವಾಗಿತ್ತು, ಅವರ ಅಂತಃಕರಣದ ಸರಳತೆ ಅದರಲ್ಲಿತ್ತು—ಎಲ್ಲ ಸರಿ. ಆದರೆ ಅದರಲ್ಲಿ ಕಾವ್ಯವಿದ್ದಿರಲಿಲ್ಲ.

ತಲೆಯಲ್ಲಿ ಈ ವಿಚಾರ ಸುಳಿದೊಡನೆಯೇ ಶಕುಂತಲೆ ತನ್ನಷ್ಟಕ್ಕೆ ತಾನೆ

ಪ್ರಶ್ನಿಸಿಕೊಂಡಳು. "ನನಗಾದರೂ ಈಗ ಬೇಕಾದುದೇನು ? ಕಾವ್ಯವೇ ? ಕಾವ್ಯದ ನನ್ನ ಆಶೆಯೆಲ್ಲ ಕಮರಿಹೋಗಿದೆ." ಪದ್ಮಾಕರನಲ್ಲಿ ಅನುರಕ್ತಳಾಗಿ ಅಂತಃಕರಣದಲ್ಲಡಗಿಸಿದ ಪ್ರೀತಿಯ ನಯವಾದ ಸುಂದರ ಹೂಗಳನ್ನು ಅವನ ಚರಣಕ್ಕೇರಿಸಬೇಕೆಂದು ಅವಳ ಆಶೆಯಿದ್ದಿತಲ್ಲವೇ ? ಪದ್ಮಾಕರನು ಇದರಿಂದ ಪ್ರಸನ್ನನಾಗಿ ಅವಳ ಪ್ರಿಯಾರಾಧನೆಯನ್ನು ಮಾಡಿದರೆ ಅದರಲ್ಲಿಯೇ ಅವಳಿಗೆ ಧನ್ಯತೆ. ಇದರಿಂದ ಅವರೀರ್ವರ ಸಹವಾಸವೂ ಸ್ಥಿರವಾಗಿ, ಅಪೂರ್ವಸುಖ ದೊರಕೀತೆಂಬ ಕಾವ್ಯದ ಆಶೆಯೇ ಅವಳಿಗಿದ್ದಿತಲ್ಲವೇ? ಈ ಕಾವ್ಯದ ಬೆನ್ನು ಹತ್ತಿಯೇ ಅವಳು ಇಂದು ಹುಚ್ಚಳಾಗಿದ್ದಳು. ಇದರಲ್ಲಿ ಪದ್ಮಾಕರನ ದೋಷವೇನೂ ಇದ್ದಿರಲಿಲ್ಲ. ಚಿಕ್ಕ ಮಗುವು ಒಂದು ಪಾತರಗಿತ್ತಿಯ ಬೆನ್ನುಹತ್ತಿ ಹಾರಾಡಿದಂತೆ, ಶಕುಂತಲೆ ಪದ್ಮಾಕರನ ವಿಷಯದಲ್ಲಿ ಕಾವ್ಯದ ಬೆನ್ನುಹತ್ತಿ ಹಾರಾಡಿದ್ದಳು; ಮತ್ತೆ ಸೋತು ದಣಿದಿದ್ದಳು ! ಈಗ ಆ ಕಾವ್ಯದ ಬಲೆಗೆ ಅವಳು ಬೀಳುವಂತಿರಲಿಲ್ಲ. ಒಂದು ಸಲ ಹಾರಾಡಿ ದಣಿದ ಶ್ರಮವನ್ನೂ, ಸೋಲಿನ ನೆನಪನ್ನೂ ಸಾಧ್ಯವಿದ್ದಷ್ಟು ಮರೆಯಲು ಅವಳು ಯತ್ನಿಸುತ್ತಿದ್ದಳು. ಈಗ ಆ ವೇಳೆಯೂ ಬಂದೊದಗಿತು. ಬಾಳಾಸಾಹೇಬರ ಮಾತಿಗೆ ಒಪ್ಪಿಗೆಯನ್ನು ಕೊಟ್ಟುಬಿಟ್ಟರೆ, ಈ ನಿರಾಶೆಯನ್ನು ಮರೆಯಲು ಅದೊಂದು ಸಾಧನವಾಗುವದಿಲ್ಲವೇ ?

ಶಕುಂತಲೆಯ ತಲೆಯಲ್ಲಿ ಸುಳಿದ ವಿಚಾರ ಕ್ರಮೇಣ ಸ್ಥಿರವಾಗತೊಡಗಿತು. ಮುಂದಿನ ಮೂರು ನಾಲ್ಕು ದಿನಗಳೂ ಇದೇ ವಿಚಾರದಲ್ಲಿ ಕಳೆದು ಹೋದವು. ಆತ್ಮಸಂಶೋಧನೆ ಮಾಡಿಕೊಂಡಷ್ಟೂ ಅವಳಿಗೆ ನಿರಾಶೆಯೆನಿಸ ತೊಡಗಿತು. ಪದ್ಮಾಕರನಲ್ಲಿ ಅನುರಕ್ತಳಾಗಿ ಜೀವನದ ಕಡೆಗೆ ನೋಡುವ ಅಂದಿನ ಶಕುಂತಲೆಯಲ್ಲೂ, ಕಳೆದ ಎಂಟು ಹತ್ತು ತಿಂಗಳಲ್ಲಿ ಪ್ರೇಮನಿರಾಶೆಯ ದುಃಖವನ್ನು ಅನುಭವಿಸಿ ಕೊರಗಿ ಸೊರಗಿದ ಇಂದಿನ ಶಕುಂತಲೆಯಲ್ಲೂ ಅದೆಷ್ಟೋ ಅಂತರವಿತ್ತು. ಅಂದು ಇದನ್ನು ಮಾಡಲೋ ಅದನ್ನು ಮಾಡಲೋ ಎಂದು ಅವಳ ಮನಸ್ಸು ಉತ್ಸಾಹಭರಿತವಾಗಿರುತ್ತಿತ್ತು; ಎಲ್ಲದರಲ್ಲೂ ದೊಡ್ಡ ಮನಸ್ಸು; ಮಹತ್ವದ ಕಾರ್ಯಗಳನ್ನೇನಾದರೂ ಮಾಡಿ ಪದ್ಮಾಕರನನ್ನು ಮೆಚ್ಚಿಸಬೇಕೆಂಬ ಹಂಬಲು ಬೇರೆ ಅವಳಿಗೆ. ತನ್ನ ಕೊನೆಯ ಪರೀಕ್ಷೆಯಲ್ಲಿ ಎಲ್ಲರಿಗಿಂತ ಹೆಚ್ಚಿನ ಕ್ರಮಾಂಕವನ್ನು ದೊರಕಿಸಲು ಒಳ್ಳೇ

ಜೋರಿನಿಂದ ಅಭ್ಯಾಸ ಮಾಡಬೇಕೆಂಬುದು ಅವಳ ಮನದ ಆಶೆಯಾಗಿತ್ತು; ಆದರೆ ಇಂದು? ಅದೆಲ್ಲ ಹೋಯಿತು. ಕೀಲಿ ಮುಗಿದ ಕೂಡಲೇ ನಿಂತಲ್ಲಿಯೇ ನಿಲ್ಲುವ ಗಡಿಯಾರದ ಮುಳ್ಳುಗಳಂತೆ, ಅವಳ ಇಂದಿನ ಸ್ಥಿತಿಯಾಗಿತ್ತು. ಅವಳ ಮನೋವೃತ್ತಿಯ ಗತಿಯೇ ಇಂದು ಬೇರೆಯಾಗಿತ್ತು. ಅವಳಿಗೆ ದೊಡ್ಡವಳೆನ್ನಿಸಿಕೊಳ್ಳುವದು ಬೇಕಾಗಿರಲಿಲ್ಲ, ಉಚ್ಚ ಶಿಕ್ಷಣ ಬೇಕಾಗಿರಲಿಲ್ಲ. ಪರದೇಶಕ್ಕೆ ಹೋಗುವದಂತೂ ಮೊದಲೇ ಬೇಕಾಗಿರಲಿಲ್ಲ. ಕೊನೆಗೆ ಇಲ್ಲಿಯ ಪದವಿ ಕೂಡ ಅವಳಿಗೆ ಬೇಕಾಗಿರಲಿಲ್ಲ. ಅವಳು ಮಾಡಬೇಕೆಂದಿಚ್ಛಿಸಿದ ವಿಷಯವಿಷ್ಟೇ; ಯಾರನ್ನಾದರೂ ಮದುವೆಯಾಗಿ ಇನ್ನುಳಿದ ಸಾಮಾನ್ಯ ಸ್ತ್ರೀಯರು ಮದುವೆ ಮಾಡಿಕೊಂಡು ಸಂಸಾರದಲ್ಲಿ ಸಿಲುಕಿಕೊಂಡಿರುವಂತೆ ತಾನೂ ಇರುವದು, ತೀರಿತು. ಬಾಳಾಸಾಹೇಬರ ಪತ್ರದಿಂದ ಈ ವಿಚಾರ ಇನ್ನೂ ಸ್ಥಿರವಾಯಿತು. ಇದೇ ದಾರಿಯನ್ನು ಹಿಡಿದು ಸಾಗಬಹುದಲ್ಲ ಎಂದು ಅವಳ ಮನಸ್ಸು ಮತ್ತೆ ಮತ್ತೆ ಹೇಳತೊಡಗಿತು. ಪ್ರೇಮದ ಸಂಬಂಧವೇ ಇಲ್ಲದೆ ಮದುವೆಯಾಗುವದಾದರೆ, ಬಾಳಾಸಾಹೇಬರೇನು ಅಯೋಗ್ಯರೇ?

* * * *

ಶಕುಂತಲಾ ಕುಲಕರ್ಣಿ, ಬಾಳಾಸಾಹೇಬ ಮರಾಠೆ ಇವರೀರ್ವರ ವಿವಾಹದ ಸುದ್ದಿ ಊರಲ್ಲೆಲ್ಲ ಹಬ್ಬಿತು; ಕೇಳಿದ ಜನರಿಗೆ ವಿಶೇಷ ಆಶ್ಚರ್ಯವೇನೂ ಆಗಲಿಲ್ಲ. ಕೆಲವು ಹೆಂಗಸರು ಮಾತ್ರ, ವರನ ವಯಸ್ಸು ಎರಡನೆಯ ವರನೇನೋ ಎನ್ನಿಸುವಂತಿದೆ ಎಂದು ಟೀಕೆ ಮಾಡಿದರು. ಆದರೆ ಲಗ್ನದ ದಿನ ವರನನ್ನು ನೋಡಿದ ಮೇಲೆ ಎಲ್ಲರ ಬಾಯಿಯೂ ಕಟ್ಟಿ ಹೋಯಿತು. ಶಕುಂತಲೆಯ ಬಿ. ಎಸ್‌ಸಿ. ಪರೀಕ್ಷೆ ಆಗುವದಕ್ಕಿಂತ ಮೊದಲೇ ಭಾವೂ ಸಾಹೇಬರು ಇಷ್ಟೇಕೆ ಅವಸರ ಮಾಡಿದರು ಎಂದು ಅವರಲ್ಲಿ ಕೆಲವರಿಗೆ ಆಶ್ಚರ್ಯ; ಆದರೆ ಕನ್ಯೆಯ ಕಾಲೇಜ ಶಿಕ್ಷಣ ಮುಗಿದಿರಲಿ, ಮುಗಿಯದಿರಲಿ ಒಳ್ಳೆಯ ವರನು ದೊರೆತರೆ ಲಗ್ನಮಾಡಿ ಬಿಡುವ ಸಂಪ್ರದಾಯ ನಮ್ಮಲ್ಲೇನೂ ವಿರಳವಲ್ಲ. ಲಗ್ನವಾದ ಮೇಲೆಯೂ ಅತ್ತೆಯ ಮನೆಯವರು ಸೊಸೆಯ ಶಿಕ್ಷಣಕ್ಕೆ ಸಮ್ಮತಿಯನ್ನೀಯುತ್ತಿದ್ದರೆ ಲಗ್ನವೂ ಶಿಕ್ಷಣಕ್ಕೆ ಆತಂಕವಾಗುವದಿಲ್ಲ.

ಹಾಗೆಲ್ಲ ಕೇಳಿದವರ ಪ್ರಶ್ನೆಗೆ ಭಾವೂಸಾಹೇಬರೂ ಉತ್ತರ ಕೊಡುತ್ತಿದ್ದರು. "ನಮ್ಮ ಶಕೂ ಅತ್ತೆಯ ಮನೆಗೆ ಹೋದ ಮೇಲೆ ಮುಂಬಯಿಯಲ್ಲಿಯೇ ಕಾಲೇಜಕ್ಕೆ ಹೋಗುವವಳಿದ್ದಾಳೆ" ಎಂದು. "ಶಕುಂತಲೆಯ ದೈವ ಒಳ್ಳೆಯದೇ; ಒಳ್ಳೆ ಮನೆ ದೊರೆಯಿತು" ಎಂದು ಅವರೂ ಸಮಾಧಾನದ ಪ್ರತ್ಯುತ್ತರ ಕೊಡುತ್ತಿದ್ದರು.

ಈ ಬಗೆಯ ಉತ್ತರವನ್ನು ಕೇಳಿ ಭಾವೂಸಾಹೇಬರಿಗೆ ಸಮಾಧಾನವೆನಿಸುತ್ತಿತ್ತು. ಆದರೆ ಒಂದು ಸಂಶಯದ ಸುಳಿವೂ ಜೊತೆಜೊತೆಗೆ ಭಾವೂಸಾಹೇಬರ ಮನದಲ್ಲಿ ಸಿಕ್ಕಿಕೊಂಡಿತ್ತು. ಬಾಳಾಸಾಹೇಬರೊಡನೆ ಲಗ್ನಕ್ಕೆ ಸಮ್ಮತಿಸಿದಾಗ, ಶಕುಂತಲೆ ಪ್ರೇಮದ ವಿಚಾರವನ್ನೇ ಮಾಡಿದಂತೆ ಅವರಿಗೆನಿಸುತ್ತಿರಲಿಲ್ಲ. ಬಾಳಾಸಾಹೇಬರ ಪರಿಚಯ, ಭಾವೂಸಾಹೇಬರಿಗೆ ಹೆಚ್ಚಾಗಿಲ್ಲದ್ದರಿಂದ ಅವರ ಬಗ್ಗೆ ಯಾವದೇ ಅಭಿಪ್ರಾಯವನ್ನು ಸ್ಪಷ್ಟವಾಗಿ ಕೊಡುವದು ಅವರಿಗೆ ಸಾಧ್ಯವಿರಲಿಲ್ಲ. ಬಾಳಾಸಾಹೇಬರ ಪರಿಚಯ ಶಕುಂತಲೆಗೇ ಹೆಚ್ಚಾಗಿತ್ತು; ಅವರು ಅವಳನ್ನು ಮೆಚ್ಚಿದಂತೆ ಅವಳೂ ಅವರನ್ನು ಮೆಚ್ಚಿರಬಹುದು. ಇದರಲ್ಲೇನು ಆಶ್ಚರ್ಯ? ಆದರೆ ಅವಳಿಗೆ ಬಾಳಾಸಾಹೇಬರ ಮೇಲೆ ಪ್ರೇಮವಿದ್ದುದೇ ಆಗಿದ್ದರೆ ಬಡೋದೆಯಿಂದ ಹಿಂದಿರುಗಿದ ಮೇಲೆ ಏಳೆಂಟು ತಿಂಗಳುಗಳಲ್ಲಿ ಅದರ ಸುಳಿವು ಭಾವೂಸಾಹೇಬರಿಗೆ ಸ್ವಲ್ಪವಾದರೂ ಶಕುಂತಲೆಯಿಂದ ಹತ್ತಬಹುದಾಗಿತ್ತು; ಇಷ್ಟೇಕೆ, ಅವರಿಬ್ಬರ ಪತ್ರವ್ಯವಹಾರವೂ ಕೂಡ ಯಾವ ತೊಂದರೆಯೂ ಇಲ್ಲದೆ ನಡೆಯಬಹುದಾಗಿತ್ತು. ಆದರೆ ಅದೇನೂ ನಡೆದಿರಲಿಲ್ಲ; ಅದರಿಂದಲೇ ಭಾವೂಸಾಹೇಬರಿಗೆ ಒಂದೊಂದು ಸಲ ಸಂಶಯ ಬರುತ್ತಿತ್ತು. 'ಶಕುಂತಲೆ ಬಾಳಾಸಾಹೇಬರನ್ನು ಪ್ರೇಮದಿಂದ ಮೆಚ್ಚಿದ್ದಾಳೆಯೇ?' ಎಂದು. ........ಲಗ್ನ ಸಮಾರಂಭದಲ್ಲಿ ಶಕುಂತಲೆ ಗೆಲುವಾಗಿಯೇ ಇದ್ದಳು. ಅವಳ ಮುಖದ ಮೇಲೆ ಆನಂದ ಸೂಸುತ್ತಿತ್ತು. ಇದನ್ನು ನೋಡುತ್ತಿದ್ದ ಭಾವೂಸಾಹೇಬರಿಗೆನಿಸಿತು "ಸುಮ್ಮನೆ ನನ್ನ ಮನಸ್ಸಿನಲ್ಲಿ ಇಲ್ಲದ ಸಲ್ಲದ ಸಂಶಯಗಳು ಬರುತ್ತಿವೆ" ಎಂದು.

ಮದುವೆಯ ಸಮಾರಂಭ ಮುಗಿಯಿತು. ಶಕುಂತಲೆ ಬಾಳಾಸಾಹೇಬಡನೆ ಮುಂಬಯಿಗೆ ಹೊರಟಳು. ಭಾವೂಸಾಹೇಬರು ಅವಳನ್ನು ಅತ್ಯಾ

ನಂದದಿಂದ ಬೀಳ್ಕೊಟ್ಟರು.

ಚಿಕ್ಕ ಶಕುಂತಲೆ ಮೊದಲ ಸಲ ಕೊಲ್ಹಾಪುರಕ್ಕೆ ಬಂದಾಗ ಒಳ್ಳೇ ಜೋರಾಗಿ ಮಳೆ ಸುರಿಯುತ್ತಿತ್ತಲ್ಲs ಹಾಗೇ ಇಂದೂ ಕೂಡ ಸುರಿಯುತ್ತಿತ್ತು. ಮುಂಬಯಿಯಲ್ಲಿ ದಾದರದಲ್ಲಿಯ ಪಾರಸೀ ಕಾಲನಿಯ ಒಂದು ಚಿಕ್ಕ ಮನೆಯಲ್ಲಿ ಅವಳು ತನ್ನ ಹೊಸ ಸಂಸಾರವನ್ನು ಹೂಡ ಬಂದರೂ ಅದೇ ಮಳೆಯೇ !

ಅಂದು ಬಾಳಾಸಾಹೇಬರು ರೇಡಿಯೋ ಸ್ಟೇಶನ್ನದಲ್ಲಿಯ ತಮ್ಮ ಕೆಲಸಕ್ಕೆ ಹೋಗಿಬಿಟ್ಟರು. ಉಳಿದ ವೇಳೆಯನ್ನೆಲ್ಲ ಒಬ್ಬಳೇ ಕುಳಿತು ಕಳೆಯಬೇಕಾಯಿತು; ಕೆಲಸದವಳ ಸಹಾಯದಿಂದ ಮನೆಯ ಸಾಮಾನುಗಳನ್ನೆಲ್ಲ ಹೊಂದಿಸಿಟ್ಟಳು; ಪೇಟಿಯಿಂದ ತರಬೇಕಾದ ಸಾಮಾನುಗಳನ್ನು ತಂದಳು. ಆದರೆ ಇನ್ನೂ ಹೊತ್ತು ಬೇಕಾದಷ್ಟಿತ್ತು. ಬೇಸರದಿಂದ ಒಬ್ಬಳೇ ತನ್ನ ಕೋಣೆಯಲ್ಲಿ ಹೋಗಿ ಕುಳಿತಳು. ಮಳೆ ಒಂದೇ ಸವನೆ ಸುರಿಯುತ್ತಿತ್ತು. ಆಕಾಶವೆಲ್ಲ ಮೋಡದಿಂದ ಕವಿದಿತ್ತು. ಕತ್ತಲೆಯಾದ್ದರಿಂದ ಎಲ್ಲ ಮನೆಗಳಲ್ಲೂ ದೀಪಗಳು ಕಾಣತೊಡಗಿದವು. ರಹದಾರಿಯ ಮೇಲಿನ ಸಪ್ಪಳವನ್ನು ಕೇಳಿ ಕೇಳಿ ಯಾವುದೋ ಒಂದು ಸ್ನೇಹಶೂನ್ಯವಾದ ಸ್ಥಳಕ್ಕೆ ಬಂದುಬಿಟ್ಟಿದ್ದೇನೆಂಬ ಅವಳ ಭಾವನೆ ಇನ್ನಷ್ಟು ದೃಢವಾಗತೊಡಗಿತು. ಕೊಲ್ಹಾಪುರದಲ್ಲಿಯ ಇಂಗ್ಲೀಷ ಶಾಲೆಯಲ್ಲಿಯ ಮೊದಲ ದಿನದ ನೆನಪಾಯಿತವಳಿಗೆ! ಪ್ರೇಮದ ವಸ್ತುಗಳನ್ನೂ ವ್ಯಕ್ತಿಗಳನ್ನೂ ತ್ಯಜಿಸಿ, ಹೊಸ ಪರಿಸ್ಥಿತಿಯ ಪರಿಚಯ ಮಾಡಿಕೊಳ್ಳುವದು ಅಂದು ಕಠಿಣವೆನಿಸಿದಂತೆ, ಇಂದೂ ಅವಳಿಗೆ ಕಠಿಣವೆನಿಸಿತು. ದಿನ ಕಳೆದರೂ ಮನುಷ್ಯನ ಕೆಲವು ಗುಣಗಳು ವ್ಯತ್ಯಾಸ ಹೊಂದದೆ ಹಾಗೇ ಇರುವವಲ್ಲ ಎಂದು ಅವಳಿಗೆ ಆಶ್ಚರ್ಯವೆನಿಸಿತು. ತಂದೆ, ತಾಯಿ, ತಂಗಿ, ತಮ್ಮ, ಕೊಲ್ಹಾಪುರದ ಮನೆ, ಈಗೈದು ವರ್ಷಗಳ ಹಿಂದೆ ಒಮ್ಮೆಲೆ ಕಣ್ಮರೆಯಾದ ಅವಳ ನಾಯಿ ' ವಿಜೂ '— ಎಲ್ಲವೂ ಅವಳ ಸ್ಮೃತಿಪಟಲದಲ್ಲಿ ಮೂಡಿದವು. ಉತ್ತಮ ಫರ್ನಿಚರ, ಬಣ್ಣಬಣ್ಣದ ಏಳುಬೀಳುವ ತೆರೆಗಳು, ಗೋಡೆಗೆ ಇಳಿಬಿಟ್ಟ ಸುಂದರವಾದ ಫೋಟೋಗಳು —ಇವುಗಳಿಂದಲಂಕೃತವಾದ ಮುಂಬಯಿಯ ಬೆಡಗಿನ ಕೋಣೆ ಅವಳಲ್ಲಿ ಆತ್ಮೀಯತೆಯನ್ನುಂಟು ಮಾಡಲು ಸಮರ್ಥವಾಗಲಿಲ್ಲ. ಇಲ್ಲಿ ನಾನು ಸುಖಿ

ಯಾಗಿರಬಹುದೇ ಎಂಬ ಭಾವನೆ ಅವಳಲ್ಲಿ ತಲೆಯೆತ್ತಿತ್ತು. ಬಾಳಾಸಾಹೇಬ ರನ್ನು ಮದುವೆಯಾಗಿಬಿಟ್ಟಿದ್ದು ಸರಿಯೇ, ತಪ್ಪೇ ? ಅವಳು ತನ್ನ ಮನ ಸ್ಸನ್ನೇ ಪ್ರಶ್ನಿಸಿಕೊಂಡಳು. ದೂಷಿತ ಹವೆಯಲ್ಲಿ ರೋಗದ ಜಂತುಗಳು ಕೂಡಲೇ ಪ್ರಸಾರ ಹೊಂದುವಂತೆ, ಹೊಸ ಸ್ಥಳದ ಮೂಲಕ ಮೊದಲೇ ಅಸ್ವಸ್ಥವಾದ ಅವಳ ಮನದಲ್ಲಿ, ಆಶೆಗೆ ಬದಲು ಹೆದರಿಕೆಯೇ ಅಂಕುರಿಸ ತೊಡಗಿತು. ಬಾಳಾಸಾಹೇಬರಿಗೆ ಸಿವಾಹಕೆ ಒಪ್ಪಿಗೆಯನ್ನು ಕೊಡು ವಾಗ ಅವಳು ತನ್ನಷ್ಟಕ್ಕೇ ಯೋಚಿಸಿದ್ದಳು—ಪರದೇಶಕ್ಕೆ ಹೋಗಿ ವಿದ್ಯೆ ಕಲಿತು ಹೆಸರು ಗಳಿಸಿ, ದೊಡ್ಡವಳೆನಿಸಿಕೊಂಡು ಮಾಡಬೇಕಾದುದಾದರೂ ಏನು ?—ಎಂದು. ಪದ್ಮಾಕರನು ಒಪ್ಪಿದ್ದರೆ ಆ ಮಾತೇ ಬೇರೆಯಾಗಿತ್ತು. ಪದ್ಮಾಕರನ ಪ್ರೇಮವನ್ನು ಬಿಟ್ಟೇ ಜೀವನ ಸಾಗಿಸಬೇಕಾದುದೆಂದ ಮೇಲೆ ಮಹತ್ವಾಕಾಂಕ್ಷೆ, ಹೇವ, ಕಾರ್ಯಕ್ಷಮತೆ ಇವುಗಳಿಗೆ ಅವಕಾಶವೆಲ್ಲಿದೆ ಅಲ್ಲಿ? ಇದೇ ವಿಚಾರದಿಂದಲೇ ಅವಳು ಬಾಳಾಸಾಹೇಬನನ್ನು ಮದುವೆಯಾದದ್ದು. ಆದರೆ ವಿಚಿತ್ರ ! ಹೊಸ ಸಂಸಾರದ ಮೊದಲ ದಿನವೇ ಅವಳಿಗೆ ಬೇಸರ ! ಬಹುಮೂಲ್ಯವಾದ ಹೇವ, ಮಹತ್ವಾಕಾಂಕ್ಷೆಗಳನ್ನು ಬಿಟ್ಟು, ತಪ್ಪುಮಾಡಿ ದೆನೆಂದು ಅವಳಿಗೆನಿಸತೊಡಗಿತು. ಜೀವನದಲ್ಲಿ ಸಾರಭೂತವಾದುದನ್ನು ಬಿಟ್ಟುಕೊಟ್ಟು, ವಿಶೇಷ ಪರಿಚಯವಿಲ್ಲದ ಒಬ್ಬ ಗೃಹಸ್ಥನ ಪತ್ನಿಯಾಗಿಬಿಟ್ಟೆ ನಲ್ಲ, ಎಂದು ಅವಳ ಮನಸ್ಸು ಒಳಗೊಳಗೇ ನಡುಗಿತು.

ದುಃಖ ಒತ್ತರಿಸಿ ಕಣ್ಣೀರಿನ ಕೋಡಿ ಹರಿಯುವಂತಾಯಿತು.

ಶಕುಂತಲೆ ಕುರ್ಚಿಯಿಂದೆದ್ದವಳೇ, ವಿದ್ಯುದ್ದೀಪದ ಗುಂಡಿಯನ್ನೊತ್ತಿ ಕೋಣೆಯಲ್ಲಿಯ ಅಂಧಕಾರವನ್ನು ಹೊಡೆದಟ್ಟಿದಳು. ಮನಸ್ಸು ಕೊಂಚ ಶಾಂತವಾಗಲೆಂದು ರೇಡಿಯೋ ಹಚ್ಚಿದಳು. ಗಡುಸಾದ ಧ್ವನಿಯಲ್ಲಿ ಸ್ವರ ಹೊರಹೊರಟು ಕೋಣೆಯನ್ನೆಲ್ಲ ತುಂಬಿಬಿಟ್ಟಿತು.

" ಮುಂದಿನ ಕಾರ್ಯಕ್ರಮ ಎರಡು ಮೂರು ನಿಮಿಷಗಳಲ್ಲಿಯೇ ಪ್ರಾರಂಭವಾಗುವದು. ಅಲ್ಲಿಯ ವರೆಗೆ ಈ ಮರಾಠೀ ರೆಕಾರ್ಡನ್ನು ಕೇಳ ಬೇಕು ಇದರ ನಂಬರು........ "

ಶಕುಂತಲೆ ಆ ನಂಬರನ್ನು ಕೇಳಲು ಕಿವಿಗೊಡಲಿಲ್ಲ. ರೆಕಾರ್ಡ ಸುರು ವಾದ ಮೇಲೆಯೂ ಆ ಹಾಡಿನ ಕಡೆಗೆ ಅವಳ ಲಕ್ಷ್ಯವಿದ್ದಿರಲಿಲ್ಲ; ಕೋಣೆ

ಯಲ್ಲಿಯ ವಸ್ತುಗಳನ್ನೆಲ್ಲ ಹೊಂದಿಸಿ ಇಡುವದರಲ್ಲಿ ಅವಳು ತೊಡಗಿದ್ದಳು. ಕೆಲ ಕ್ಷಣಗಳ ಬಳಿಕ ಅವಳ ಲಕ್ಷ್ಯ ಒಮ್ಮೆಲೆ ಆ ಹಾಡಿನ ಕಡೆಗೆ ಹರಿಯಿತು. ಅವಳು ನಿಂತಲ್ಲಿಯೇ ನಿಂತುಬಿಟ್ಟಳು.

ಮೊದಲನೆಯ ದಿನ ಅಪರಿಚಿತವೆಂದೂ ತನ್ನದಲ್ಲವೆಂದೂ ಎನಿಸಿದ ಮನೆ ಒಂದೆರಡು ತಿಂಗಳುಗಳು ಕಳೆದ ಮೇಲೆ ಶಕುಂತಲೆಗೆ ಕ್ರಮಕ್ರಮವಾಗಿ ತನ್ನದೆಂದೆನಿಸತೊಡಗಿತು. ಮನಸ್ಸಿಗೂ ಹಗುರೆನಿಸಿತು. ಮನೆಯಲ್ಲೆಲ್ಲ ಅಡ್ಡಾಡಿ ಸಾಮಾನುಗಳನ್ನ ಆಯಾ ಸ್ಥಳಗಳಲ್ಲಿ ಸರಿಯಾಗಿಟ್ಟು, ನೋಡಿ, ಹೊತ್ತುಹೊತ್ತಿಗೆ ಕೆಲಸಗಳನ್ನೆಲ್ಲ ವ್ಯವಸ್ಥಿತವಾಗಿ ಮಾಡಲು ತೊಡಗಿದರೆ, 'ಮನೆ ಹೊಸದು' ಎಂಬ ಭಾವನೆ ಕ್ರಮೇಣ ಅಳಿಸಿಹೋಗುತ್ತದೆ; ಮನೆ ತನ್ನದೇ ಎಂದೆನಿಸಿಬಿಡುತ್ತದೆ. ಮನುಷ್ಯನ ಸುಖದುಃಖಗಳು ಅವನ ಸಹ ವಾಸವನ್ನೇ ಬಹುಮಟ್ಟಿಗೆ ಅವಲಂಬಿಸಿವೆ. ಒಂದೆರಡು ತಿಂಗಳು 'ಮನೆಯ ಒಡತಿ' ಎಂದು ಶಕುಂತಲೆ ಆ ಮನೆಯಲ್ಲಡ್ಡಾಡಿದಳು. ಮನದ ಹೊರೆ ಸ್ವಲ್ಪಸ್ವಲ್ಪವಾಗಿ ಇಳಿಯತೊಡಗಿತು. ಬಾಳಾಸಾಹೇಬರಾದರೂ ಉತ್ಸಾಹ ಭರಿತರಾಗಿದ್ದರು; ವೆಚ್ಚಮಾಡಲು ಅವರೆಂದೂ ಹಿಂದುಮುಂದೆ ನೋಡುತ್ತಿರ ಲಿಲ್ಲ; ಯಾವ ವಸ್ತುವನ್ನು ಕೊಳ್ಳುವದಾದರೂ ಶಕುಂತಲೆಯ ಅಭಿರುಚಿ ಯಿಲ್ಲದೆ ಅವರು ಕೊಳ್ಳುತ್ತಿರಲಿಲ್ಲ; ಎಷ್ಟೋ ಸಲ ಅವರು, ಕೆಲವೊಂದು ವಿಷಯಗಳನ್ನು ಅವಳ ಅಭಿರುಚಿಗೇ ಬಿಟ್ಟುಬಿಡುತ್ತಿದ್ದರು. ಶಕುಂತಲೆಯ ಜೊತೆಯಲ್ಲಿ ಹೆಚ್ಚಾಗಿ ತಿರುಗಾಡಲು ಅವರ ಉದ್ಯೋಗ ಅವಕಾಶವನ್ನು ಕೊಡುತ್ತಿರಲಿಲ್ಲವೇನೋ ನಿಜ; ಆದರೆ ದೊರೆತ ವೇಳೆಯನ್ನು, ರವಿವಾರದ ರಜೆಯನ್ನು ಅವರು ಅವಳ ಜೊತೆಯಲ್ಲಿಯೇ ಕಳೆಯುತ್ತಿದ್ದರು. ಕೊಳ್ಳ ತಕ್ಕ ಕೆಲವು ಸಾಮಾನುಗಳನ್ನು ಇಬ್ಬರೂ ಕೂಡಿಯೇ ಆರಿಸುವದೆಂದು, ಶಕುಂ ತಲೆ ರವಿವಾರಕ್ಕೇ ಮೀಸಲಾಗಿರಿಸಿರುತ್ತಿದ್ದಳು. ರವಿವಾರ ಮುಂಜಾನೆಯ ಸಮಯವೆಲ್ಲ ಇದರಲ್ಲಿಯೇ ಹೋಗುತ್ತಿತ್ತು. ಮಧ್ಯಾಹ್ನ (ರಜೆಯಿದ್ದುದ ರಿಂದ) ಇಬ್ಬರೂ ಸಾವಕಾಶವಾಗಿ ಊಟ ಮಾಡುತ್ತಿದ್ದರು. ಬಳಿಕ ಸಂಜೆಗೆ ಮುಂಬಯಿಯಲ್ಲಿ ಯಾವದಾದರೊಂದು ಒಳ್ಳೆಯ ಚಿತ್ರಪಟವನ್ನು ನೋಡಲು ಹೋಗುತ್ತಿದ್ದರು. ಅವರ ಪ್ರತಿ ರವಿವಾರದ ಕಾರ್ಯಕ್ರಮವೇ ಇದಾಗಿತ್ತು. ಒಟ್ಟಿನಲ್ಲಿ ಹೇಳುವದಾದರೆ, ಉಚ್ಚ ಮಧ್ಯಮ ವರ್ಗದಲ್ಲಿಯ ಸುಶಿಕ್ಷಿತ

ಜನರು ಸಂಸಾರ ಸಾಗಿಸುತ್ತಿದ್ದಂತೆ ಶಕುಂತಲೆ ಸಾಗಿಸುತ್ತಿದ್ದಳು. ದುಃಖ ದಾಯಕವೆಂದೆನಿಸುವ ಯಾವದೇ ವಿಷಯ ಅವಳ ಮನೆಯೊಳಗೂ ಇರಲಿಲ್ಲ, ಹೊರಗೂ ಇರಲಿಲ್ಲ.

ತೀರ ಸಮೀಪದ ಮಿತ್ರರು ಬಾಳಾಸಾಹೇಬರಿಗೆ ಯಾರೂ ಇದ್ದಿರಲಿಲ್ಲ. ಶಕುಂತಲೆ ಇದನ್ನು ಕೆಲ ದಿನಗಳಲ್ಲಿಯೇ ಕಂಡುಹಿಡಿದಳು. ಹಾಗೆ ಚಹ ಕುಡಿದು ಹರಟೆ ಹೊಡೆಯಲು ನೆರೆಹೊರೆಯ ಪರಿಚಯದ ಜನ ಬಂದು ಕುಳಿತುಕೊಳ್ಳುತ್ತಿದ್ದರು. ಚಹ ಕುಡಿಯುವದೇ ಅವರ ಮುಖ್ಯ ಉದ್ದೇಶ ವಾದ್ದರಿಂದ ಶಕುಂತಲೆಗೆ ಅವರ ಬಗ್ಗೆ ಅಷ್ಟೊಂದು ಆದರವಿದ್ದಿರಲಿಲ್ಲ. ಚಹ ಕೊಡುವದು ಒಂದುವೇಳೆ ತಡವಾದರೆ ಆ ಜನ ಸ್ಥಳಬಿಟ್ಟು ಕದಲುತ್ತಿರ ಲಿಲ್ಲ; ಬೇಗ ಕೊಟ್ಟುಬಿಟ್ಟರೆ ಅವರು ಹೆಚ್ಚು ಹೊತ್ತು ಕೂಡುತ್ತಿರಲಿಲ್ಲ. ಇದನ್ನೆಲ್ಲ ಕಂಡುಹಿಡಿದಿದ್ದ ಶಕುಂತಲೆ ಅವರಲ್ಲಾರಾದರೂ ಬಂದರೆ, ಅವರೊ ಡನೆ ಮಾತಾಡುತ್ತ ಕುಳಿತಿರದೆ, " ಚಹಾ ತರುತ್ತೇನೆ ಹಾಂ " ಎಂದು ಬಾಳಾಸಾಹೇಬರಿಗೆ ಹೇಳಿ, ಒಳಗೆ ಹೋಗಿಬಿಡುತ್ತಿದ್ದಳು.

ಬಾಳಾಸಾಹೇಬರ ಈ ಮಿತ್ರರು ಬಂದಾಗ ಮೂರು ನಾಲ್ಕು ಸಲವೂ ಶಕುಂತಲೆಯು ಹೀಗೆಯೇ ಮಾಡಿದಳು. ಅವರೆಲ್ಲ ಹೋದ ಮೇಲೆ ಒಂದು ಸಲ ಬಾಳಾಸಾಹೇಬರು ಅವಳನ್ನು ಕೇಳಿಯೇ ಬಿಟ್ಟರು " ನನ್ನ ಮಿತ್ರರು ಬಂದಾಗ, ಏನೋ ಅವರೊಡನೆ ನಾಲ್ಕು ಮಾತುಗಳನ್ನಾಡುತ್ತ ಕುಳಿತು ಕೊಳ್ಳುವ ಬದಲು, ಎದ್ದು ಒಳಗೆ ಏಕೆ ಹೋಗುತ್ತೀ ? "

ಶಕುಂತಲೆ ಸುಮ್ಮನೆ ಇದ್ದಳು. ಬಾಳಾಸಾಹೇಬರು ಮತ್ತೆ ಅದೇ ಪ್ರಶ್ನೆಯನ್ನು ಕೇಳಿ, ' ಹೇಳಲ್ಲ ' ಎಂದು ಅವಳನ್ನು ಒತ್ತಾಯಪಡಿಸತೊಡ ಗಿದರು.

ಶಕುಂತಲೆಯೆಂದಳು " ಹೇಳಲೇ ಹಾಗಾದರೆ ? "

" ಹುಂ "

" ಅವರು ನಿಮ್ಮ ಮಿತ್ರರೆಂದೇ ನನಗನಿಸುವದಿಲ್ಲ. "

" ಪ್ರಾಣದ ಗೆಳೆಯರೇನೋ ಅಲ್ಲ ನಿಜ, " ಬಾಳಾಸಾಹೇಬರೆಂದರು ಆದರೇನಾಯಿತು, ಅವರು ನನ್ನ ಮಿತ್ರರೇ ! "

ಅಲ್ಲವೆಂದು ಗೋಣು ಅಲ್ಲಾಡಿಸಿ ಶಕುಂತಲೆಯೆಂದಳು " ಬರೀ ಚಹ

ಕುಡಿಯುವದಕ್ಕಾಗಿ ಅವರು ನಮ್ಮ ಕಡೆಗೆ ಬರುತ್ತಾರೆ, ಅಷ್ಟೇ. ”

“ ಬಂದರೇನಾಯಿತು ? ಚಹಕ್ಕೇನೂ ನಮ್ಮಲ್ಲಿ ಕೊರತೆಯಿಲ್ಲವಲ್ಲ !

“ ಕೊರತೆಯಿಲ್ಲ ನಿಜ, ಆದರೆ ಇವರಿಗೆ ಚಹ ಕುಡಿಸುವದು ನನಗೇನೋ ಅಪವ್ಯಯವೆನಿಸುತ್ತದೆ. ಇದಕ್ಕಿಂತ ಒಬ್ಬ ಬಡ ವಿದ್ಯಾರ್ಥಿಗೆ ಊಟದ ವಾರ ಕೊಟ್ಟರೆ, ಹಣದ ಸದುಪಯೋಗವಾದರೂ ಆದೀತು. ಚಹಕ್ಕಾದರೂ ಮಂದಿಯ ಮನೆಗೆ ಹೋಗುವದದೇನೋ ! ನನಗಂತೂ ಸೇರದು. ”

ಬಾಳಾಸಾಹೇಬರು ಸ್ವಲ್ಪ ಸಿಡುಕಿನಿಂದಲೇ ನುಡಿದರು, “ ಅಂದರೆ ” ನನ್ನ ಕಡೆಗೆ ಬರುವ ಜನರು ನಿನಗೆ ಸೇರುವದಿಲ್ಲವೆಂದಂತಾಯಿತು ! ”

ಚುಚ್ಚುವಂತಹ ಮಾತುಗಳನ್ನು ಪತಿಗೆ ಅವಳಾಡಿದ್ದು ಇದೇ ಮೊದಲನೆಯ ಸಲ; ಬಾಳಾಸಾಹೇಬರ ಸ್ವರದಲ್ಲಿಯ ವ್ಯತ್ಯಾಸವನ್ನು ಕಂಡು ಅವಳೊಮ್ಮೆಲೆ ಬೆಚ್ಚಿಬಿದ್ದಳು; ಮತ್ತೆ ಸಮಾಧಾನಕರವಾದ ರೀತಿಯಲ್ಲಿ ಹೇಳಿದಳು “ ನಿಮ್ಮ ಮನಸ್ಸಿಗೆ ನೋವಾಗುವಂತೆ ಮಾತಾಡುವ ಉದ್ದೇಶ ನನ್ನದಿಲ್ಲ; ಆದರೆ ಈ ಜನ ಮಾತ್ರ ನನಗೆ ಸೇರುವದಿಲ್ಲ. ”

“ ನಿನಗೆ ಸೇರುವದಿಲ್ಲ; ಆದರೆ ಅವರು ನಮ್ಮಲ್ಲಿ ಬರುತ್ತಾರೆಂದ ಮೇಲೆ ಉಪಚಾರಕ್ಕಾಗಿಯಾದರೂ ನೀನು ಅವರೊಡನೆ ಮಾತನಾಡಬೇಕೋ ಇಲ್ಲವೋ ? ”

“ ಹೌದು, ಮಾತನಾಡಬೇಕು; ಆದರೆ ಅವರು ಮಾತಾಡುವದೆ ನನಗೆ ಹೊಣೆಯಿಲ್ಲದ ಮಾತು ಎಂದೆನಿಸುತ್ತದೆ. ಕುಳಿತರೆ ನಿಂತರೆ ಗಾಂಧೀಜಿಯನ್ನೂ ಕಾಂಗ್ರೆಸ್ಸನ್ನೂ ಬಯ್ಯುವದೆಂದರೆ ಅದೇನು ಆಟವಾಗಿದೆಯೇ ? ”

“ ಹೌದು, ಈಗ ಗಾಂಧೀಜಿಯ ನೀತಿಯಾಗಲಿ, ಅಥವಾ ಕಾಂಗ್ರೆಸ್ಸಿನ ನೀತಿಯಾಗಲಿ ಹಾಗೇ ಇದೆ. ”

ಶಕುಂತಲೆಯಲ್ಲಿ ಗಾಂಧೀಜಿಯ ಬಗ್ಗೆ ಆದರ ಬುದ್ಧಿ ಚಿಕ್ಕಂದಿನಲ್ಲಿಯೇ ಬೆಳೆದು ಬಂದಿತ್ತು. ಪದ್ಮಾಕರನ ಸಹವಾಸದಿಂದ ಅದು ಮತ್ತಷ್ಟು ದೃಢವಾಗಿತ್ತು; ಅವಳ ಆ ಭಾವನೆ ಬಾಳಾಸಾಹೇಬರ ಮಾತನ್ನು ಕೇಳುತ್ತಲೆ ಜಾಗೃತವಾಯಿತು. ಅವಳು ಒಳ್ಳೇ ಆವೇಶಯುಕ್ತ ಸ್ವರದಲ್ಲಿ ಹೇಳಿದಳ,

" ಎಂದಿಗೂ ಇಲ್ಲ, " ಅಲ್ಲಿ ಅವಳಿಗೆ ಕೂಡುವದೇ ಸಾಧ್ಯವಾಗಲಿಲ್ಲ. ಹೊರಡಲು ಎದ್ದು ನಿಂತು ಹೇಳಿದಳು, " ನಿಮ್ಮ ಈ ಹಿಂದುತ್ವನಿಷ್ಠ ಗೆಳೆಯರಿಗೆ ಒಂದು ಮಾತನ್ನಾದರೂ ಹೇಳುವಿರಾ ? ಅವರು ನಿಮ್ಮನ್ನು ಬಾಳಾರಾವ ಎಂದು ಕರೆಯುತ್ತಾರಲ್ಲ, ಅದೇ ನನಗೆ ಸೇರುವದಿಲ್ಲ; ನೆಟ್ಟಗೆ ಬಾಳಾಸಾಹೇಬ ಎಂದು ಕರೆಯುವದು ಬಿಟ್ಟು ಹಾಗೇಕೆ ಕರೆಯುತ್ತಾರವರು ? "

ಶಕುಂತಲೆ ಸಿಡುಕಿನಿಂದಲೇ ಒಳಗೆ ಹೊರಟುಹೋದಳು.

ಮರುದಿನ ಮುಂಜಾನೆ ಬಾಳಾಸಾಹೇಬರು ಸ್ನಾನ ಮಾಡುತ್ತಿದ್ದರು. ಬಾಗಿಲಲ್ಲಿ ಗಂಟೆ ಬಾರಿಸಿತೆಂದು ಶಕುಂತಲೆ ಬಂದು ಬಾಗಿಲನ್ನು ತೆರೆದಳು. ಚಹ ಕುಡಿಯಲು ಬಂದಿದ್ದ ಬಾಳಾಸಾಹೇಬರ ಆ ಮಿತ್ರರೇ ಹೊರಗೆ ನಿಂತಿದ್ದರು. " ಬಾಳಾರಾವ ಇದ್ದಾರೆಯೇ ? " ಅವರು ಶಕುಂತಲೆಯನ್ನು ಕೇಳಿದರು.

" ಬಾಳಾರಾವ ? ಆ ಹೆಸರಿನವರು ಇಲ್ಲಿ ಯಾರೂ ಇಲ್ಲ ಬಿಡಿರಿ. " ಎಂದು ಹೇಳಿದವಳೇ ಬಾಗಿಲನ್ನು ಮುಚ್ಚಿಬಿಟ್ಟಳು.

ಅದೇ ದಿನವೇ ಬಾಳಾಸಾಹೇಬ ಶಕುಂತಲೆಯರಲ್ಲಿ ಮೊದಲ ಸಲ ಸಂಘರ್ಷದ ಕಿಡಿ ಎದ್ದಿತು. ಬಾಳಾಸಾಹೇಬರು ಕಿರುಚಿದರು, " ನಿನ್ನ ಮೂರ್ಖತನಕ್ಕಾಗಿ ನಾನು ನನ್ನ ಗೆಳೆಯರನ್ನು ನೋಯಿಸಲಾರೆ. "

" ಒಳ್ಳೇದು, ನನ್ನನ್ನು ನೋಯಿಸಬಹುದು ಹಾಗಾದರೆ, " ಶಕುಂತಲೆಯೆಂದಳು.

ಬಾಳಾಸಾಹೇಬರು ವಿವಾಹಕ್ಕಾಗಿ ತನ್ನ ತಂದೆಗೆ ಬರೆದ ಪತ್ರದಲ್ಲಿಯ ವಾಕ್ಯ ಇಂದು ಅವಳಿಗೆ ಮೇಲಿಂದ ಮೇಲೆ ನೆನಪಾಯಿತು.

" ನಾನು ಸ್ವಲ್ಪ ಹಟವಾದಿಯಾಗಿದ್ದರೂ............"

ಅಂದು ಆ ವಾಕ್ಯದ ಮಹತ್ವ ಅವಳಿಗೆ ಕಂಡುಬಂದಿರಲಿಲ್ಲ; ಇಂದು ಅದು ಸಂಪೂರ್ಣವಾಗಿ ತಿಳಿಯಿತು. ಶಕುಂತಲೆ ಮತ್ತೆ ಮತ್ತೆ ಮನದಲ್ಲಿ ಯೋಚಿಸತೊಡಗಿದಳು. " ಇದೇ ರೀತಿ ನನಗೆ ಇವರ ಹಟದ ಸ್ವಭಾವದೊಡನೆ ದಿನಂಪ್ರತಿ ಸಂಘರ್ಷವನ್ನೆದುರಿಸುವ ಪ್ರಸಂಗ ಬಂದರೆ, ಗತಿ ಏನು ? "

ರೂಢಿಯಾದಂತೆ ದುಃಖ ಹಗುರಾಗುತ್ತ ಹೋಗುತ್ತದೆ, ನಿಜ. ಆದರೆ

ಯಾವದೊಂದು ದುಃಖದ ಸಂಗತಿ ಮನುಷ್ಯನಿಗೆ ಕಂಡುಬಂದರೆ ಅಂತಹದೇ ಸಂಗತಿ ಅದರ ಅಕ್ಕಪಕ್ಕದಲ್ಲಿ ಎಲ್ಲಿಯಾದರೂ ಇದೆಯೋ ಹೇಗೆ ಎಂದು ಮನುಷ್ಯನ ಮನಸ್ಸು ಅದನ್ನು ಶೋಧಿಸಿ, ತನ್ನ ದುಃಖವನ್ನು ಮತ್ತೆ ಹೆಚ್ಚಿಸಿ ಕೊಳ್ಳುವದರಲ್ಲಿಯೂ ತೊಡಗಿರುತ್ತದೆ. ಇವೆರಡೂ ಮಾತು ಅಷ್ಟೇ ಸತ್ಯ.

ಬಾಳಾಸಾಹೇಬರು ಹಟವನ್ನು ಸಾಧಿಸುವದು ಶಕುಂತಲೆಯ ಅನುಭವಕ್ಕೆ ಬಂದಂದಿನಿಂದ ಇನ್ನೂ ಯಾವುದರಲ್ಲಿ ಅವರು ಹಟ ಸಾಧಿಸುತ್ತಾರೆ ಎನ್ನುವದರ ಕಡೆಗೇ ಅವಳ ಲಕ್ಷ್ಯ ವಿಶೇಷವಾಗಿರುತ್ತಿತ್ತು. ಎಲ್ಲದರಲ್ಲಿಯೂ ಹೆಚ್ಚು ಕಡಿಮೆ ಪ್ರಮಾಣದಿಂದ ಬಾಳಾಸಾಹೇಬರ ಹಟಮಾರಿತನ ಕಂಡು ಬರುತ್ತಲೇ ಇತ್ತು. ಕೆಲವೊಂದು ಸಲ ಮಹತ್ವದ ವಿಷಯಗಳಲ್ಲಿ ಅವರು ಹಟ ಸಾಧಿಸಿದರೆ, ಮತ್ತೆ ಕೆಲ ಸಲ ತೀರ ಕ್ಷುದ್ರ ವಿಷಯಗಳಲ್ಲಿಯೂ ಅವರು ಹಟ ಸಾಧಿಸುತ್ತಿದ್ದರು. ಬಸ್ ಸ್ಟ್ಯಾಂಡಿನಲ್ಲಿ ನೀಲಿ ಮೋಟರಿನಲ್ಲಿ ಕೂಡುವದೋ ಕೆಂಪು ಮೋಟರಿನಲ್ಲಿ ಕೂಡುವದೋ, ಎಡಕ್ಕೋ, ಬಲಕ್ಕೋ, ಇರಾಣೀ ಹೋಟಲ್ಲಿಗೆ ಹೋದರೆ, ಇಬ್ಬರೂ ಆಯಿಸ್‌ಕ್ರೀಮನ್ನೇ ತೆಗೆದು ಕೊಳ್ಳುವದೋ ಅಥವಾ ಕೋಲ್ಡ್ರಿಂಕನ್ನೋ—ಇತ್ಯಾದಿ ವಿಷಯಗಳಲ್ಲಿ ಕೂಡ ಬಾಳಾಸಾಹೇಬರು ತಮ್ಮ ಹಟವನ್ನೇ ಸಾಧಿಸುತ್ತಿದ್ದರು. ಹಾಗಾದರೆ ಅವರು ಶಕುಂತಲೆಯ ಮನಸ್ಸಿನಂತೆ ಏನೂ ಮಾಡುತ್ತಿರಲಿಲ್ಲವೇ ? ಹಾಗೆ ಮಾಡಿದುದು ಶಕುಂತಲೆಯ ಲಕ್ಷ್ಯದಲ್ಲಿರುತ್ತಿರಲಿಲ್ಲ; ಅವರು ಹಟ ಸಾಧಿಸಿದುದು ಮಾತ್ರ ಶಕುಂತಲೆಯ ಮನಸ್ಸಿನಲ್ಲಿ ಸುತ್ತುತ್ತಿತ್ತು.

ಬಾಳಾಸಾಹೇಬರು ಎಲ್ಲ ವಿಷಯಗಳಲ್ಲಿಯೂ ತಮ್ಮ ಹಟವನ್ನೇ ಸಾಧಿಸುತ್ತಾರೆಂಬುದು ಅವಳಿಗೆ ಪೂರ್ಣವಾಗಿ ತಿಳಿದುಹೋಯಿತು. ಇಷ್ಟೇ ಅಲ್ಲ. ಅಕ್ಕಪಕ್ಕದಲ್ಲಿ ತನ್ನ ಓರಿಗೆಯ ಭಗಿನಿಯರು ನಡೆಯಿಸಿದ ಸಂಸಾರಗಳನ್ನು ನೋಡಿ ಅವಳು ಕೆಲವೊಂದು ಸಾಮಾನ್ಯ ಸಿದ್ಧಾಂತಗಳಿಗೂ ತಲುಪಿಬಿಡುತ್ತಿದ್ದಳು. ಮದುವೆಗೆ ಮುನ್ನ ವರನು ಅಧುನಿಕ ಮತದವನೆಂದೂ ತೋರಬಹುದು; ಉದಾರವೃತ್ತಿಯವನೂ ಇರಬಹುದು; ಮದುವೆಯಾದ ಮೇಲೆ ಪತ್ನಿಯ ಆಶೆ ಆಕಾಂಕ್ಷೆಗಳನ್ನು ಪೂರೈಸಿ ಅವಳನ್ನು ಜತನದಿಂದ ಸಂರಕ್ಷಿಸಲೂ ಬಹುದು. ಆದರೂ ಪತ್ನಿ ಎಂಬುವವಳು ನನ್ನ ಮೇಲೆ ಅವಲಂಬಿಸಿದವಳು; ನನ್ನ ಅಧಿಕಾರಬೆದುರು ಅವಳು ತಲೆ ತಗ್ಗಿಸಲೇಬೇಕು ಎಂಬ

ಭಾವನೆ ಅವನ ಅಂತಃಕರಣದಲ್ಲಿ ಆಳವಾಗಿ ಹುಗಿದುಬಿಟ್ಟಿರುತ್ತದೆ. ಪ್ರೇಮ ದಿಂದ ಅಥವಾ ಪಾಶ್ಚಾತ್ಯ ಔಪಚಾರಿಕತೆಯಿಂದ ಅದರ ಮೇಲೆ ಆವರಣ ವುಂಟಾಗಿರಬಹುದು. ಆದರೆ ಅದರ ಅಭಾವ ಮಾತ್ರ ಆಗಿರುವದಿಲ್ಲ. ಸ್ತ್ರೀ ಎಷ್ಟೇ ಸ್ವತಂತ್ರ ವಿಚಾರದವಳಿದ್ದರೂ ಕೂಡ ಪುರುಷನ ಈ ಭಾವನೆಗನು ಸಾರವಾಗಿ ಅವಳು ಹೊಂದಿಕೊಂಡು ಹೋಗಲೇ ಬೇಕಾಗುತ್ತದೆ. ಮನೆ ಮನೆಯಲ್ಲಿ ಇಣಿಕಿ ನೋಡಿದರೂ ಇದೇ ದೃಶ್ಯ. ವಿವಾಹಿತ ಜೀವನ ಹೀಗಿದ್ದಿರಬೇಕೆಂಬ ಕಲ್ಪನೆ ಶಕುಂತಲೆಗಿದ್ದಿರಲಿಲ್ಲ. ಅದರಲ್ಲಿಯೂ ಬಾಳಾ ಸಾಹೇಬರ ಹಟದ ಕಲ್ಪನೆಯನ್ನು ಅವಳು ಕನಸಿನಲ್ಲಿಯೂ ಮಾಡಿರಲಿಲ್ಲ ಮದುವೆಗೆ ಮುನ್ನ ಅವರ ರಾಜಕೀಯ ಮತ ಶಕುಂತಲೆಗೆ ತಿಳಿದಿದ್ದಿಲ್ಲ. ಒಂದು ವೇಳೆ ತಿಳಿದರೂ, ತಮ್ಮ ಪ್ರಾಪಂಚಿಕ ಸುಖದ ಮೇಲೆ ಅದರ ಪರಿಣಾಮ ವೇನಾದೀತು ? ಎಂಬ ಕಲ್ಪನೆಯವಳಿಗೆ. ಬಾಳಾಸಾಹೇಬರು ಹಿಂದೂ ಮಹಾಸಭೆಯ ಮತದವರೆಂದು ತಿಳಿದ ಮೇಲೆ ಕೂಡ ಅವಳಿಗೆ ದುಃಖವಾಗಿ ರಲಿಲ್ಲ. ಇರಲಿ, ಅವರ ಮತ ಅವರಿಗೆ, ನನ್ನ ಮತ ನನಗೆ; ಈ ಮತ ಭೇದದಿಂದ ನನಗಾಗಲಿ, ಅವರಿಗಾಗಲಿ ತೊಂದರೆಯಾಗುವ ಕಾರಣವಿಲ್ಲ ಎಂದು ಅವಳ ಭಾವನೆ.

ಅವಳ ಮನೋಭಾವನೆ ಇದೇ ರೀತಿಯಾಗಿ ಎಷ್ಟೋ ದಿನ ಸಾಗಿತು. ಇದರಿಂದ ಮನೆಯಲ್ಲಿ ಮನಸ್ತಾಪವಾಗುವ ಪ್ರಸಂಗಗಳೂ ಹೆಚ್ಚಾಗಿ ಬರು ತ್ತಿರಲಿಲ್ಲ. ಮದುವೆಯಾದ ಬಳಿಕ ಅವಳು ಕಳೆದ ಸುಖದ ದಿನಗಳು ಕೇವಲ ಬೆರಳ ಮೇಲೆಣಿಸುವಷ್ಟು; ಆ ಬಳಿಕವೂ ಅವಳಿಗೆ ಅಸಂತೋಷ ವುಂಟಾಗಿ, ತನ್ನ ನೆರೆಹೊರೆಯವರ ಸಂಸಾರಗಳನ್ನು ನೋಡಿ ಮನಸ್ಸಿಗೆ ಸಮಾಧಾನವನ್ನು ಹಚ್ಚಿಕೊಳ್ಳುತ್ತಿದ್ದಳು. ತನಗೆ ದೊರೆತುದಕ್ಕೇ ಜನ ಸಂಸಾರಸುಖವೆಂದು ಹೇಳುತ್ತಾರೆಂದಮೇಲೆ ಸುಮ್ಮನೆ ನಿರಾಶೆಯಿಂದ ದುಃಖ ವನ್ನನುಭವಿಸುವದರಲ್ಲಿ ಏನರ್ಥವಿದೆ? ಬಾಳಾಸಾಹೇಬರಿಗೂ ಅವಳಿಗೂ ಸಂಘರ್ಷದ ವಿಷಯಗಳು ಬಳಿಕ ಮೇಲಿಂದ ಮೇಲೆಯೇ ಬರತೊಡಗಿದವು. ಆದರೆ ಶಕುಂತಲೆ ತನ್ನ ವಿವೇಕ ಬುದ್ಧಿಯನ್ನು ಅಲ್ಲಿಯೂ ಉಪಯೋಗ ಮಾಡಿದಳು. ದೊರೆತದ್ದನ್ನೇ ಸುಖವೆಂದು ತಿಳಿಯುವ ರೂಢಿಯನ್ನು ತನ್ನ ಮನಸ್ಸಿಗೆ ಮಾಡಿಕೊಟ್ಟಳು. ಅವಳು ಯಾವಾಗಲಾದರೂ ಭಾವೂಸಾಹೇಬ

ರಿಗೆ ಪತ್ರವನ್ನು ಬರೆದರೆ 'ನಾನು ಸುಖಿಯಾಗಿದ್ದೇನೆ' ಎಂದೇ ಬರೆದಿರುತ್ತಿದ್ದಳು.

ಆದರೆ ೧೯೪೨ ನೆಯ ಇಸ್ವಿ ಜೂನ ತಿಂಗಳಲ್ಲಾದ ಸಂಘರ್ಷ ಮಾತ್ರ ತೀಕ್ಷ್ಣವಾಗಿತ್ತು. ಅವರಿಬ್ಬರಲ್ಲುಂಟಾದ ರಾಜಕೀಯ ಮತಭೇದವೇ ಅದಕ್ಕೆ ಕಾರಣ. ಒಂದು ದಿನ ಸಂಜೆ ರೇಡಿಯೋ ಸ್ಟೇಶನ್ನದಿಂದ ತಿರುಗಿ ಬರುತ್ತಲೇ ಬಾಳಾಸಾಹೇಬರು ಶಕುಂತಲೆಗೆಂದರು:

"ನನಗೆ ಇಲ್ಲಿಯ ನೌಕರಿಯನ್ನು ಬಿಟ್ಟುಹೋಗಬೇಕಾದ ಪ್ರಸಂಗ ಬೇಗನೇ ಬರಬಹುದು; ನೀನೂ ಸಿದ್ಧಳಾಗಿರು ತೀರಿತು."

"ಅದರರ್ಥವೇನು?" ಶಕುಂತಲೆ ಆಶ್ಚರ್ಯದಿಂದಲೇ ಕೇಳಿದಳು.

"ಸೈನ್ಯದಲ್ಲಿ ಸೇರಲು ನಾನು ಅರ್ಜಿ ಹಾಕಿದ್ದೇನೆ."

"ನನ್ನನ್ನು ಕೇಳದೆಯೇ?"

"ನಿನ್ನನೇನೆಂದು ಕೇಳುವದು? ಮೇಲಾಗಿ ಹಾಗೆ ಕೇಳಿದರೆ, ನೀನು ಬೇಡವೆನ್ನುವಿ ಎನ್ನುವದು ನನಗೆ ಗೊತ್ತೇ ಇತ್ತು. ಕಾಂಗ್ರೆಸ ಪಕ್ಷದವಳಲ್ಲವೇ ನೀನು?"

"ಹೀಗೋ!" ಶಕುಂತಲೆ ಉಸಿರೆಳೆದು ಸುಮ್ಮನಾಗಿಬಿಟ್ಟಳು.

ಬಾಳಾಸಾಹೇಬರು ತಮ್ಮ ಮಾತನ್ನು ಮುಂದುವರಿಸಿದರು: "ರೇಡಿಯೊದಲ್ಲಿಯ ಈ ನೌಕರಿಯ ಮೇಲೆ ನನ್ನ ಅಧಿಕಾರ ಉಳಿದೂ ಕೂಡ ಕಮಿಶನ್ ದೊರೆಯುವದು ಸಾಧ್ಯವಿದೆ ಎಂಬುದು ನಿಶ್ಚಿತವಾದಾಗಲೇ ನಾನು ಅರ್ಜಿ ಮಾಡಿದ್ದೇನೆ; ರೇಡಿಯೋ ಸ್ಟೇಶನ್ನದ ಡೈರೆಕ್ಟರರು ನನ್ನ ಬಗ್ಗೆ ಒಳ್ಳೇ 'ಶಿಫಾರಸ' ಮಾಡಿದ್ದಾರೆ; ಬಳಿಕ ಕಮಿಶನ್ ದೊರೆತ ಕೂಡಲೆ ಹೋಗುವದೆಂದು ನಾನು ನಿಶ್ಚಯ ಮಾಡಿದ್ದೇನೆ. ಆಗ ನೀನೂ........"

"ಅಂದರೆ ಹೋಗುವದನ್ನು ನೀವೀಗ ನಿಶ್ಚಯಿಸಿಯೇ ಬಿಟ್ಟಿದ್ದೀರಿ ಎಂದಂತಾಯಿತು."

"ಹೌದು."

ಮುಂದೆ ಮಾತನ್ನೇ ಆಡಬಾರದೆಂದು ಶಕುಂತಲೆಗೆನಿಸಿತು. ಯುದ್ಧಕ್ಕೆ ಹಿಂದುಸ್ಥಾನದ ಒಪ್ಪಿಗೆಯೇ ಮೂಲದಲ್ಲಿಲ್ಲ. ಇಂತಹ ಯುದ್ಧದಲ್ಲಿ ಭಾಗ ವಹಿಸುವದೆಂದರೆ ಅದೊಂದು ಬಗೆಯ ದೇಶದ್ರೋಹವೇ! ಅದರಲ್ಲಿಯೂ

ತನ್ನ ಪತಿಯೇ ಕಮಿಶನ್ನಿಗಾಗಿ ಅರ್ಜಿ ಹಾಕಿರುವನೆಂದರೆ ತೀರ ನಾಚಿಕೆಗೇಡೆಂದೆನಿಸಿತವಳಿಗೆ; ಅವಳಿಗೆ ಸುಮ್ಮನಿರುವದೇ ಸಾಧ್ಯವಾಗಲಿಲ್ಲ. ಒಳ್ಳೇ ಆವೇಶಯುಕ್ತ ಸ್ವರದಲ್ಲಿ ಮಾತನಾಡತೊಡಗಿದಳು. ಇಬ್ಬರಿಗೂ ವಾಗ್ವಾದ ಸ್ವಲ್ಪ ಜೋರಾಗಿಯೇ ಪರಿಣಮಿಸಿತು. ಕೊನೆಗೆ ಬಾಳಾಸಾಹೇಬರ ನಿಶ್ಚಯದ ಸ್ವರದಲ್ಲಿ ಹೇಳಿಬಿಟ್ಟರು, " ಪತಿಯು ಏನು ಮಾಡಬೇಕು, ಏನು ಬಿಡಬೇಕು ಎಂಬುದನ್ನು ಹೇಳುವ ಅಧಿಕಾರ ಹೆಂಡತಿಗೆ ಇಲ್ಲವೇ ಇಲ್ಲ; ಸಂಸಾರ ಸರಿಯಾಗಿ ನಡೆಯುವಷ್ಟು ಹಣವನ್ನು ಅವನು ಗಳಿಸಿ ತಂದರೆ ಸರಿ, ಪಂಪತಿಯು ಅದರಿಂದ ಸಂತುಷ್ಟಳಾಗಿರಲೇ ಬೇಕು. "

" ಆದರೆ ಆ ಹಣವನ್ನು ಹೇಗೆ ಗಳಿಸುತ್ತಾನೆಂದೂ ಅವಳು ಕೇಳಬಾರದೇ ? "

" ಈಗ ನಾನೇನು ತುಡುಗು ಮಾಡಿ ಹಣ ಗಳಿಸ ಹೊರಟಿದ್ದೇನೆಯೇ ? "

" ತುಡುಗು ಮಾಡಿ ಅಲ್ಲ, ಕೊಲೆ ಮಾಡಿ ಹಣ ಗಳಿಸ ಹೊರಟದ್ದೀರಿ; ಗುಂಡು ಹಾಕುವ ಶಿಕ್ಷಣವನ್ನೇ ಅಲ್ಲವೇ ನೀವು ಸೈನ್ಯದಲ್ಲಿ ಪಡೆಯುವದು ? ತುಡುಗಾದರೂ ಏಕೆ ಇಲ್ಲ ಎನ್ನಬೇಕು ? ಅದೂ ಇದೆ—ನಮ್ಮ ಜನತೆಯ ಒಪ್ಪಿಗೆ ಈ ಯುದ್ಧಕ್ಕಿಲ್ಲದಿದ್ದರೂ, ಅವರ ಹಣವನ್ನೇ ಅಲ್ಲವೇ ಸೈನ್ಯದಲ್ಲಿಯ ಈ ಕಮಿಶನ್ನಿಗೆ ತುಂಬುವದು ? "

ಬಾಳಾಸಾಹೇಬರ ಕಣ್ಣಿನಿಂದ ಕಿಡಿಗಳುದುರಿದವು. " ಕಾಂಗ್ರೆಸ ಭಾಷಣಕಾರರ ವರದಿಗಳನ್ನು ಪಾಠಮಾಡಿ ನನ್ನೆದುರು ಒಪ್ಪಿಸಬೇಡ. ನಾನಿಲ್ಲಿ ಕೇಳಲು ಬಂದಿಲ್ಲ; ಸಾವರಕರರ ಮತ ನನಗೆ ಪೂರ್ಣ ಸಮ್ಮತವಿದೆ. ನಾನು ಇನ್ನೇನೂ ಹೆಚ್ಚಿಗೆ ವಿಚಾರ ಮಾಡುವದಿಲ್ಲ. ಕಮಿಶನ್ನ ದೊರೆತೊಡನೆ ಹೋಗಿಬಿಡುವೆ. "

ಶಕುಂತಲೆಯೂ ಹೆಚ್ಚಿಗೆ ವಿಚಾರ ಮಾಡಲಿಲ್ಲ. ತಟ್ಟನೇ ನುಡಿದುಬಿಟ್ಟಳು, " ಹಾಗಾದರೆ ಹೋಗಬಹುದು; ........ನಾನೂ ಮನೆಬಿಟ್ಟು ಹೋಗುವೆ; ತಿರುಗಿ ಬರುವದೇ ಇಲ್ಲ ಮತ್ತೆ. "

ಶಕುಂತಲೆ ನಿರಾಶೆಯಿಂದ ಈ ಮಾತುಗಳನ್ನಾಡಿದ್ದರೂ, ಈ ಪ್ರಸಂಗವನ್ನು ಎದುರಿಸಬೇಕಾದ ಸಮಯ ಬರಬಹುದೆಂದು ಅವಳೆಣಿಸಿರಲಿಲ್ಲ.

ಕೇವಲ ಬಾಳಾಸಾಹೇಬರನ್ನು ಸೈನ್ಯದಲ್ಲಿ ಸೇರಗೊಡಬಾರದೆಂಬ ಒಂದೇ ಉದ್ದೇಶದಿಂದ ಅವಳು ಈ ಮಾತುಗಳನ್ನಾಡಿದಳು. ಆವೇಶದ ಭರದಲ್ಲಿ ಮನುಷ್ಯನು, 'ಹಾಗೆ ಮಾಡುವೆ, ಹೀಗೆ ಮಾಡುವೆ' ಎಂದು ಜಂಭ ಕೊಚ್ಚುತ್ತಾನೆ; ಆದರೆ ಹಾಗೆ ಮಾಡಬೇಕಾದ ಪ್ರಸಂಗ ಬರುವದೆಂಬ ಕಲ್ಪನೆಯೇ ಅವನಿಗಿರುವದಿಲ್ಲ. ಅಂತಹ ಪ್ರಸಂಗ ಬರಬಾರದೆಂದು ಅವನು ಆಶಿಸುತ್ತಾನೆ.

ಶಕುಂತಲೆಯಾದರೂ ಹಾಗೇ ಆಶಿಸಿದಳು; ಬಾಳಾಸಾಹೇಬರು ಅವಳ ಸಲಹೆಯನ್ನು ಪಡೆಯದೆಯೇ ಕಮಿಶನ್ನಿಗಾಗಿ ಅರ್ಜಿ ಹಾಕಿದ್ದರು ನಿಜ; ಅದು ತಿಳಿದೊಡನೆ ಅವರಿಬ್ಬರಲ್ಲಿ ನೀರಸವಾದ ಮತಭೇದವೂ ಆಗಿತ್ತು; ಆದರೂ ಶಕುಂತಲೆಗೆನಿಸಿತ್ತು, 'ಬಾಳಾಸಾಹೇಬರು ಬಾಯಿಂದ ಆಡುತ್ತಿದ್ದಾರೇನೋ ಸರಿ, ಆದರೆ ತನ್ನ ಅಭಿಪ್ರಾಯವನ್ನು ಕಡೆಗಣಿಸಿ ಹೋಗಲಿಕ್ಕಿಲ್ಲ,' ಎಂದು; ತಾನು ಇನ್ನು ಸ್ವಲ್ಪ ಪ್ರಯತ್ನ ಮಾಡಿದರೆ ಬಾಳಾಸಾಹೇಬರು ಕಮಿಶನ್ನಿನ ತಮ್ಮ ವಿಚಾರವನ್ನೇ ಬಿಟ್ಟುಕೊಡಬಹುದೆಂದು ಅವಳೆಣಿಸಿದ್ದಳು. ಶಕುಂತಲೆ ಸಂಧಿಯನ್ನು ಸಾಧಿಸಿ ಒಂದು ದಿನ ಮಾತೆತ್ತಿದಳು, ಅವಳ ಮಾತಿನ ಬಗೆಯೇ ಇಂದು ಬೇರೆಯಾಗಿತ್ತು. ಸೈನ್ಯದಲ್ಲಿ ಸೇರುವದೆಂದರೆ ಎಂತಹ ದೇಶದ್ರೋಹ, ಭಾರತೀಯರು ತಪ್ಪುವದೆಲ್ಲಿ, ಇತ್ಯಾದಿ ವಿಷಯಗಳನ್ನು ಪೂರ್ಣವಾಗಿ ಬಿಟ್ಟು, ನಯವಾದ ವಿಷಯವನ್ನೆತ್ತಿಕೊಂಡಳು. ಅವರ ಬಗ್ಗೆ ತನಗೆ ಇಷ್ಟೊಂದು ಪ್ರೇಮವಿರುವಾಗ ಬಿಟ್ಟಿರುವದು ಹೇಗೆ ಸಾಧ್ಯವಾಗಬಲ್ಲದು? ಅವರು ಯುದ್ಧಕ್ಕೆ ಹೋದರೆ ತನಗೆಷ್ಟು ಚಿಂತೆ! ದುರ್ದೈವದಿಂದ ಏನಾದರೂ ಸಂಭವಿಸಿದರೆ ದುಃಖದ ಪರ್ವತವೇ ಅವಳ ಮೇಲೆ ಕಡಿದು ಬಿದ್ದಂತಾಗುವದಿಲ್ಲವೇ? ಇವೇ ಮೊದಲಾದ ಮಾತುಗಳಿಂದ ಶಕುಂತಲೆ ಅವರ ಮನವನ್ನು ಒಲಿಸಲೆತ್ನಿಸಿದಳು. ಇಂತಹ ಮಾತುಗಳಲ್ಲಿ ಜಗಳವೆಲ್ಲಿಂದ ಬಂದೀತು? ಬಾಳಾಸಾಹೇಬರು ಅದನ್ನೆಲ್ಲ ಶಾಂತವಾಗಿ ಕುಳಿತು ಕೇಳಿದರು. ಅವಳ ಮಾತು ಮುಗಿಯಿತು. 'ನಾನು ಆ ನನ್ನ ವಿಚಾರವನ್ನು ಬಿಟ್ಟುಕೊಟ್ಟಿದ್ದೇನೆ' ಎಂದೂ ಬಾಳಾಸಾಹೇಬರು ಹೇಳಲಿಲ್ಲ. 'ಇಲ್ಲ, ನನ್ನ ವಿಚಾರದಲ್ಲಿ ವ್ಯತ್ಯಾಸವಿಲ್ಲ' ಎಂದೂ ಸ್ಪಷ್ಟವಾಗಿ ಹೇಳಲಿಲ್ಲ. ಅವರ ಮೌನದಲ್ಲಿಯೇ ಶಕುಂತಲೆ ಸಮಾಧಾನವನ್ನು ಹಚ್ಚಿಕೊಂಡಳು.

ವಾದಕ್ಕಿಂತ ಪ್ರೇಮದಿಂದಲೇ ತನ್ನ ಹಟವನ್ನು ಸಾಧಿಸಿಕೊಳ್ಳಬಹುದೆಂದು ಅವಳಿಗೆನಿಸತೊಡಗಿತು.

ಮೂರು ನಾಲ್ಕು ವಾರಗಳು ಕಳೆದುಹೋದವು. ಬಾಳಾಸಾಹೇಬರು ಪುನಃ ಆ ಮಾತನ್ನೇ ಎತ್ತಿರಲಿಲ್ಲ. ಇದರಿಂದ ಬಾಳಾಸಾಹೇಬರು ತಮ್ಮ ವಿಚಾರವನ್ನು ಬಿಟ್ಟುಕೊಟ್ಟಿರಬೇಕೆಂಬ ಶಕುಂತಲೆಯ ನಂಬಿಕೆ ಇನ್ನೂ ದೃಢವಾಗತೊಡಗಿತು. 'ನಿನಗೋಸುಗ ನನ್ನ ಆ ವಿಚಾರವನ್ನು ಬಿಟ್ಟಿದ್ದೇನೆ' ಎಂದು ಅವರೆಂದೂ ಶಕುಂತಲೆಗೆ ಹೇಳಲಿಲ್ಲ. ಒಂದು ವೇಳೆ ಆ ವಿಚಾರವನ್ನು ಬಿಟ್ಟಿದ್ದರೂ ನಿನಗಾಗಿ ಆ ವಿಚಾರವನ್ನು ಬಿಟ್ಟಿದ್ದೇನೆ ಎಂದು ಅವರು ಹೇಳುವಂತಿಲ್ಲ; ಅಷ್ಟೊಂದು ಅಭಿಮಾನ ಅವರಲ್ಲಿ! ಶಕುಂತಲೆಗೂ ಇದು ಗೊತ್ತಿತ್ತು. ಅದರಿಂದ ಅವಳು, ಅವರು ಹೀಗೆ ಹೇಳಲಿ ಎಂಬ ಆಶೆಯನ್ನೇ ಮಾಡಲಿಲ್ಲ. ಬಾಳಾಸಾಹೇಬರ ಮೌನವನ್ನು ನೋಡಿ, ದಿನ ಕಳೆದಂತೆ, ತನ್ನ ಪ್ರೇಮದ ಹಟ ಸಾಧಿಸಿತೆಂದು ಅವಳ ನಂಬಿಕೆಯಾಗತೊಡಗಿತು.

ಮುಂದೆ ಆಗಸ್ಟ ತಿಂಗಳ ಪ್ರಾರಂಭಕ್ಕೆ ಅಖಿಲ ಭಾರತ ಕಾಂಗ್ರೆಸ ಅಧಿವೇಶನ ಮುಂಬಯಿಯಲ್ಲಿ ಕೂಡಿತು. ೯ ನೆಯ ದಿನಾಂಕದಂದು ಗಾಂಧೀಜಿ ಮತ್ತು ಇನ್ನುಳಿದ ಮುಖಂಡರು ಬಂಧಿಸಲ್ಪಟ್ಟರು. ಅಂದಿನಿಂದ ಜನತೆಯ ಚಳವಳಿ ಮತ್ತು ದಬ್ಬಾಳಿಕೆಯ ಸರಕಾರ ಇವೆರಡರಲ್ಲಿ ಹುಟ್ಟಿದ ಸಂಘರ್ಷದ ಕಿಚ್ಚು ದೇಶವನ್ನೇ ವ್ಯಾಪಿಸಿತು. ಸಮತೂಕ ವೃತ್ತಿಯ ತಟಸ್ಥ ಜನರ ಸಹನಶೀಲತೆಯೂ ಕೂಡ ಮೇರೆ ಮೀರಿತು. ಸರಕಾರದ ಧೋರಣದ ಬಗ್ಗೆ ಅವರ ಅಭಿಪ್ರಾಯವೂ ಬದಲಾಗಿತ್ತು. ಈ ಎಲ್ಲ ಪರಿಸ್ಥಿತಿಯ ಪರಿಣಾಮವು ಬಾಳಾಸಾಹೇಬರ ಮನದ ಮೇಲಾಗಲಿಕ್ಕಿಲ್ಲವೇ? ಆಗದೇ ಇರುವದು ಹೇಗೆ ಸಾಧ್ಯ? ಅವರು ನಿಶ್ಚಯವಾಗಿಯೂ ತಮ್ಮ ವೈಯಕ್ತಿಕ ಮಹತ್ವಾಕಾಂಕ್ಷೆಯನ್ನು ಬಿಟ್ಟುಕೊಡುವರು. ........ಶಕುಂತಲೆ ಮನಸ್ಸಿಗೆ ಸಮಾಧಾನ ಹಚ್ಚಿಕೊಂಡಳು. ಆಗಸ್ಟ ತಿಂಗಳು ಮುಗಿಯುತ್ತ ಬಂತು. ಸಂಕಟ ಕಳೆಯಿತೆಂದು ಶಕುಂತಲೆ ಭಾವಿಸಿದಳು.

ಆದರೆ ವಿಧಿಯ ಆಟ ಬೇರೆಯಾಗಿತ್ತು. ಒಂದು ದಿನ ಸಂಜೆ ಬಾಳಾಸಾಹೇಬರು ಬದಾಮಿ ಬಣ್ಣದ ಕಾಗದವೊಂದನ್ನು ಕೈಯಲ್ಲಿ ಹಿಡಿದು ಶಕುಂತಲೆ ಇದ್ದ ಸ್ಥಳವನ್ನೇ ಹುಡುಕಿ ಬಂದರು. "ನನಗೆ ಕಮಿಶನ್ ದೊರೆ

ತಿದೆ, ನಾನು ಹೋಗುವೆ" ನಿಶ್ಚಿತ ಸ್ವರದಲ್ಲಿ ಶಕುಂತಲೆಗೆ ಹೇಳಿದರು.

ಅದನ್ನು ಕೇಳಿದ ಶಕುಂತಲೆ ಅಲುಗಾಡಲೇ ಇಲ್ಲ. ನಿರಾಶೆ, ದುಃಖ, ಸಂತಾಪಗಳು ಅವಳನ್ನು ಒಟ್ಟಿಗೇ ಮುತ್ತಿದವು; ಅವಳ ಬಾಯಿಂದ ಮಾತೇ ಹೊರಡಲಿಲ್ಲ. ಆ ದೃಶ್ಯವನ್ನು ನೋಡಲಾರದೆ ಎದ್ದು ಹೊರಟುಹೋದಳು!

ಅದರ ಮೇಲೆ ಬಾಳಾಸಾಹೇಬರೊಂದಿಗೆ ಕಮಿಶನ್ನಿನ ವಿಚಾರವಾಗಿ ಅವಳು ಎಂದೂ ಮಾತನ್ನೆತ್ತಲಿಲ್ಲ. ಅವರು ಹೋಗುವದೆಲ್ಲಿಗೆ ? ಎಂದು ? ಎಂಬ ವಿಷಯಗಳನ್ನು ತಿಳಿಯುವ ಆಶೆಯೂ ಅವಳಿಗಿದ್ದಿರಲಿಲ್ಲ. ಅವರೂ ಅವಳಿಗೆ ಹೇಳಲಿಲ್ಲ! ಒಂದು ದಿನ ಹಾಜರ ಆಗುವದಕ್ಕಾಗಿ ಅವಳಿಗೆ ಹೇಳದೆ ಕೇಳದೆ ಹೊರಟುಬಿಟ್ಟರು!

ಮತ್ತೆ ಬಾಳಾಸಾಹೇಬರ ಕಡೆಗೆ ಹೋಗುವಂತಿಲ್ಲವೆಂದು ನಿಶ್ಚಯಿಸಿ ಶಕುಂತಲೆ ಕೊಲ್ಹಾಪುರಕ್ಕೆ ಬಂದು ಬಿಟ್ಟಳು.

## ೮

ಭಾವೂಸಾಹೇಬರು ಮಕ್ಕಳನ್ನು ಕರೆದುಕೊಂಡು ಪ್ಲಾಟಫಾರ್ಮಿನ ಮೇಲೆ ನಿಂತಿದ್ದರು. ಶಕುಂತಲೆ ಕುಳಿತಿದ್ದ ಡಬ್ಬಿ ಅವರನ್ನೆಲ್ಲ ಬಿಟ್ಟು ಬಹಳ ಮುಂದೆ ಹೋಗಿಬಿಟ್ಟಿತು. ಡಬ್ಬಿ ಮುಂದೆ ಹೋಯಿತೆಂದು ಅವರೂ ಮುಂದೆ ಹೋಗುವಷ್ಟರಲ್ಲಿ ಶಕುಂತಲೆ ಕೆಳಗೆ ಇಳಿದಿದ್ದಳು; ಹಮಾಲನು ಡಬ್ಬಿಯಲ್ಲಿ ಹತ್ತಿ ಅವಳ ಸಾಮಾನುಗಳನ್ನು ಇಳಿಸುತ್ತಿದ್ದನು. ಛಬೂ ಹತ್ತಿರ ಬರುತ್ತಲೆ ಶಕುಂತಲೆಯ ಕೈಗಳು ಅವಳನ್ನು ಬಂಧಿಸಿದವು; ಚಿಕ್ಕ ಮಧು ಉದ್ದನೆಯ ಚೊಣ್ಣ, ಕೋಟು, ಬೂಟುಗಳನ್ನೆಲ್ಲ ಹಾಕಿ ದೊಡ್ಡ ದೊಡ್ಡ ಹೆಜ್ಜೆಗಳನ್ನು ಹಾಕುತ್ತ, ಅವಳ ಹಿಂದೆಯೇ ಬಂದನು; ಶಕುಂತಲೆ ಅವನನ್ನು ಎತ್ತಿದವಳೇ ಬಗಲಲ್ಲಿ ಕೂಡಿಸಿಕೊಂಡು, ಸೂರ್ಯನ ಎಳೆ ಬಿಸಿಲಿನಿಂದಲೇ ಕೆಂಪೇರಿದ ಅವನ ಗಲ್ಲಗಳನ್ನು ಮತ್ತೆ ಮತ್ತೆ ಚುಂಬಿಸಿದಳು. ಭಾವೂ ಇದನ್ನೆಲ್ಲ ನೋಡುತ್ತ ನಿಂತಲ್ಲಿಯೇ ನಿಂತುಬಿಟ್ಟಿದ್ದರು. ಛಬೂ, ಮಧು ಅವರ ಪ್ರಶ್ನೆಗಳ ಸುರಿಮಳೆ ನಿಂತಮೇಲೆ, ಶಕುಂತಲೆಯನ್ನು ನೋಡಿ ನಗುತ್ತ ಅಂದರು, “ಅಂತೂ ಗಾಡಿ ಇಂದು ಸಮಯಕ್ಕೆ ಸರಿಯಾಗಿಯೇ ಬಂತು.”

ಶಕುಂತಲೆ ನಕ್ಕಳು, “ಸಮಯಕ್ಕೆ ಸರಿಯಾಗಿ? ಅದು ಹೇಗೆ? ಎಂಟೂವರೆಗೆ ಬರುವ ಗಾಡಿ ಹನ್ನೊಂದಕ್ಕೆ ಬಂದಿದೆಯಲ್ಲ!”

"ಅದಕ್ಕೇ ಈಗ ಸಮಯಕ್ಕೆ ಸರಿಯಾಗಿ, ಎಂದು ಹೇಳುವದು. ಯುದ್ಧಜನ್ಯ ಪರಿಸ್ಥಿತಿಯಲ್ಲವೇ ಇದು ?" ಭಾವೂ ನಕ್ಕರು.

"ಅಹುದು ಅದೂ ನಿಜ; ಪುಣೆಯ ನಿಲ್ದಾಣದಲ್ಲಿ ಆ ದೃಶ್ಯವನ್ನು ನಿನ್ನೆ ನನಗೆ ನೋಡಲಾಗಲಿಲ್ಲ; ಅದರಲ್ಲಿಯೂ ಮೂರನೆಯ ವರ್ಗದಲ್ಲಿಯ ಆ ಗದ್ದಲವನ್ನೂ ಗುದುಮುರಿಗೆಯನ್ನೂ ನೋಡಿದರೆ, ಯುದ್ಧ ಅಲ್ಲಿ ರಣರಂಗ ದಲ್ಲಿ ನಡೆದಿರದೆ, ಇಲ್ಲಿ ಗಾಡಿಯಲ್ಲೇ ನಡೆದಿದೆ ಎನ್ನಿಸಿಬಿಟ್ಟಿತು. ಬಳಿಕ ಹಿಂದ ಸ್ಥಾನದಲ್ಲಿ ಯುದ್ಧ ನಡೆದಿಲ್ಲ ಎಂದು ಹೇಳುವದಾದರೂ ಹೇಗೆ ?"

ಅವಳ ಮಾತನ್ನು ಕೇಳಿ ಭಾವೂಸಾಹೇಬರಂತೂ ನಕ್ಕರು. ಜೊತೆಗೆ ಅಲ್ಲಿಯೇ ಪಕ್ಕದಲ್ಲಿ ತಮ್ಮ ಸಾಮಾನುಗಳನ್ನಿಳಿಸಿ ಹಮಾಲನ ದಾರೀಕಾಯು ತ್ತಿದ್ದ ಇಬ್ಬರು ಯುವಕರೂ ಅವಳ ಮಾತನ್ನು ಕೇಳಿ ಜೋರಿನಿಂದ ನಕ್ಕರು.

ಹಮಾಲನು ಶಕುಂತಲೆಯ ಸಾಮಾನುಗಳನ್ನು ಒಂದೊಂದಾಗಿ ಕೈಗಾಡಿ ಯಲ್ಲಿ ಇರಿಸುತ್ತಿದ್ದನು. ಛಬೂ ಅದನ್ನೇ ನೋಡುತ್ತಿದ್ದಳು.

"ಎರಡು, ಮೂರು, ನಾಲ್ಕು—ಎಷ್ಟು ಪೆಟ್ಟಿಗೆಗಳನ್ನು ತಂದಿದ್ದಾಳೆ ಅಕ್ಕ !" ಛಬೂ ಆಶ್ಚರ್ಯವನ್ನು ಸೂಚಿಸಿದಳು.

ಭಾವೂ ಅವಳಿಗೆಂದರು, "ನೆಟ್ಟಗಾಯಿತು; ಇಷ್ಟು ಪೆಟ್ಟಿಗೆಗಳನ್ನು ತಂದಿದ್ದಾಳೆಂದ ಮೇಲೆ ಅಕ್ಕ, ಬೇಗನೇ ಹೋಗುವದಿಲ್ಲ ಽ"

ಅಕ್ಕನ ಬಗಲಲ್ಲಿ ಕುಳಿತ ಮಧು ಕೇಳಿದ, "ಅಂದರೆ ಎಷ್ಟು ದಿನ ಇರು ತ್ತಾಳೆ ಭಾವೂ ? ನಾಲ್ಕು, ಆರು, ಎಂಟು ?"

"ಹುಚ್ಚ ಽ, ಎಂಟೇ ದಿನವೇ ? ಅವಳನ್ನು ಬಹಳ ದಿನಗಳ ವರೆಗೆ ಬಿಡುವದೇ ಬೇಡ." ಭಾವೂ ಮಧುಗೆಂದರು.

ಶಕುಂತಲೆ ಮನಸ್ಸಿನಲ್ಲಿಯೇ ಅಂದುಕೊಂಡಳು, "ಬಿಡುವ, ಕಟ್ಟಿ ಹಾಕುವ ವಿಚಾರಕ್ಕೆ ಅವಕಾಶವೆಲ್ಲಿದೆ ? ನಾನಿಲ್ಲಿ ಕಡೆತನಕವೂ ಇರಲು ಬಂದಿದ್ದೇನೆ; ಆ ಕಲ್ಪನೆ ನಿಮಗೆಲ್ಲಿದೆ ?"

ಹಮಾಲನು ಕೈಗಾಡಿಯನ್ನು ಮುಂದೂಡಿದನು; ಭಾವೂಸಾಹೇಬರು ಪರಿವಾರದೊಡನೆ ಹಿಂದೆ ಹೊರಟರು.

ಶಾಲೆ ಕಾಲೇಜುಗಳಲ್ಲಿರುವಾಗ, ಜೀವದ ಗೆಳತಿಯರೆನ್ನುವವರು ಶಕುಂ ತಲೆಗೆ ಯಾರೂ ಇದ್ದಿರಲೇ ಇಲ್ಲ. ಪದ್ಮಾಕರನೊಬ್ಬನನ್ನು ಬಿಟ್ಟರೆ, ಭಾವೂ

ಸಾಹೇಬರೇ ಅವಳ ಜೀವದ ಮಿತ್ರರು. ಮದುವೆಗೆ ಮೊದಲು ಕೂಡ ವೇಳೆ ಗಳೆಯಲೆಂದಾಗಲಿ, ಹರಟೆ ಕೊಚ್ಚಲೆಂದಾಗಲಿ ಅವಳು ಯಾರ ಮನೆಗೂ ವಿಶೇಷವಾಗಿ ಹೋಗುತ್ತಿರಲಿಲ್ಲ; ಮತ್ತೆ ಅವಳ ಕಡೆಗೆ ಯಾರೂ ಬರುತ್ತಿರ ಲಿಲ್ಲ. ಈಗಂತೂ ಅವಳು ಅತ್ತಿತ್ತ ಅಡ್ಡಾಡುವದು ಸಾಧ್ಯವಿರಲಿಲ್ಲ; ಬಂದ ನಾಲ್ಕೈದು ದಿನ ಮನೆಯಲ್ಲಿಯೇ ಕುಳಿತು ಕಳೆದಳು. ಎಲ್ಲಿಯೋ ಸಂಜೆಯ ಹೊತ್ತಿನಲ್ಲಿ, ಭಾವೂ, ಮಧೂ, ಛಬೂ ಇವರನ್ನೆಲ್ಲ ಕರೆದುಕೊಂಡು ಸ್ವಲ್ಪ ತಿರುಗಾಡಿ ಬರುತ್ತಿದ್ದಳು ಅಷ್ಟೇ.

ಅಂದಿನ ಕೊಲ್ಹಾಪುರದಲ್ಲಿಯೂ ಇಂದಿನ ಕೊಲ್ಹಾಪುರದಲ್ಲಿಯೂ ಎಷ್ಟೊಂದು ವ್ಯತ್ಯಾಸ; ಯುದ್ಧದ ಮತ್ತು ದೇಶದಲ್ಲಿಯ ಪ್ರಕ್ಷುಬ್ಧ ವಾತಾವ ರಣದ ಪರಿಣಾಮ ಕೊಲ್ಹಾಪುರದ ಮೇಲೆಯೂ ಸಾಕಷ್ಟಾಗಿತ್ತು. ಈ ಪರಿ ಣಾಮದ ಗುರುತಾಗಿ ನಿಂತಿದ್ದ ಅದೆಷ್ಟೋ ಸಂಗತಿಗಳು ಶಕುಂತಲೆಯ ಕಣ್ಣಿಗೆ ಬಿದ್ದವು. ಅವಳ ಮನೆಯ ಅಕ್ಕಪಕ್ಕಗಳಲ್ಲಿ, ಅವಳೆಂದೂ ಹಿಂದೆ ನೋಡದಿದ್ದ ಮನುಷ್ಯರು ವಾಸವಾಗಿದ್ದರು. ಅವರಲ್ಲಿ ಗಂಡಸರು ಹೆಚ್ಚಾಗಿರಲಿಲ್ಲ; ಸ್ತ್ರೀ ಯರು ಮಕ್ಕಳ ಸಂಖ್ಯೆಯೇ ಹೆಚ್ಚಾಗಿತ್ತು. ಅವರ ವೇಷಭೂಷಣಗಳನ್ನು, ಧ್ವನಿ ತೆಗೆದು ಮಾತಾಡುವ ರೀತಿಯನ್ನು ನೋಡಿದರೆ, ಅವರು ಪರಕೀಯ ರೆಂದು ಕೂಡಲೇ ಹೇಳಬಹುದಿತ್ತು. ಜಪಾನೀಯರು ದಾಳಿ ಮಾಡಿದಾಗ, ಜನರು ಮುಂಬಯಿಯನ್ನು ಬಿಟ್ಟು ಹೋಗತೊಡಗಿದರಲ್ಲs, ಆಗ ಈ ಜನ ಅಲ್ಲಿ ಬಂದು ಸೇರಿದರು. ಕೊಲ್ಹಾಪುರದಲ್ಲಿ ಈಗ ಇಂತಹ ಕುಟುಂಬಗಳು ಎಷ್ಟೋ ಬಂದು ವಾಸವಾಗಿದ್ದವು; ಹೇಳಿದಷ್ಟು ಬಾಡಿಗೆ ಕೊಟ್ಟು ಈ ಜನ ಮನೆ ಹಿಡಿಯುತ್ತಿದ್ದರು. ಶಕುಂತಲೆಯ ಮನೆಯ ರಸ್ತೆಗೆ ಹೊಂದಿದ್ದ ಇನ್ನೆ ರಡು ಸಣ್ಣ ದಾರಿಗಳನ್ನು ಬಿಟ್ಟರೆ ಶಹರದ ದೊಡ್ಡ ರಸ್ತೆಯೇ ಹತ್ತುತ್ತಿತ್ತು. ಅಲ್ಲಿ ಈಗ ಫರ್ನಿಚರಿನ ದೊಡ್ಡ ದೊಡ್ಡ ಅಂಗಡಿಗಳೂ ಬೇರೆ ಬೇರೆ ಕಾರ ಖಾನೆಗಳೂ ಕಂಡುಬರುತ್ತಿದ್ದವು. ಈ ಕಾರಖಾನೆದಾರರಿಗೆ ವಿರಾಮವೇ ದೊರೆಯದಷ್ಟು ಕೆಲಸ ಬಿದ್ದಿರುತ್ತಿತ್ತು. ಈ ರಸ್ತೆಯ ರಹದಾರಿಯಮೇಲೂ ವ್ಯತ್ಯಾಸ ಕಾಣುತ್ತಿತ್ತು. ಬಹುತರವಾಗಿ ಕೊಲ್ಹಾಪುರದ ಎಲ್ಲ ರಹದಾರಿ ಗಳಲ್ಲಿಯೂ ಇದೇ ವ್ಯತ್ಯಾಸ ಕಂಡುಬರುತ್ತಿತ್ತು. ರಸ್ತೆಯ ಮೇಲೆ ಕೊಲ್ಹಾ ಪುರದ ಜನರಂತೆಯೇ ವೇಷ ಧರಿಸಿದ ಪರಕೀಯರು ಅದೆಷ್ಟೋ ಜನ ! ಅವ

ರಲ್ಲಿ ಮೊಣಕಾಲು ಕಾಣುವಂತೆ ಧೋತರವನ್ನುಟ್ಟ ಗುಜರಾಥಿಗಳು, ಲುಂಗೀ ಸುತ್ತಿದ ಮದ್ರಾಸಿಗಳು, ಬ್ರಹ್ಮದೇಶದಿಂದ ಇಲ್ಲಿಗೆ ಬಂದ ಬರ್ಮಾ ಆಫೀಸಿನಲ್ಲಿಯ ಬಂಗಾಲೀ ಜನ, ಬ್ರಿಟಿಶ್ ವೇಷವನ್ನೇ ಧರಿಸಿದ ಬ್ರಿಟಿಶ್ ಜನರೇ ಕೆಲವರು—ಹೀಗಾಗಿ ಇವರೆಲ್ಲರಿಂದ ರಸ್ತೆಗಳು ವೈವಿಧ್ಯಪೂರ್ಣವಾಗಿದ್ದವು. ಇದರಿಂದ ಕೊಲ್ಹಾಪುರವು ಎಷ್ಟು ಬೇಗನೆ ವ್ಯತ್ಯಾಸ ಹೊಂದುತ್ತಿತ್ತೆಂಬುದು ಸ್ಪಷ್ಟವಾಗಿ ತಿಳಿಯುತ್ತಿತ್ತು. ಬಾಹ್ಯ ವಾತಾವರಣದಲ್ಲಿ ವ್ಯತ್ಯಾಸವಾದಂತೆ ಜನರ ಮನೋವೃತ್ತಿಯಲ್ಲಿಯೂ ಬದಲಾವಣೆಯಾಗಿತ್ತು; ಶಕುಂತಲೆಗೆ ಈ ವಿಷಯ ಪ್ರತ್ಯಕ್ಷ ಅನುಭವಕ್ಕೆ ಬರದಿದ್ದರೂ, ಭಾವೂಸಾಹೇಬರ ಕಡೆಗೆ ಯಾರಾದರೂ ಬಂದು ಮಾತಾಡತೊಡಗಿದರೆಂದರೆ ಅವರ ಮಾತಿನಮೇಲಿಂದ ತಿಳಿಯುತ್ತಿತ್ತು; ಮಳೆಗಾಳಿಯ ಸುದ್ದಿಯಷ್ಟೇ ಸಹಜವಾಗಿ, ಏರಿದ ಬೆಲೆಯ ಸುದ್ದಿ ಅವರ ಮಾತಿನಲ್ಲಿ ಬಂದುಬಿಡುತ್ತಿತ್ತು. ದೇಶದಲ್ಲಿಯ ಪ್ರಕ್ಷುಬ್ಧ ವಾತಾವರಣದ ಸಂಗತಿಗಳನ್ನು ಪರಸ್ಪರರಿಗೆ ಹೇಳಲು ಅವರಲ್ಲಿ ಎಲ್ಲಿಲ್ಲದ ಉತ್ಸಾಹ! ದೇಶದ ಭವಿತವ್ಯದ ಕಡೆಗೇ ಎಲ್ಲರ ಕಣ್ಣು. ಹೀಗಾಗಿ ಸಂಸ್ಥಾನದ ರಾಜ್ಯತಂತ್ರದಲ್ಲಿ ತಲೆಹಾಕಲು ವಿಶೇಷ ಲಕ್ಷ್ಯ ಜನರಲ್ಲಿ ಉಳಿದಿರಲೇ ಇಲ್ಲ; ಮತ್ತು ಒಂದೆಂದರೆ ಯುದ್ಧ ನಡೆದಿರುವವರೆಗೆ ಸಂಸ್ಥಾನದ ಮಂತ್ರಿಗಳೇ ಆಗಲಿ, ಏನು ಮಾಡಬಲ್ಲರು? ಎಂತಹ ಉದಾರ ಮತವಾದಿಗಳಾದರೂ ಯುದ್ಧ ಮುಗಿದ ಮೇಲೇ ಅಲ್ಲವೇ ಅವರ ಲಕ್ಷ್ಯ ಇತ್ತಕಡೆ ಹೊರಳುವದು? ಹೀಗಾಗಿ ಸಂಸ್ಥಾನದ ಭವಿತವ್ಯವನ್ನು ಕುರಿತು ಯೋಚಿಸುವ ಜನ ನಿರಾಶೆಯಿಂದಲೇ ಧ್ವನಿ ಎಳೆಯುತ್ತಿದ್ದರು. ಅಂತೂ ಒಟ್ಟಿನಲ್ಲಿ ಎಲ್ಲರ ಮನದಲ್ಲಿಯೂ ಒಂದು ಬಗೆಯ ಚಿಂತೆ, ಉದಾಸೀನತೆ ಮೂಡಿತ್ತು! ಯಾವ ಪ್ರಯತ್ನದಿಂದಲೇ ಆಗಲಿ, ಸಾರ್ವಜನಿಕರ ಈ ಚಿಂತೆ ದೂರಾದರೆ ಸಾಕು ಎಂದು ಎಲ್ಲರಿಗೂ ಅನಿಸುವಂತಿತ್ತು.

ಶಕುಂತಲೆಯನ್ನು ಕೊಲ್ಹಾಪುರಕ್ಕಟ್ಟಿದ್ದ ಅವಳ ನಿರಾಶೆಯ ಮನಃಸ್ಥಿತಿ ಪ್ರಕ್ಷುಬ್ಧ ಪರಿಸರದ ಅನುಭವವನ್ನು ಅವಳಿಗೆ ಹೆಚ್ಚಾಗಿಯೇ ಮಾಡಿಕೊಟ್ಟಿತು; ನೋಡಿದ ವಸ್ತುಗಳಲ್ಲೆಲ್ಲ ಬದಲಾವಣೆಯಾದಂತೆ ಅವಳಿಗೆ ಅನಿಸುತ್ತಿತ್ತು. ಕಾಮಣಿ ಆದವರ ಕಣ್ಣಿಗೆ ಸುತ್ತಲಿನ ಪದಾರ್ಥಗಳೆಲ್ಲವೂ ಹಳದಿಯಾಗಿ ಕಾಣುವವಲ್ಲವೇ? ಶಕುಂತಲೆಯ ಸ್ಥಿತಿಯೂ ಹಾಗೇ ಆಗಿತ್ತು. ಈ ಎಲ್ಲ

ವಸ್ತುಗಳಲ್ಲಿ ವ್ಯತ್ಯಾಸ ಹೊಂದದ ಒಂದೇ ಒಂದು ವಸ್ತುವೆಂದರೆ ಅದು ಭಾವೂ ಸಾಹೇಬರಿಗೆ ಅವಳ ಮೇಲಿದ್ದ ಪ್ರೇಮ! ಆ ಪ್ರೇಮವನ್ನು ನಂಬಿಯೇ ಅವಳಿಲ್ಲಿಗೆ ಬಂದಿದ್ದಳು; ಅದು ದೊರೆತ ಬಳಿಕ ಸುತ್ತಲಿನ ಪರಿಸ್ಥಿತಿಯಲ್ಲಿ ಎಂತಹ ಬದಲಾವಣೆಯಾದರೂ ಅವಳಿಗದರ ಚಿಂತೆ ಇರಲಿಲ್ಲ. ಭಾವೂ ಸಾಹೇಬರಿಗೆ ಅವಳ ಮೇಲಿದ್ದ ಪ್ರೇಮ, ಅಭಿಮಾನ, ಅವಿಚಾರದಿಂದ ಅವ ಳಾವ ಕಾರ್ಯವನ್ನೂ ಕೈಕೊಂಬುವದಿಲ್ಲೆಂಬ ನಂಬಿಗೆ—ಇವುಗಳಲ್ಲಿ ಮಾತ್ರ ಯಾವ ವ್ಯತ್ಯಾಸವೂ ಆಗಿರಲಿಲ್ಲ; ಶಕುಂತಲೆಗೆ ಅದನ್ನು ಕಂಡು ಸಮಾಧಾನ ವಾಯಿತು.

ಅಭ್ಯಾಸ ಮಾಡುವದಿಲ್ಲೆಂದು ಛಬೂತಾಯಿಗಾಗಲಿ, ಮಧೂನಿಗಾಗಲಿ, ಸಿಟ್ಟು ಮಾಡುವಾಗ ಪ್ರತಿಸಲ ಭಾವೂಸಾಹೇಬರು ಅಭಿಮಾನದಿಂದ ಹೇಳುತ್ತಿ ದ್ದರು, “ಛಬೂ, ನಿನ್ನಷ್ಟಿದ್ದಾಗ ಶಕೂತಾಯಿ ಏನೇನು ಓದಿದ್ದಳು ಗೊತ್ತಿ ದೆಯೇ ? ಮಧೂ, ಶಕೂ ನಿನ್ನಷ್ಟಿದ್ದಾಗ..........” ಎಂದು ಇನ್ನೂ ಏನೇನನ್ನೋ ಹೇಳುತ್ತಿದ್ದರು. ಸ್ವತಃ ಶಕುಂತಲೆಗೆ ತನ್ನ ಬಗ್ಗೆ ನೆನಪಿರ ಲಿಕ್ಕಿಲ್ಲ; ಅಷ್ಟೊಂದು ಅವಳ ಬಾಲ್ಯದ ನೆನೆಪುಗಳನ್ನು ಭಾವೂಸಾಹೇಬರು ನೆನಪಿಟ್ಟಿದ್ದರು; ಒಂದಿಲ್ಲೊಂದು ನೆವದಿಂದ ಅವುಗಳನ್ನು ಎತ್ತಿ ಎತ್ತಿ ಹೇಳು ತ್ತಲೇ ಇದ್ದರು. ಅವುಗಳನ್ನು ಕೇಳಿದ ಶಕುಂತಲೆ ಮನದಲ್ಲಿಯೇ ಅಂದು ಕೊಳ್ಳುತ್ತಿದ್ದಳು, “ನನ್ನ ಬಾಲ್ಯ ಇಷ್ಟೊಂದು ಉಜ್ವಲವಾಗಿತ್ತೇ? ಅಂದಿನ ಅವಳೇ ನಾನಿರಬಹುದೇ ಇಂದು? ‘ಮೂರು ವರುಷದ ಬುದ್ಧಿ ನೂರು ವರುಷದ ವರೆಗೆ’ ಎನ್ನುತ್ತಾರೆ, ಆ ನನ್ನ ಬುದ್ಧಿ ಎಲ್ಲಿ ಹೋಗಿರಬಹುದು? ಅಥವಾ ನನ್ನ ವಿಷಯದಲ್ಲಿ ಇದು ಸುಳ್ಳಾಗಿರಬಹುದೇ?” ಭಾವೂಸಾಹೇಬರು ಅವಳ ಭವಿಷ್ಯತ್ತಿನ ಬಗ್ಗೆ ಎಂತಹ ಗಾಳಿಗೋಪುರವನ್ನು ಕಟ್ಟಿದ್ದರು! ಅದೆಲ್ಲ ಇಂದು ಹೇಳಹೆಸರಿಲ್ಲದಾಯಿತು. ಆದರೆ ಅವರ ವಾತ್ಸಲ್ಯದಲ್ಲಿ ಮಾತ್ರ ಎಷ್ಟೂ ವ್ಯತ್ಯಾಸವಿರಲಿಲ್ಲ. ಇಷ್ಟೇ ಅಲ್ಲ ಶಕುಂತಲೆ ಬಹಳ ದಿನಕ್ಕೆ ಬಂದಿದ್ದಾಳೆ, ಅವಳು ಸುಖವಾಗಿರಬೇಕು, ಎಂದು ಅದಕ್ಕೆ ಬೇಕಾದ ಉಪಾಯಗಳನ್ನೆಲ್ಲ ಕಲ್ಪಿಸಿಡುತ್ತಿದ್ದರು; ಕೆಲಸಕ್ಕಾಗಿ ಹೊರಗೆ ಹೋಗುವ ನಿರ್ದಿಷ್ಟ ವೇಳೆಯನ್ನು ಬಿಟ್ಟು, ಉಳಿದ ವೇಳೆಯನ್ನೆಲ್ಲ ಅವರು ಅವಳ ಸಹ ವಾಸದಲ್ಲಿಯೇ ಕಳೆಯುತ್ತಿದ್ದರು. ಭಾವೂ ಬೆಳಗಾಂವಿಯಲ್ಲಿ ಒಬ್ಬ ಕಾರ

ಖಾನದಾರನ ಕೆಲಸವನ್ನು ಮಾಡಿಕೊಡುವದಾಗಿ ವಚನಕೊಟ್ಟಿದ್ದರು; ಭಾವೂ ಸಾಹೇಬರು ಬೆಳಗಾವಿಗೆ ಬಂದುಹೋಗಬೇಕೆಂದು ಅವನು ಒಂದರ ಮೇಲೊಂದು ಪತ್ರ ಹಾಕಿದನು; ಕೊನೆಗೆ ತಾರು ಕೂಡ ಮಾಡಿದನು. ಆದರೆ ಭಾವೂ “ ಈಗ ಬರುವಂತಿಲ್ಲ, ಕ್ಷಮೆಯಿರಲಿ ” ಎಂದು ಉತ್ತರವನ್ನು ಕಳಿಸಿ ಬಿಟ್ಟರು. “ ನೀನಿಲ್ಲಿ ಇರುವವರೆಗಾದರೂ ನಾನು ಪರವೂರಿಗೆ ಹೋಗುವ ದಿಲ್ಲ ” ಎಂದು ಅವರು ಶಕುಂತಲೆಗನ್ನುತ್ತಿದ್ದರು.

ಶಕುಂತಲೆಗೆನಿಸಿತು, ನಾನು ಮುಂಬಯಿಗೆ ಮತ್ತೆ ಹೋಗುವದೇ ಇಲ್ಲ ವೆಂದು ಹೇಳಿಬಿಡಲೇ ಎಂದು. ಆದರೆ ತುಟಿಯ ವರೆಗೆ ಬಂದಿದ್ದ ಶಬ್ದಗಳು ಹೊರಬೀಳಲೇ ಇಲ್ಲ. ಅವಳ ಬರುವಿಕೆಯಿಂದ ಭಾವೂಸಾಹೇಬರಿಗೆ ಅತ್ಯಂತ ಆನಂದವಾಗಿತ್ತೆಂಬುದು ಶಕುಂತಲೆಗೆ ಗೊತ್ತಿತ್ತು. ಆದರೆ ತಾನು ಬಂದ ಕಾರಣವನ್ನು ಅವರಿಗೆ ತಿಳಿಸಿದರೆ, ಅವರಿಗೆ ಎಷ್ಟೊಂದು ದುಃಖವೆನಿಸ ಬಹುದು! ಶಕುಂತಲೆ ಅವರ ಆನಂದವನ್ನು ಮರೆಮಾಡಲು ಯತ್ನಿಸಲಿಲ್ಲ; ಸುಮ್ಮನೇ ಇದ್ದುಬಿಟ್ಟಳು.

ಕೊಲ್ಹಾಪುರಕ್ಕೆ ಬಂದು ಹದಿನೈದು ದಿನಗಳಾಗಿದ್ದರೂ, ಶಕುಂತಲೆ ಭಾವೂಸಾಹೇಬರಿಗೆ ಈ ವಿಷಯವನ್ನು ತಿಳಿಸಿರಲಿಲ್ಲ. ಮುಂಬಯಿಯಿಂದ ಹೊರಡುವಾಗ ನೆಟ್ಟಗೆ ಹೋಗಿ ಭಾವೂಸಾಹೇಬರಿಗೆ ಈ ವಿಷಯವನ್ನು ತಿಳಿಸಿ ಬಿಟ್ಟರಾಯಿತು, ಅದರಲ್ಲೇನು ? ಎಂದು ಯೋಚಿಸಿದ್ದಳು. ಸುಖದ ತೆರೆಯನ್ನೆಳೆಯುವದಕ್ಕಿಂತ, ದುಃಖದ ಗಾಯವನ್ನೇ ತನ್ನ ಪ್ರೀತಿಯ ತಂದೆಗೆ ತೋರಿಸಿಬಿಟ್ಟರಾಯಿತು, ಇದಿನ್ನೂ ಸುಲಭ ಎಂದು ಅವಳು ತಿಳಿದಿದ್ದಳು. ಆದರೆ ಹಾಗೆ ಮಾಡುವದು ಎಷ್ಟು ಕಠಿಣವೆಂಬುದು ಅವಳಿಗೀಗ ತಿಳಿಯಿತು. ಬಂದು ಹದಿನೈದು ದಿನಗಳಾಗಿದ್ದರೂ ಕೆಲವೇ ದಿನಗಳ ಮಟ್ಟಿಗೆ ಶಕುಂತಲೆ ತವರುಮನೆಗೆ ಬಂದಿದ್ದಾಳೆಂದು ಎಲ್ಲರ ಕಲ್ಪನೆಯಾಗಿತ್ತು: ಶಕುಂತಲೆಯೂ ತಾನು ಬಂದ ಕಾರಣವನ್ನು ಹೇಳುವ ಪ್ರಸಂಗವನ್ನು ಮುಂದೆ ಮುಂದೆ ನೂಕುತ್ತಿದ್ದಳು.

ಆದರೆ ಆ ಪ್ರಸಂಗ ಬಂತು, ಶಕುಂತಲೆ ಕನಸುಮನಸಿನಲ್ಲಿಯೂ ನೆನೆಸದಿದ್ದಾಗ! ಆಗಸ್ಟ ಹದಿನೈದನೆಯ ತಾರೀಖಿನಂದು ಮಹಾದೇವಭಾಯಿ ದೇಸಾಯಿಯವರ ಪುಣೆಯ ಆಗಾಖಾನ ಅರಮನೆಯಲ್ಲಿ ಅಕಸ್ಮಾತ್ ನಿಧನ

ಹೊಂದಿದ ವಾರ್ತೆ ವೃತ್ತಪತ್ರಗಳಲ್ಲಿ ಬಂತು; ಅದನ್ನು ಕೇಳಿ ಪ್ರತಿಯೊಬ್ಬ ಭಾರತೀಯನೂ ದುಃಖಪಟ್ಟನು; ಜೊತೆಗೆ ಅವನಿಗೆ ಸಿಟ್ಟು ಬಂತು, ನಾಚಿಕೆ ಯೆನಿಸಿತು. 'ಮಹಾದೇವಭಾಯಿಯವರ ಮರಣದಿಂದ ಗಾಂಧೀಜಿಯವರಿಗೆ ಎಂತಹ ದುಃಖವಾಗಿರಬೇಕು? ಪ್ರತಿಯೊಬ್ಬರೂ ಕಲ್ಪನೆ ಮಾಡುವವರೇ; ಮಹಾದೇವಭಾಯಿಯಂಥ ದೇಶಭಕ್ತರು ಸೆರೆಮನೆಯಲ್ಲಿ ಸಾಯುವದೆಂದರೆ ಅದು ನಮ್ಮ ದಾಸ್ಯದ ಪ್ರತೀಕವಲ್ಲವೇ?' ಈ ಸುದ್ದಿಯಿಂದ ದೇಶವೇ ತಳಮಳಿಸಿತು.

ವೃತ್ತಪತ್ರವನ್ನು ಕೈಯಲ್ಲಿ ಹಿಡಿದೇ ಭಾವೂ ಹೇಳತೊಡಗಿದರು, "ದೇಶದಲ್ಲಿ ಇಂಥ ಸಂಗತಿಗಳೆಲ್ಲ ಸಂಭವಿಸುತ್ತಿರುವಾಗ, ನಾವು ತಿಂದು ಉಂಡು ಸುಖವಾಗಿರುವದೆಂದರೆ ಅದೊಂದು ಬಗೆಯ ದ್ರೋಹವೇ ಎಂದು ನನಗೆನಿಸುತ್ತದೆ. ಬರೀ ಹಣದಿಂದ ಸಹಾಯ ಮಾಡಿಬಿಟ್ಟರೆ, ನಮ್ಮ ಕಾರ್ಯ ಮುಗಿದಂತಾಗಲಿಲ್ಲ. ಹಾಗೆ ಮಾಡುವದು ಕೇವಲ ಪ್ಯೈಗಳ್ಳತನ. ಮಹಾದೇವಭಾಯಿಯವರ ದೈವದಲ್ಲಿ ಸಾಯಲೇಬೇಕೆಂದಿದ್ದರೆ, ಅವರು ಸೇವಾಗ್ರಾಮದಲ್ಲಿದ್ದರೂ ಇದು ತಪ್ಪುತ್ತಿರಲಿಲ್ಲ; ಆದರೆ ಆ ಸಾವು ಬೇರೆ, ಈ ಸಾವು ಬೇರೆ, ಇದರಲ್ಲಿ ಹೆಚ್ಚಿನ ದುಃಖ ಅವಿತುಕೊಂಡಿದೆ."

ಭಾವೂಸಾಹೇಬರು ಆದಿನ ಊಟವನ್ನೇ ಮಾಡಲಿಲ್ಲ, ಶಕುಂತಲೆಯೂ ಬಿಟ್ಟುಬಿಟ್ಟಳು. ಛಬೂ, ಮಧು ಊಟ ಮಾಡಿ ಶಾಲೆಗೆ ಹೋದವರು ಕೂಡಲೆ ತಿರುಗಿ ಬಂದುಬಿಟ್ಟರು. ಶಾಲೆಯಲ್ಲಿ ಹರತಾಳವನ್ನಾಚರಿಸಿದ್ದರಂತೆ; ಮತ್ತೆ ಅದೆಲ್ಲಿಯೋ ಜಾಹೀರ ಸಭೆಯಾಗಿ ಹತ್ತು ಹದಿನೈದು ವಿದ್ಯಾರ್ಥಿಗಳನ್ನು ಹಿಡಿದಿದ್ದರಂತೆ! ಕೇಳುತ್ತಿದ್ದಂತೆಯೇ ಭಾವೂಸಾಹೇಬರಿಗೆ ಸಿಟ್ಟು ಬಂತು; 'ಕೊಲ್ಹಾಪುರದಲ್ಲಿ ಇದೇನು ನಡೆದಿದೆ?' ಎಂದು ಆಗಸ್ಟ ಹದಿನೈದರಿಂದ ನಡೆದ ಸಂಗತಿಗಳನ್ನೆಲ್ಲ ಶಕುಂತಲೆಯೆದುರು ಬಣ್ಣಿಸಿ ಹೇಳತೊಡಗಿದರು.

ಆ ಸಂಗತಿಗಳನ್ನು ಒಂದೊಂದಾಗಿ ಕೇಳುತ್ತಿದ್ದಂತೆ 'ಹಾಗಾದರೆ ಪದ್ಮಾಕರನು ಈಗೆಲ್ಲಿದ್ದಾನೆ?' ಎಂದು ಕೇಳಬೇಕೆಂದು ಶಕುಂತಲೆಗೆನಿಸಿತು. ಹಾರುಸುದ್ದಿಗಳಿಂದ ಅವಳಿಗೇನೋ ತಿಳಿದಿತ್ತು. ಪದ್ಮಾಕರನು ಈಗೊಂದು ತಿಂಗಳಿನಿಂದ ಅಡಗಿದ್ದಾನೆ' ಎಂದು; ಆದರೂ ಸ್ಪಷ್ಟವಾಗಿ ಗೊತ್ತಿರಲಿಲ್ಲ.

ಪದ್ಮಾಕರನ ಮೇಲೆ ವಾರಂಟು ಹೊರಟಿತ್ತು, ಪೋಲೀಸರು ಅವನ ಶೋಧನೆಯಲ್ಲಿದ್ದರು; ಆದರೆ ಅವನು ಕೈಗೆ ಹತ್ತುವಂತಿರಲಿಲ್ಲ. ಅವನು ಕೊಲ್ಹಾಪುರದ ಗಡಿಯಲ್ಲಿಯೇ ಇದ್ದೂ ಕೈಗೆ ಸಿಗಲಾರ ಎಂದು ಕೆಲವರು ಹೇಳಿದರೆ ಕೆಲವರು ಅವನು ಕೊಲ್ಹಾಪುರದ ಗಡಿಯಲ್ಲಿಯೇ ಇಲ್ಲವೆಂದು ಹೇಳುತ್ತಿದ್ದರು. ಶಕುಂತಲೆಯೊಂದಿಗೆ ಮಾತಾಡುವಾಗ ಭಾವೂಸಾಹೇಬರು ಪದ್ಮಾಕರನ ವಿಷಯವನ್ನು ಬೇಕೆಂದೇ ಬಿಟ್ಟುಕೊಡುತ್ತಿದ್ದರೇನೋ. ಶಕುಂತಲೆಯೂ ಬಂದಾಗಿನಿಂದ ಭಾವೂಸಾಹೇಬರೆದುರು ಆ ವಿಷಯವನ್ನೆತ್ತಿರಲಿಲ್ಲ. ಆದರೆ ಈಗ ಅವಳಿಂದ ತಡೆಯುವದಾಗಲಿಲ್ಲ, ಕೇಳಿಬಿಡಬೇಕೆನಿಸಿತು.

ಅಷ್ಟರಲ್ಲಿ ಪೋಸ್ಟಮನ್ ಬಂದವನೇ ಮೂರು ನಾಲ್ಕು ಪತ್ರಗಳನ್ನು ಭಾವೂಸಾಹೇಬರ ಕೈಗಿತ್ತು ಹೇಳಿದನು, "ಇನ್ನೊಂದು ಮನಿ ಆರ್ಡರ ಇದೆ."

"ನನ್ನದೇ ?" ಭಾವೂ ಕೇಳಿದರು.

ಶಕುಂತಲೆ ಮನಿಯಾರ್ಡರ ಫಾರ್ಮನ್ನು ಕೈಯಲ್ಲಿ ಹಿಡಿದು ಓದ ತೊಡಗಿದಳು, "ಒಂದು ನೂರಾ ಎಂಬತ್ತು ರೂಪಾಯಿ........"

"ಯಾರಿಂದ ಬಂದಿದೆ ? ಬಾಳಾಸಾಹೇಬರು ಕಳಿಸಿದ್ದಾರೆಯೋ ?" ಭಾವೂ ಶಕುಂತಲೆಯನ್ನು ಕೇಳಿದರು.

ಶಕುಂತಲೆ ಉತ್ತರವನ್ನೇ ಕೊಡಲಿಲ್ಲ; ಸುಮ್ಮನಿದ್ದುಬಿಟ್ಟಳು.

ಹುಬ್ಬುಗಂಟಿಕ್ಕಿ ಆ ಫಾರ್ಮನ್ನು ಮತ್ತೆ ಪೋಸ್ಟಮನ್ನನಿಗೆ ಕೊಡುತ್ತ ಆವಳೆಂದಳು, "ತಿರುಗಿ ಕಳಿಸಿ ಬಿಡಿರಿ, ಇದನ್ನು."

ಪೋಸ್ಟಮನ್ ಆಶ್ಚರ್ಯದಿಂದ ಕೇಳಿದ, "ತಿರುಗಿ ಹೋಗಬೇಕೇ? ಇದರ ಮಾಲಕರು ಇದನ್ನು ತೆಗೆದುಕೊಳ್ಳುವದಿಲ್ಲ ಎಂದು ಬರೆಯಬೇಕೇ ಹಾಗಾದರೆ ಇದರ ಮೇಲೆ ?"

ಶಕುಂತಲೆ ಹುಬ್ಬುಗಂಟಿಕ್ಕಿಯೇ ಉತ್ತರ ಕೊಟ್ಟಳು, "ಹೌದು, ಹಾಗೆಯೇ ಬರೆಯಬೇಕು."

ಪೋಸ್ಟಮನ್ ಹೊರಟು ಹೋದನು.

ಶಕುಂತಲೆ ವೃತ್ತಪತ್ರವೊಂದನ್ನೆತ್ತಿ ಮುಖದ ಮುಂದೆ ಹಿಡಿದುಕೊಂಡಳು; ಪೋಸ್ಟಮನ್ ಹೋದನಂತರ ಭಾವೂಸಾಹೇಬರ ಮುಖವನ್ನು

ನೋಡುವವೆಂದರೆ ಅವಳಿಗೆ ಹೇಗೆ ಹೇಗೋ ಅನಿಸಿತು. ಆದರೆ ಎಷ್ಟೊತ್ತು ಅವಳು ಹೀಗೇ ಆ ವೃತ್ತಪತ್ರವನ್ನು ಮುಖದ ಮುಂದೆ ಹಿಡಿದುಕೊಂಡು ಕುಳಿತಿರಬಲ್ಲಳು? ಅವಳು ವೃತ್ತಪತ್ರವನ್ನು ದೂರ ಸರಿಸುತ್ತಲೇ ಭಾವೂ ಕೇಳಿದರು.

"ಶಕೂ, ಇದೇನು? ಬಾಳಾಸಾಹೇಬರೇ ಕಳಿಸಿದ್ದರಲ್ಲವೇ ಮನಿ ಯಾರ್ಡರನ್ನು? ಅದನ್ನೇಕೆ ತಿರುಗಿ ಕಳಿಸಿದಿ?"

ಶಕುಂತಲೆ ಕೆಲಹೊತ್ತು ಏನನ್ನೂ ಮಾತಾಡಲಿಲ್ಲ. ಅವಳ ಹುಬ್ಬು ಗಂಟಿಕ್ಕಿದ ಮುಖ ಇನ್ನೂ ಹಾಗೇ ಇತ್ತು; ಮುಖ ತಗ್ಗಿಸಿ ಸುಮ್ಮನೆ ಕುಳಿತು ಬಿಟ್ಟಿದ್ದಳು.

ಬಾವೂ ಮೆಲ್ಲಗೆ ಅಂದರು, "ತಾಯೀ!"

ಶಕುಂತಲೆ ಮುಖ ಮೇಲೆತ್ತಿ ಅವರೆಡೆಗೆ ನೋಡಿ ಮೆಲ್ಲಗೆ ಹೇಳಿದಳು, "ಭಾವೂ, ಒಂದು ವಿಷಯ ನಿಮಗೆ ಹೇಳುವದಿದೆ; ಅದನ್ನು ಕೇಳಿದರೆ ನಿಮಗೆ ತುಂಬಾ ವ್ಯಸನವಾಗುವದು; ಆದಕ್ಕೆಂದೇ ಇಷ್ಟು ದಿವಸಗಳ ವರೆಗೆ ನಿಮಗೆ ಹೇಳಲಿಲ್ಲ; ಆದರೆ ಒಂದಿಲ್ಲೊಂದು ದಿನ ನಿಮಗೆ ಹೇಳಲೇ ಬೇಕಲ್ಲ........"

ಭಾವೂ ಅವಳನ್ನೇ ದಿಟ್ಟಿಸಿ ನೋಡುತ್ತಿದ್ದರು. ಅವಳೇನು ಹೇಳ ಬಹುದೆಂಬ ಕಲ್ಪನೆಯೇ ಅವರಿಗೆ ಇದ್ದಿರಲಿಲ್ಲ. ಇಲ್ಲಿಯ ವರೆಗೆ ಹೇಳಿದ್ದ ರಿಂದ ಅದೊಂದು ದುಃಖದ ಸಂಗತಿಯಾಗಿರಬೇಕೆಂದು ಅವರು ಊಹಿಸಿ ದರು ಅಷ್ಟೇ; ತಮ್ಮ ಪ್ರೀತಿಯ ಶಕುಂತಲೆಯ ಜೀವನದಲ್ಲಿ ಇಂತಹ ದುಃಖದ ಮುಳ್ಳು ಅದಾವುದು? ಅವರಿಗೆ ಕಲ್ಪನೆಯೇ ಇದ್ದಿರಲಿಲ್ಲ. ಶಕುಂತಲೆಯ ಸುಖದಲ್ಲಿಯೇ ಅವರಿಗೆ ಸುಖ ಕಾಣುತ್ತಿತ್ತು. ಆದರೆ ಇಂದು ಅದು ಸುಳ್ಳಾಗುವದೇ? ಶಕುಂತಲೆ ಹೇಳುವದನ್ನು ಪ್ರಾರಂಭ ಮಾಡುವ ದಕ್ಕೆ ಮೊದಲೇ ಅವರ ಮುಖ ದುಃಖವನ್ನು ಸೂಚಿಸುತ್ತಿತ್ತು.

"ಮತ್ತೆ ಅವರ ಕಡೆಗೆ ಹೋಗುವಂತಿಲ್ಲವೆಂದು ನಿಶ್ಚಯಿಸಿಯೇ ಇಲ್ಲಿ ಬಂದಿದ್ದೇನೆ," ಶಕುಂತಲೆ ತನ್ನ ಕೊನೆಯ ವಾಕ್ಯವನ್ನು ಹೇಳಿ ಸುಮ್ಮನೆ ಕುಳಿತಳು; ಎಷ್ಟೋ ಹೊತ್ತು ಹಾಗೇ ಕುಳಿತಿದ್ದಳು; ಭಾವೂ ಕೂಡ ಸ್ತಬ್ಧ ರಾಗಿ ಕ್ಷಣಹೊತ್ತು ಹಾಗೇ ಕುಳಿತರು. ಬಳಿಕ ತನ್ನಲ್ಲಿ ತಾನೇ ಧೈರ್ಯ

ವನ್ನು ತೆಗೆದುಕೊಂಡು ಶಕುಂತಲೆಯ ಭುಜವನ್ನು ತಟ್ಟುತ್ತ ಅಂದರು.

"ಹೀಗೇನಾದರೂ ಇದ್ದಿರಬಹುದೆಂಬ ಕಲ್ಪನೆ ನನಗೆ ಇದ್ದಿರಲಿಲ್ಲ ಬಿಡು; ನನಗೆನಿಸಿತ್ತು........" ಶಕುಂತಲೆಯೆಂದಳು, "ಭಾವೂ ಈ ವಿಷಯದಲ್ಲಿ ನೀವು ನನ್ನನ್ನು ಎಷ್ಟರ ಮಟ್ಟಿಗೆ ದೋಷಿಯೆಂದು ನಿರ್ಧರಿಸುವಿರಿ? ನನಗೂ ಬಾಳಾಸಾಹೇಬರಿಗೂ ಬಗೆಹರಿಯಲಿಲ್ಲ—ಆದರಲ್ಲಿ ಎಲ್ಲ ದೋಷವೂ ಅವರ ಪಾಲಿಗೇ ಎಂದು ನಾನು ಹೇಳುವದಿಲ್ಲ; ನಾನು ಎಷ್ಟೋ ಸಲ ನನ್ನಷ್ಟಕ್ಕೆ ನಾನೇ ವಿಚಾರ ಮಾಡಿದ್ದೇನೆ—ಪತಿಯು ಮಾಡಿದ್ದೆಲ್ಲ ಯೋಗ್ಯವೆಂದೇ ತಿಳಿದು, ಹೇಳಿದ್ದನ್ನು ಕೇಳುವ ಹೆಂಡಂದಿರಲ್ಲಿ ನಾನೂ ಒಬ್ಬಳಾಗಿದ್ದರೆ, ಈ ಬಗೆಯ ಸಂಘರ್ಷವೇ ಬರುತ್ತಿರಲಿಲ್ಲ. ನಾನು ಹಾಗೆ ಇಲ್ಲದಿರುವದು ಒಂದು ದೃಷ್ಟಿಯಿಂದ ಗುಣ, ಇನ್ನೊಂದು ದೃಷ್ಟಿಯಿಂದ ದೋಷ; ನನ್ನ ಸ್ವಭಾವದಲ್ಲಿಯ ಈ ದೋಷವೊಂದನ್ನು ಬಿಟ್ಟರೆ, ಬಾಳಾಸಾಹೇಬರ ಬಗ್ಗೆ ನಾನು ಯಾವ ಅಪರಾಧವನ್ನೂ ಮಾಡಿಲ್ಲ. ನನ್ನ ಮತವನ್ನು ಅವರೂ ಪೂರ್ಣವಾಗಿ ಅಲ್ಲಗಳೆಯಬಾರದೆಂಬುದು ನನ್ನ ಅಪೇಕ್ಷೆ. ಈ ನನ್ನ ಅಪೇಕ್ಷೆಯೂ ನ್ಯಾಯವಲ್ಲವೇ? ಅವರ ವರ್ತನವನ್ನು ನೋಡಿದರೆ, ನನ್ನ ಸ್ವಾಭಿಮಾನವನ್ನು ಲೆಕ್ಕಿಸಲೇ ಬಾರದೆಂಬ ಹಟವಿದ್ದಂತೆ ತೋರುತ್ತದೆ. ಇದರಿಂದ ನನಗಾವ ಸುಖ ತಾನೇ ದೊರೆತೀತು........? ಅದಕ್ಕೆಂದೇ ನಾನೆಲ್ಲವನ್ನೂ ಬಿಟ್ಟು ಇಲ್ಲಿ ಬಂದದ್ದು. ಭಾವೂ, ನಾನಿಲ್ಲಿ ತಪ್ಪಿದೆನೇ? ಒಂದು ವೇಳೆ ತಪ್ಪಿದ್ದರೂ ನೀವು ಕ್ಷಮಿಸಿ ಸಲಹುವಿರಲ್ಲವೇ ........?"

ಶಕುಂತಲೆ ಗಟ್ಟಿ ಮನಸ್ಸಿನಿಂದ ಹೇಳುತ್ತಿದ್ದಳು, ಹೃದಯದ ದುಃಖವು ಹೊರಸೂಸಲು ಅವಳು ಒಪ್ಪಿಗೆಯನ್ನು ಕೊಟ್ಟಿರಲಿಲ್ಲ. ಅವಳ ಚಿತ್ತ ಇದುವರೆಗೆ ಶಾಂತವಾಗಿಯೇ ಇತ್ತು. ಆದರೆ ಈ ಕೊನೆಯ ಪ್ರಶ್ನೆಯನ್ನು ಕೇಳುವಾಗ ಮೇಲೆ ಮುಖವೆತ್ತಿ ಭಾವೂಸಾಹೇಬರ ಕಡೆಗೆ ನೋಡಿದಳು. ಅವಳಿಂದ ತಡೆಯುವದಾಗಲಿಲ್ಲ. ಕಣ್ಣೀರು ದಳದಳ ಹರಿಯತೊಡಗಿದವು. ಭಾವೂ ಅವಳ ಭುಜವನ್ನು ತಟ್ಟಿ, ತಮ್ಮ ಬಳಿ ಅವಳನ್ನು ಎಳೆದುಕೊಂಡು ಅಂದರು, "ಶಕೂ, ಇದೇನು ಕೇಳುತ್ತೀಯಮ್ಮಾ?" ಅವರ ಬಾಯಿಂದ ಹೆಚ್ಚಿಗೆ ಮಾತುಗಳು ಹೊರಡಲಿಲ್ಲ. ಆ ಮಾತನ್ನು ಕೇಳಿ ಶಕುಂತಲೆಯ ಕಣ್ಣೀರಿಗೆ ಪೂರವೇ ಬಂತು; ದುಃಖ ಉಕ್ಕಿಬರಲು ಅವರ ಭುಜದ ಮೇಲೆ ತನ್ನ ತಲೆಯನ್ನಿರಿಸಿದಳು.

## ೯

ಮುಂಬಯಿ ಬಿಟ್ಟು ಹೊರಡುವಾಗ ಶಕುಂತಲೆ ತನ್ನ ಮನಃಸ್ಥಿತಿಯ ಪೃಥಕ್ಕರಣವನ್ನು ಪೂರ್ಣವಾಗಿ ಮಾಡಿರಲಿಲ್ಲ. ತಾನು ಕೈಕೊಳ್ಳಬೇಕೆಂದೆಣಿಸಿದ್ದ ಉಪಾಯದ ಪರಿಣಾಮವೇನಾಗಬಹುದು ? ಎಂಬುದರ ಬಗ್ಗೆಯೂ ಹೆಚ್ಚು ವಿಚಾರ ಮಾಡಿರಲಿಲ್ಲ. ಭಾವನೆಯ ಭರದಲ್ಲಿ ಮನುಷ್ಯನು ಏನನ್ನೋ ಮಾಡಲು ನಿಶ್ಚಯಿಸಿರುತ್ತಾನೆ. ಅವನ ಈ ನಿಶ್ಚಯ ಕಾರ್ಯರೂಪದಲ್ಲಿ ಬರಲು ವಿಲಂಬವಾದರೆ, ಈ ವಿಲಂಬವೇ ಆ ನಿಶ್ಚಯದ ಸಾಧಕ ಬಾಧಕ ಪ್ರಮಾಣಗಳ ವಿಚಾರ ಎಂದು ಸಾಮಾನ್ಯವಾಗಿ ಅವನು ತಿಳಿದುಬಿಡುತ್ತಾನೆ. ಆದರೆ ವಸ್ತುಸ್ಥಿತಿ ಹಾಗಿರುವದಿಲ್ಲ. ಅವನು ಕೈಕೊಳ್ಳಬೇಕೆಂದ ಕೆಲಸ ಕಾರ್ಯರೂಪದಲ್ಲಿಳಿಯಲು ಯಾವದೇ ಕಾರಣದಿಂದ ವಿಲಂಬವಾದರೂ ಕೂಡ, ಕೊನೆಗೆ ಇದರ ಪರಿಣಾಮವೇನು ಎಂಬುದು ಮನದಲ್ಲಿ ನಿಶ್ಚಿತವಾಗಿ ಬಿಟ್ಟಿರುತ್ತದೆ. ಕೇವಲ ಈ ನಿಶ್ಚಯದ ಬೆಂಬಲಕ್ಕಾಗಿ ಮನುಷ್ಯನು ಕಾರಣಗಳನ್ನು ಹುಡುಕುತ್ತಿರುತ್ತಾನೆ. ಶಕುಂತಲೆಯ ವಿಷಯದಲ್ಲಾದರೂ ಇದೇ ಪರಿಸ್ಥಿತಿ ನಿರ್ಮಾಣವಾಗಿತ್ತು. ಭಾವೂಸಾಹೇಬರಿಗೂ ತನಗೂ ಬಗೆಹರಿಯುವದಿಲ್ಲ ಎಂದು ಅವಳಿಗೆ ಸಂಪೂರ್ಣ ಮನವರಿಕೆಯಾಗಿಬಿಟ್ಟಿತ್ತು. ಇನ್ನು ಇದಕ್ಕೆ ಉಪಾಯವೇನು ಹಾಗಾದರೆ ? ತಿರುಗಿ ಕೊಲ್ಹಾಪುರಕ್ಕೆ

ಹೋಗುವದೇ ಒಳ್ಳೆಯದು; ಈ ವಿಚಾರದಲ್ಲಿ ಶಕುಂತಲೆ ಅದೆಷ್ಟೋ ವೇಳೆ ಕಳೆದಿದ್ದಳು; ಅವಳ ತಲೆಯಲ್ಲಿ ಮತ್ತೆ ಮತ್ತೆ ಇದೇ ವಿಚಾರ ಸುತ್ತುತ್ತಿತ್ತು. ಬಾಳಾಸಾಹೇಬರೊಡನೆ ಹೊಂದಿಕೊಂಡು ಹೋಗುವದೆಂದರೆ ಇನ್ನುಳಿದ ಸಾಮಾನ್ಯ ಸ್ತ್ರೀಯರಂತೆ ಮುಖದ ಮೇಲೆ ನಗೆ ಇರಿಸಿ, ಒಳಗೆ ಅಪಮಾನ, ಅಸಮಾಧಾನ, ದುಃಖ ಇವುಗಳನ್ನೆಲ್ಲ ಸಹಿಸುತ್ತ ಬದುಕಬೇಕಾಗುವದು. ಇದಕ್ಕಿಂತ ತಾಯಿ ತಂದೆಗಳ ಕಡೆಗೆ ಹೋದದ್ದೇನು ಕೇಡು? ವಿವಾಹಕ್ಕೆ ಮೊದಲು ಇಪ್ಪತ್ತು ವರ್ಷಗಳ ವರೆಗೆ ಅವರು ನನ್ನನ್ನು ಪ್ರೇಮದಿಂದ ಸಲಹಿಲ್ಲವೇ? ಶಕುಂತಲೆಯ ತಲೆಯಲ್ಲಿ ಇದೊಂದೇ ವಿಚಾರ ದೃಢವಾಗುತ್ತ ನಡೆದಿತ್ತು. ಕೊನೆಗೆ ಅದು ಕಾರ್ಯರೂಪದಲ್ಲಿಯೂ ಇಳಿಯಿತು. ಈ ವಿಚಾರಕ್ಕೆ ವಿರೋಧಿಯಾದ ಮತ್ತಾವುದಾದರೂ ಕಲ್ಪನೆ ಅವಳ ತಲೆಯಲ್ಲಿ ಬಂದರೆ, "ಛೀ, ಇದೇನು ಮಾಡಬಲ್ಲದು!" ಎಂದು ಅದನ್ನು ಕೊಡಹಿ ಬಿಡುತ್ತಿದ್ದಳು. ಭಾವೂ ತನ್ನನ್ನು ಇರುವ ವರೆಗೂ ಪ್ರೇಮದಿಂದ ಸಲಹಬಲ್ಲರು; ತಾಯಿ, ತಂದೆ, ತಂಗಿ, ತಮ್ಮಂದಿರ ಪ್ರೇಮಮಯ ಸಹವಾಸದಲ್ಲಿ ತನ್ನ ಅಸಂತೋಷವನ್ನು ಸಹಜವಾಗಿಯೇ ಮರೆತು ಬಿಡಬಹುದೆಂಬ ಕಲ್ಪನೆ ಅವಳದಾಗಿತ್ತು. ಆದಕ್ಕೆಂದೇ ಅವಳು ತನ್ನ ಸಂಸಾರವನ್ನು ಬಿಟ್ಟುಕೊಟ್ಟು ಕೊಲ್ಹಾಪುರಕ್ಕೆ ಹೊರಟುಬಂದಿದ್ದಳು.

ಅಲ್ಲಿ ಬಂದ ಮೇಲೆ, ಅವಳ ಆಶೆಯ ಮೇರೆಗೆ ತಂದೆ ತಾಯಿಗಳ ವಾತ್ಸಲ್ಯ ಅಚ್ಚುಳಿಯದ ರೂಪದಲ್ಲಿ ಅವಳಿಗೆ ದೊರೆತಿತು. ಇದರ ಮಧ್ಯದಲ್ಲಿ ತನ್ನ ಅಸಂತೋಷವನ್ನು ಸಹಜವಾಗಿಯೇ ಮರೆಯಬಹುದೆಂಬ ಅವಳ ಹಂಬಲು ಮಾತ್ರ ಸಫಲವಾಗಲಿಲ್ಲ. ತವರುಮನೆಗೆ ಬಂದು ಒಂದು ತಿಂಗಳಾದರೂ ಅವಳು ತನ್ನ ಅಸಂತೋಷವನ್ನು ಮರೆಯುವದು ಸಾಧ್ಯವಾಗದಾಯಿತು. ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವ ವರೆಗೆ ಅವಳು ತನ್ನ ವೇಳೆಯನ್ನು ತಾಯಿ ತಂದೆ, ತಂಗಿ ತಮ್ಮಂದಿರ ಮಧ್ಯದಲ್ಲಿ ಆನಂದದಿಂದ ಕಳೆದರೂ, ಮಲಗುವ ವೇಳೆಗೆ ಅಸಂತೋಷ ಮತ್ತೆ ಅವಳನ್ನು ಮುತ್ತುತ್ತಿತ್ತು. ನಿದ್ರೆಯಲ್ಲಿ ನಡುವೆ ಎಚ್ಚರವಾದರೆ ಮತ್ತೆ ಅದೇ ಚಿಂತೆ; ಅಸಂತೋಷ ಅವಳ ಮನದಲ್ಲಿ ಆಳವಾಗಿ ಬೇರೂರಿದಂತೆ ಭಾಸವಾಗುತ್ತಿತ್ತು. ಈ ಅಸಂತೋಷ ಎಂತಹದು, ಇದರ ಸ್ವರೂಪವೇನು ಎಂದು ಯೋಚಿಸುತ್ತ

ಅವಳು ಎಷ್ಟೋ ವೇಳೆಯನ್ನು ಎವೆಯಿಕ್ಕದೆ ಹಾಗೇ ಕಳೆಯುತ್ತಿದ್ದಳು.

ಅದೇಕೋ! ಮತ್ತೆ ಮತ್ತೆ ಅವಳಿಗೆ ಅನಿಸುತ್ತಿತ್ತು, 'ಈ ಮನೆ ನನ್ನದಲ್ಲ ಽ?' ಎಂದು. 'ಹಾಗಲ್ಲ, ಇದು ನನ್ನದೇ ಮನೆ' ಎಂದು ತನ್ನ ಮನಸ್ಸಿಗೆ ಎಷ್ಟು ತಿಳಿಹೇಳಿದರೂ, ಅದು ಒಪ್ಪುತ್ತಿರಲಿಲ್ಲ. "ವಿವಾಹಕ್ಕಿಂತ ಮೊದಲು ನಾನು ಇಲ್ಲಿಯೇ ಇದ್ದಿರಲಿಲ್ಲವೇ? ಈ ಮನೆಯ ಜನರೆಲ್ಲ ನನ್ನನ್ನು ಇಷ್ಟು ಪ್ರೀತಿಯಿಂದ ಕಾಣುತ್ತಾರೆ; ಅಂದಮೇಲೂ ಈ ಮನೆ ನನ್ನದಾಗಲಾರದೇ? ವಿವಾಹವಾಗದೆ ಉಳಿದಿದ್ದರೆ, ಈ ಮನೆ ನನ್ನದೇ ಆಗುತ್ತಿರಲಿಲ್ಲವೇ?" ಆದರೂ ಅವಳ ಮನಸ್ಸು ಒಪ್ಪುತ್ತಿರಲಿಲ್ಲ. ಮನೆಯಲ್ಲಿ ದಿನಾಲು ಹಬ್ಬ, ಹುಣ್ಣಿಮೆ, ಉತ್ಸಾಹ; ಶಕುಂತಲೆ ಬಂದದ್ದರಿಂದ ಇನ್ನೂ ಹೆಚ್ಚು; ಎಲ್ಲರೂ ಆನಂದದಲ್ಲಿ ಓಡಾಡುವವರೇ! ಆದರೆ ಶಕುಂತಲೆಗೆ ತಾನು ಮಾತ್ರ ಅದರಿಂದ ದೂರವಿದ್ದಂತೆ ಭಾಸವಾಗುತ್ತದೆ. ಭಾವೂಸಾಹೇಬರು ಏನು ಮಾಡುವದಾದರೂ ಶಕುಂತಲೆಯನ್ನು ಕೇಳದೆ ಮಾಡುತ್ತಿರಲಿಲ್ಲ; ಹಾತಕಣಂಗಲೆಯ ನಾನಾಸಾಹೇಬರು 'ಹತ್ತು ಹದಿನೈದು ಸಾವಿರದಲ್ಲಿ ಒಂದು ಸಣ್ಣ ಬಂಗಲೆ ಕಟ್ಟಿಸಬಾರದೇ?' ಎಂದು ಭಾವೂಸಾಹೇಬರಿಗೆ ಗಂಟುಬಿದ್ದುಬಿಟ್ಟಿದ್ದರು; ಭಾವೂಸಾಹೇಬರು ಅದೇ ವಿಚಾರದಲ್ಲಿದ್ದರು. ಆದರೆ ಶಕುಂತಲೆಯೇ ಸ್ಥಳವನ್ನಾರಿಸಬೇಕು; ಪ್ಲ್ಯಾನ್ ಸಿದ್ಧಗೊಳಿಸಬೇಕು. ಅದನ್ನು ಕಂಡು ಶಕುಂತಲೆಗೆ ಸಂತೋಷವಾಗುತ್ತಿತ್ತು; ಭಾವೂಸಾಹೇಬರೊಡನೆ ಉತ್ಸಾಹದಿಂದ ಪ್ಲ್ಯಾನ್ ಸಿದ್ಧಗೊಳಿಸುವದರಲ್ಲಿ ಭಾಗ ವಹಿಸುತ್ತಿದ್ದಳು. ಆದರೆ ಅದೇಕೋ, ಒಬ್ಬಳೇ ಹಾಸಿಗೆಯ ಮೇಲೆ ಮಲಗಿದಳೆಂದರೆ ಮತ್ತೆ ಅಸಂತೋಷ ಉಕ್ಕಿಬರುತ್ತಿತ್ತು. 'ಈ ಬಂಗಲೆಯನ್ನು ತೆಗೆದುಕೊಂಡು ನನಗೇನು ಮಾಡುವದಿದೆ? ಇದು ನನ್ನ ಮನೆಯೇ? ಸಂಸಾರವೇ?'

ಈ ಅಸಂತೋಷ ವಿವೇಕ ಬುದ್ಧಿಯಿಂದ ಎಷ್ಟು ಹತ್ತಿಕ್ಕಿದರೂ ದೂರವಾಗುತ್ತಿರಲಿಲ್ಲ. ತವರುಮನೆಯ ಜನರ ಪ್ರೀತಿವಾತ್ಸಲ್ಯ, ಸ್ನೇಹಿತರ ಸಹವಾಸ, ಉದ್ಯೋಗದಲ್ಲಿಯ ತಲ್ಲೀನತೆ, ಇವಾವೂ ಸ್ತ್ರೀಯನ್ನು ಅಸಂತೋಷದಿಂದ ದೂರವಾಗಿರಿಸಲಾರವೇ? ಪುರುಷನೊಡನೆ ಸಂಸಾರ ಹೂಡಿ ಸುಖ ಪಡೆಯಬೇಕೆಂಬ ಆಶೆ ಅವಳಲ್ಲಿ ಮತ್ತೂ ಹುದುಕಿಕೊಂಡಿರಬೇಕೆಂದರೆ! ಈ

ಆಶೆ ಹಾಗಾದರೆ ಅವಳ ಸ್ವಭಾವದಲ್ಲಿಯ ಮೂಲಭೂತ ಪ್ರವೃತ್ತಿಯೇ ? ಸ್ತ್ರೀ ಎಷ್ಟೊಂದು ಸುಶಿಕ್ಷಿತಳಾಗಿದ್ದರೂ, ಸ್ವತಂತ್ರವಿಚಾರವುಳ್ಳವಳಾಗಿದ್ದರೂ ಈ ಆಶೆಯನ್ನು ಹತ್ತಿಕ್ಕುವದು ಸಾಧ್ಯವಿಲ್ಲವೇ ?

ಶಕುಂತಲೆಗೆ ರಾತ್ರಿ ಕೂಡ ನಿದ್ರೆ ಬಾರದಂತೆ ನೋಡಿಕೊಳ್ಳಲು ಈ ಅಸಂತೋಷದ ಜೊತೆಗೆ ಇನ್ನೂ ಒಂದು ಸಹಾಯಕವಾಗಿತ್ತು. ಅದು ಹಗಲಿನಲ್ಲಿಯೂ ಕಾಡುತ್ತಿತ್ತು. ಏನು ಮಾಡಿದರೂ ತನ್ನ ವೇಳೆ ಹೋಗದಲ್ಲ ಎಂದು ಬೇಸರ, ಚಿಂತೆ ಅವಳಿಗೆ ! ಪ್ರತಿದಿನ ಸೂರ್ಯೋದಯದೊಂದಿಗೆ ಇನ್ನು ಇಪ್ಪತ್ತುನಾಲ್ಕು ಗಂಟೆ ಕಳೆದರೆ ಒಂದು ದಿನ ಕಡಿಮೆಯಾಯಿತಲ್ಲ ಎಂದು ಲೆಕ್ಕಹಾಕುವಳು. ಮುಂಬಯಿಯಿಂದ ಹೊರಟುಬರುವಾಗ ಇಷ್ಟೊಂದು ಬೇಸರ ಬರಬಹುದೆಂದು ಅವಳೆಣಿಸಿರಲಿಲ್ಲ. ಕೇವಲ ಕೊಲ್ಹಾಪುರಕ್ಕೆ ಹೋಗುವದೆಂದರೆ ಹೋಗುವದು,—ಅಲ್ಲಿ ಹೋಗಿ ಏನು ಮಾಡಬೇಕೆಂಬುದನ್ನು ಅವಳು ವಿಚಾರ ಮಾಡಿರಲಿಲ್ಲ. ಆದರೆ ಅಲ್ಲಿ ಬಂದ ಮೇಲೆ, ಮೊದಲಿನ ಹತ್ತು ಹದಿನೈದು ದಿನಗಳೇನೋ ಅತ್ತಿತ್ತಲಿನ ಸುದ್ದಿ ಮಾತನಾಡುವದರಲ್ಲಿ ಕಳೆದುಹೋದವು. ಆದರೆ ಮುಂದೆ ? ' ಒಂದೊಂದು ದಿನವೂ ವ್ಯರ್ಥವಾಗಿ ಕಳೆದಂತೆ, ನನ್ನ ಉಳಿದ ಆಯುಷ್ಯವೆಲ್ಲ ಇದೇ ರೀತಿ ವ್ಯರ್ಥವಾಗಿ ಅಸಮಾಧಾನದಲ್ಲಿ ಹೋಗುವದೇ ? ' ಎಂಬ ಚಿಂತೆ ಶಕುಂತಲೆಗೆ ! ವಿವಾಹಕ್ಕೆ ಮೊದಲು ಸಮಯವೆಲ್ಲ ಅಭ್ಯಾಸದಲ್ಲಿ ಹೋಗಿತ್ತು. ಮುಂದೆ ಕೆಲ ಸಮಯವು ಪದ್ಮಾಕರನ ಪ್ರೇಮವನ್ನು ದೊರಕಿಸುವದಕ್ಕಾಗಿಯೂ ಹೋಗಿತ್ತು; ಆದರೆ ಇಂದು ಅವಳಿಗೇನಿದೆ ? ಯಾತಕ್ಕಾಗಿ ಅವಳು ಹೋರಾಡಬೇಕು ? ಯಾವ ಉಜ್ವಲ ಭವಿತವ್ಯದ ಆಶೆಯಿಂದ ಅವಳು ಸವಿಗನಸು ಕಾಣುತ್ತ ನಿದ್ರಿಸಿ ಬೆಳಗಿನಲ್ಲಿ ಎಚ್ಚರಾಗಬೇಕಾಗಿತ್ತು ?

" ನಾನಿನ್ನು ಮತ್ತೆ ಮುಂಬಯಿಗೆ ಹೋಗುವದಿಲ್ಲ " ಎಂದು ಅವಳು ಸ್ಪಷ್ಟವಾಗಿ ಹೇಳಿಬಿಟ್ಟ ನಾಲ್ಕಾರು ದಿವಸಗಳಲ್ಲಿ, ಭಾವೂಸಾಹೇಬರು ಬೆಳಗಾವಿಗೆ ಹೋಗಬೇಕಾದ ಪ್ರಸಂಗ ಬಂತು. ಅಲ್ಲಿಯ ಕಾರಖಾನೆಯ ಕೆಲಸವನ್ನು ಇನ್ನೂ ಹೆಚ್ಚು ದಿನ ಮುಂದೂಡುವದು ಅವರಿಗೆ ಸಾಧ್ಯವಿರಲಿಲ್ಲ. ಅಲ್ಲದೆ ಶಕುಂತಲೆ ಮುಂಬಯಿಗೆ ಹೋಗುವ ವರೆಗೂ ಈ ಉಳಿದ ಕಾರ್ಯಗಳನ್ನೆಲ್ಲ ಬದಿಗಿಟ್ಟುಬಿಡಬೇಕೆಂಬ ಭಾವೂಸಾಹೇಬರ ಇಚ್ಛೆಯೂ ಇಂದು ಅರ್ಥ

ಪೂರ್ಣವಾಗಿರಲಿಲ್ಲ. 'ನೀವು ಬೆಳಗಾವಿಗೆ ಹೋಗಿಯೇ ಬರ್ರಿ' ಎಂದು ಶಕುಂತಲೆಯೇ ಅವರನ್ನು ಆಗ್ರಹದಿಂದ ಕಳಿಸಿಕೊಟ್ಟಳು. ಆದರೆ ಅವರು ಹೋದಂದಿನಿಂದ ಶಕುಂತಲೆಗೆ ಮಾತ್ರ ಬಹಳ ಬೇಸರವಾಗತೊಡಗಿತು. 'ನನ್ನ ಸಂಸಾರ ನೌಕೆಯ ಚುಕ್ಕಾಣಿಯನ್ನೇ ತೆಗೆದೊಗೆದಿದ್ದೇನೆ. ಇನ್ನು ದಿನ ರಾತ್ರಿಗಳ ಪ್ರವಾಹದೊಂದಿಗೆ ಹೀಗೆ ನಾನು ಸಾಗಬೇಕಾಯಿತೇ ?' ಎಂಬ ವಿಚಾರ ಅವಳಿಗೆ ಅಸಹ್ಯವಾಯಿತು. ಮನವನ್ನು ಯಾವ ಉದ್ಯೋಗ ದಲ್ಲಾದರೂ ತೊಡಗಿಸದಿದ್ದರೆ ಅಸಂತೋಷ, ಅತೃಪ್ತಿಗಳು ಅದನ್ನು ತಿಕ್ಕಿ ಮುಕ್ಕುವವೆಂಬ ಅಂಜಿಕೆಯಿಂದ, ಒಂದು ಒಳ್ಳೇ ಇಂಗ್ಲೀಷ ಪುಸ್ತಕವನ್ನು ಮರಾಠಿಯಲ್ಲಿ ಭಾಷಾಂತರಿಸಬೇಕೆಂದು ಅವಳು ನಿಶ್ಚಯಿಸಿದಳು. ಓದುವ ಚಟವೇನೋ ಅವಳಿಗೆ ಚಿಕ್ಕಂದಿನಿಂದಲೇ ಇತ್ತು. ಆದರೆ ಭಾಷಣದ ವಿಷಯ ದಲ್ಲಿ ಅವಳು ತನ್ನ ಸೋಲನ್ನೊಪ್ಪಿದಂತೆ ಲೇಖನದ ವಿಷಯದಲ್ಲಿಯೂ ಒಪ್ಪಿ ಬಿಟ್ಟಿದ್ದಳು; ಬರೆಯುವ ಪ್ರಯತ್ನವನ್ನೇ ಮಾಡಿರಲಿಲ್ಲ. ಅವಳು ಮುಂಬಯಿ ಬಿಟ್ಟು ಕೊಲ್ಹಾಪುರಕ್ಕೆ ಬಂದ ಮೇಲೆ ಅವಳ ತಂದೆ ಓದುವದಕ್ಕಾಗಿ ಅವಳಿಗೆ ಕೆಲವೊಂದು ಪುಸ್ತಕಗಳನ್ನು ಕೊಟ್ಟಿದ್ದರು; ಮನಕ್ಕೇನಾದರೂ ಉದ್ಯೋಗ ವನ್ನು ಹಚ್ಚಬೇಕಲ್ಲ ಎಂದು, ಅದರಲ್ಲಿಯೇ ತನಗೆ ಮೆಚ್ಚಿಕೆಯಾದ ಒಂದು ಪುಸ್ತಕವನ್ನು ಭಾಷಾಂತರಕ್ಕಾಗಿ ಎತ್ತಿಕೊಂಡಳು. ಅದೇ ರಶಿಯಾದಲ್ಲಿಯ ಕ್ರಾಂತಿಯ ಹತ್ತು ದಿನಗಳ ವರ್ಣನೆ; 'ಜಾನ್ ರೀಡ'ರು ಬರೆದ "Ten days that shoot the world" ಎನ್ನುವ ಪುಸ್ತಕ !

ಒಂದು ದಿನ ಮುಂಜಾನೆ ಶಕುಂತಲೆ ತನ್ನ ಈ ಕೆಲಸದಲ್ಲಿ ತಲ್ಲೀನಳಾಗಿ ದ್ದಳು; ಅದಾರೋ ಹೊರಗಿನಿಂದ ಬಾಗಿಲು ಬಡೆದ ಸದ್ದಾಯಿತು. 'ಬಂದೆ ಎಂದು ಹೇಳಿದವಳೇ ತನ್ನ ಕೆಲಸವನ್ನು ಅಲ್ಲಿಗೇ ಬಿಟ್ಟು ಬಾಗಿಲಿಗೆ ಬಂದಳು. 'ಯಾರವರು ?' ಬಾಗಿಲು ತೆರೆಯುತ್ತಲೇ ಶಕುಂತಲೆ ಕೇಳಿದಳು.

ಇಪ್ಪತ್ತು ಇಪ್ಪತ್ತೈದು ವಯಸ್ಸಿನ ಯುವಕನೊಬ್ಬನು ಹೊರಗೆ ನಿಂತಿ ದ್ದನು; ಶಕುಂತಲೆ ಬಾಗಿಲು ತೆರೆಯುವದೇ ತಡ, ತನ್ನನ್ನು ಯಾರಾದರೂ ನೋಡುವರೋ ಏನೋ ಎಂದು ಅತ್ತಿತ್ತ ನೋಡುತ್ತ ಬಾಗಿಲಿಗೆ ಮರೆಯಾ ದನು; ಒಳಗೆ ಬಂದು ಅವನು ಬಾಗಿಲಿಕ್ಕಿದ ಮೇಲೆ ಶಕುಂತಲೆಗೆ ಅವನ ಶಂಕೆ ದೃಢವಾಯಿತು. ಅವಳು ಅವನನ್ನು ದಿಟ್ಟಿಸಿ ನೋಡಿದಳು. ಶುಭ್ರ

ವಾದ ಖಾದೀ ವೇಷ; ಮುಖವನ್ನು ದಿಟ್ಟಿಸಿ ನೋಡಿದಾಗ ಎಲ್ಲಿಯೋ ನೋಡಿದ ನೆನಪು! ತನ್ನ ಗುರುತು ಅವಳಿಗೂ ಹತ್ತಿತೇನೋ ಎಂದು ಮುಖ ದಲ್ಲಿ ಮೂಡಿದ ಮುಗುಳ್ನಗೆ! ಆದರೆ ಶಕುಂತಲೆಗೆ ಅವನ ಗುರುತು ಹತ್ತ ಲಿಲ್ಲ; ಮುಖದಲ್ಲಿ ನಗೆಯೂ ಮಿನುಗಲಿಲ್ಲ. ಅದನ್ನು ಕಂಡು ಅವನ ಮುಖ ದಲ್ಲಿ ಮೂಡಿದ ಹಾಸ್ಯವೂ ಮಾಯವಾಯಿತು.

ಶಕುಂತಲೆ ಕೇಳಿದಳು "ಯಾರು ಬೇಕಾಗಿತ್ತು ನಿಮಗೆ?"

"ಭಾವೂ ಇದ್ದಾರಲ್ಲವೇ?" ಅವನು ಕೇಳಿದನು.

"ಇಲ್ಲವಲ್ಲ!"

"ಎಲ್ಲಿ ಹೋಗಿದ್ದಾರೆ ಹಾಗಾದರೆ?"

"ಬೆಳಗಾಂವಿಗೆ."

"ಹೀಗೋ!"

ಭಾವೂಸಾಹೇಬರ ಕಡೆಗೆ ಬಹಳ ಮಹತ್ವದ ಕೆಲಸವಿದ್ದು, ಅವರನ್ನು ಕಾಣದ್ದಕ್ಕೆ ನಿರಾಶೆಯಾದಂತೆ ಅವನ ಧ್ವನಿಯಿಂದ ಭಾಸವಾಗುತ್ತಿತ್ತು.

ಶಕುಂತಲೆ ಮತ್ತೆ ಹೇಳಿದಳು "ಕೆಲಸವೇನೆಂಬುದನ್ನು ನನಗೆ ಹೇಳ ಬಹುದೇನು?"

ಅವಳ ಪ್ರಶ್ನೆಯ ಕಡೆಗೆ ಆ ಯುವಕನ ಲಕ್ಷ್ಯವೇ ಇದ್ದಂತೆ ಕಾಣಲಿಲ್ಲ; ಕ್ಷಣಹೊತ್ತು ವಿಚಾರ ಮಾಡಿದಂತೆ ಮಾಡಿ ಅವಳಿಗೆಂದನು, "ಭಾವೂ ಸಾಹೇಬರನ್ನೇ ಕಾಣಬೇಕಾಗಿತ್ತು; ಅವರಿಗೆ ಒಂದು ಮಹತ್ವದ ಪತ್ರವನ್ನು ಕೊಡಬೇಕಾಗಿತ್ತು."

"ಓಹೋ, ಆದರೆ ನೀವೇನು ಇಷ್ಟೊಂದು ನಿರಾಶರಾಗುವ ಕಾರಣ ವಿಲ್ಲ, ಭಾವೂ ಇಂದು ರಾತ್ರಿ ಬೆಳಗಾವಿಯಿಂದ ಬರುವವರೇ ಇದ್ದಾರೆ. ಒಂದು ವೇಳೆ ಅವರು ಬರದಿದ್ದರೂ ಮಧ್ಯಾಹ್ನಕ್ಕೆ ಅವರ ಪತ್ರವಾದರೂ ಬಂದೇ ಬರುತ್ತದೆ. ಅದರಲ್ಲಿ ಬರುವ ಬಗ್ಗೆ ಬರೆಯೇ ಇರುತ್ತಾರೆ. ಪತ್ರ ಕ್ಕಿಂತ ನನಗೆನಿಸುತ್ತದೆ, ಅವರು ಬರುವ ಸಂಭವವೇ ಹೆಚ್ಚು. ನಿಮಗೆ ರಾತ್ರಿ ಬರಲು ಸಾಧ್ಯವಾದರೆ ಬರಬಹುದು."

"ಸಾಧ್ಯವಾದರೆ ಯಾಕೆ? ಬರಲೇ ಬೇಕಾಗಿದೆ; ಎಂಟು, ಎಂಟೂವರೆ ಸುಮಾರಿಗೆ ಬರಲೇ ಹಾಗಾದರೆ?"

" ಹಾಂ, ಆಗ ಬರಬಹುದು."

ಆ ಯುವಕನು ಹೊರಡಲನುವಾಗಿ ಬಾಗಿಲು ತೆರೆದನು, ಅಷ್ಟರಲ್ಲಿ ಏನು ನೆನಪಾಯಿತೋ ಮತ್ತೆ ಒಳಬಂದವನೇ ಕೇಳಿದನು, " ನನ್ನ ಗುರುತು ಹತ್ತಲಿಲ್ಲವೇ ನಿಮಗೆ ? "

ಶಕುಂತಲೆ ಕೊಂಚ ನಕ್ಕು, ಇಲ್ಲವೆಂದು ಗೋಣು ಅಲ್ಲಾಡಿಸಿದಳು. ಕುತೂಹಲದಿಂದ ತಾನೇ ಕೇಳಿದಳು " ಯಾರು ? "

" ರಾತ್ರಿ ಬಂದಾಗ ಹೇಳುವೆ " ಎಂದು ನಗುತ್ತ ಅವನು ಹೊರಟು ಹೋದನು. ತನ್ನನ್ನು ಯಾರಾದರೂ ನೋಡುವರೋ ಏನೋ ಎಂಬ ಅಂಜಿಕೆಯಿಂದ ಅವನ ಕಾಲುಗಳು ದಾರಿಗುಂಟ ಓಡುತ್ತಲೇ ಇದ್ದವು. ಎಡ ಕ್ಕಿದ್ದ ಒಂದು ಸಣ್ಣ ರಸ್ತೆಯಲ್ಲಿ ಹೊರಗೆ ಅವನು ಕಾಣದಂತಾದ ಕೂಡಲೆ ಶಕುಂತಲೆ ಬಾಗಿಲನ್ನಿಕ್ಕಿ ಮತ್ತೆ ತನ್ನ ಕೋಣೆಗೆ ಬಂದಳು. ಕೈಯಲ್ಲಿ ಬರೆ ಯಲು ಸಿದ್ಧವಾದ ಪೆನ್ ಹಿಡಿದು ಕುಳಿತವಳು, ಕುರ್ಚಿಯಲ್ಲಿ ಹಾಗೇ ಕುಳಿತು ಬಿಟ್ಟಳು. " ಈಗ ಬಂದ ಯುವಕನು ಯಾರಿದ್ದಿರಬಹುದು ? ಅವನು ಅಷ್ಟೇಕೆ ಗಾಬರಿಯಾಗಿದ್ದ ? ಭಾವೂಸಾಹೇಬರ ಕಡೆಗೆ ಅವನ ಕೆಲಸ ವೇನು ? " ಇವೇ ವಿಚಾರಗಳಲ್ಲಿಯೇ ಅವಳ ಮನಸ್ಸು ಲೀನವಾಗಿತ್ತು. ಅವನನ್ನು ಹಿಂದೆ ಎಲ್ಲಿಯೋ ನೋಡಿದ್ದಂತೆ ಭಾಸವಾಗುತ್ತಿತ್ತು. ಆದರೆ ಎಲ್ಲಿ ನೋಡಿದ್ದೆ ? ಅವನ ಹೆಸರೇನು ? ಎಂಬುದು ಮಾತ್ರ ಅವಳ ನೆನಪಿಗೆ ಬರಲೇ ಇಲ್ಲ. ಕೊನೆಗೆ ಆ ವಿಚಾರವನ್ನೇ ಬಿಟ್ಟು ಅವಳು ಮತ್ತೆ ತನ್ನ ಕೆಲಸದಲ್ಲಿ ತೊಡಗಿದಳು. ಪುಸ್ತಕದ ಎರಡನೇ ಪ್ರಕರಣದ ಕೊನೆಯ ಭಾಗ ವನ್ನು ಭಾಷಾಂತರಿಸುತ್ತಿದ್ದಳು.

ಮುಂಬರುವ ಕ್ರಾಂತಿಯ ಸೂಚನೆ ದೇಶದಲ್ಲಿ ನಡೆದಿದ್ದ ಅದೆಷ್ಟೋ ಘಟನೆಗಳಿಂದ ಸೂಚಿತವಾಗುತ್ತಲೇ ಇತ್ತು. ಇದಕ್ಕೆ ವಿರುದ್ಧವಾಗಿ ' ಎಲ್ಲಿಯ ಕ್ರಾಂತಿ ? ' ' ಎಲ್ಲಿಯ ಸುಧಾರಣೆ ? ' ಎಂದು ಮಲಗಿದ ಜನರೂ ಅಲ್ಲಲ್ಲಿ ಕಂಡುಬರುತ್ತಿದ್ದರು. ' ಪೆಟ್ರೋಗ್ರಾಡ ' ನಗರದ ದೃಶ್ಯವೇ ಎಷ್ಟೊಂದು ವಿಧವಾಗಿ ವಿಚಿತ್ರವಾಗುತ್ತಿತ್ತು ! ದೊಡ್ಡ ದೊಡ್ಡ ಕಾರಖಾನೆ ಗಳಲ್ಲಿ, ಆಯುಧ, ಬಂದೂಕುಗಳ ರಾಶಿಯೇ ಒಟ್ಟಲ್ಪಟ್ಟಿರುತ್ತಿದ್ದವು; ಆವಾರ ಗಳಲ್ಲಿ ಕೆಂಪು ಸ್ವಯಂಸೇವಕರು, ಯುದ್ಧದ ಶಿಕ್ಷಣವನ್ನು ಪಡೆಯುತ್ತಿದ್ದರು.

ಸೈನಿಕರ ಛಾವಣಿಗಳಲ್ಲಿ, ಅವರವಳೊಳಗೆ ಸಣ್ಣಪುಟ್ಟ ಯುದ್ಧಗಳು ನಡೆದೇ ಇರುತ್ತಿದ್ದವು. ದಾರಿಯಲ್ಲಿ ಸುಮ್ಮನೆ ಹೋಗುವವರನ್ನೂ ಹಿಡಿದು ಸೆರೆ ಮನೆಯಲ್ಲಿರಿಸುವದು ಪದ್ಧತಿಯಾಗಿ ಬಿಟ್ಟಿತ್ತು. ಒಂದು ದಿನ ಬೆಳಗಿನ ಜಾವದಲ್ಲಿ ಜನರೆಲ್ಲರೂ ಸೇರಿ ಸೈನ್ಯದ ಒಬ್ಬ ಸಿಪಾಯಿಯನ್ನು ಹೊಡೆದು ಬಡೆದು ಅವನ ಪ್ರಾಣವನ್ನೇ ಹಿಂಡಿಬಿಟ್ಟರು. ಎಲ್ಲಿ ನೋಡಿದಲ್ಲಿ ಧಾನ್ಯ ಕ್ಕಾಗಿ, ಬ್ರೆಡ್ಡಿಗಾಗಿ, ಹಾಲಿಗಾಗಿ ಸಾಲು ಹಿಡಿದು ನಿಂತಂಥ ಹೆಂಗಸರು, ಮಕ್ಕಳ ಕೂಗಾಟವೇ ಕೂಗಾಟ ಜನ ಒಂದೆಡೆಗೆ ಅನ್ನವಿಲ್ಲದೆ ತಳಮಳಿಸು ತ್ತಿದ್ದರೆ, ಇನ್ನೊಂದೆಡೆಗೆ ನಿರಾಶೆಯಿಂದಲೋ ಏನೋ ಅವರ ವಿಧವಿಧ ವಿಲಾಸ ಉಕ್ಕೇರುತ್ತಿದ್ದಂತೆ ಕಾಣುತ್ತಿತ್ತು ಸಿನೇಮಾ, ನಾಟಕ ಗೃಹಗಳೆಲ್ಲ ಕಿಕ್ಕಿರಿದು ತುಂಬಿರುತ್ತಿದ್ದವು. ಸಂಜೆಯಿಂದ ಮುಂಜಾವಿನ ವರೆಗೆ ಜೂಜಿನ ಆಟ; ಸಹಸ್ರಾರು ರುಬೆಲ್ಸಗಳನ್ನು ತೂರಿಬಿಡುತ್ತಿದ್ದರು. ಸೆರೆಯ ಸಿಪಾಯಿ ಗಳೆಲ್ಲ ಬರಿದಾಗುತ್ತಿದ್ದವು. ವಿಶ್ರಾಂತಿ ಗೃಹಗಳ ಎದುರಿನ ರಸ್ತೆಯಲ್ಲಿ ಬೆಲೆ ಯುಳ್ಳ ಬಟ್ಟೆಗಳನ್ನೂ, ವಿಧವಿಧದ ಒಡವೆಗಳನ್ನೂ ಧರಿಸಿದ ವೇಶ್ಯೆಯರ ಸುಳಿದಾಟ ರಾತ್ರಿಯೆಲ್ಲ ನಡೆದೇ ಇರುತ್ತಿತ್ತು. ಅಲ್ಲಲ್ಲಿ ಕತ್ತಲೆಯ ಮರೆಯಲ್ಲಿ ಕ್ರಾಂತಿಯ ಕಸರತ್ತುಗಳೂ ನಡೆದಿರುತ್ತಿದ್ದವು. ಮತ್ತೆ ಕೆಲವೆಡೆಗಳಲ್ಲಿ ರಾಜ ನಿಷ್ಠರ ವ್ಯೂಹಗಳೂ ರಚಿತವಾಗುತ್ತಿದ್ದವು. ಜರ್ಮನ್ ಗುಪ್ತಚಾರರ ಓಡಾಟ ನಡೆದೇ ಇತ್ತು. ದೇಶದಲ್ಲಿಯ ಮಾಲಿನ ಕಳ್ಳಸಾಗಾಟ ಅಲ್ಲಲ್ಲಿ ನಡೆ ದಿತ್ತು. ಮೋಡ ಮುಸುಕಿದ ಆಕಾಶ; ಆರ್ದ್ರ ಹವೆ, ಮಳೆಬೀಳುವ ಲಕ್ಷಣ. ಕ್ರಾಂತಿಯ ಪ್ರೇರಣೆಯಿಂದ ಪ್ರಕ್ಷುಬ್ಧವಾದ ರಶಿಯಾ ಮುಂದೆ ಮುಂದೆ ನಡೆ ದಿತ್ತು; ಆದರೆ ಯಾವೆಡೆಗೆ ಎಂದು ಹೇಳುವದು ಮಾತ್ರ ಅಸಾಧ್ಯ."

ಶಕುಂತಲೆ ಈ ಪರಿಚ್ಛೇದವನ್ನು ಬರೆಯುತ್ತ ನಡೆದಿದ್ದಳು. ಕ್ರಾಂತಿಯ ಇತಿಹಾಸ ಎಲ್ಲೆಡೆಗೂ ಒಂದೇ ಆಗಿರಬಹುದೇ ? ಅವಳ ತಲೆಯಲ್ಲಿ ವಿಚಾರ ವೆದ್ದಿತ್ತು " ನಾನು ಬರೆಯುವ ಈ ವರ್ಣನೆ ಇಂದಿನ ನಮ್ಮ ಈ ಹಿಂದು ಸ್ಥಾನದ್ದೇ ಏಕಾಗಿರಬಾರದು ? ನಮ್ಮ ಕಣ್ಣೆದುರು ಇದ್ದುದು ಇದೇ ಪರಿ ಸ್ಥಿತಿಹೋ ಅಲ್ಲಯೋ ? "

ಮುಂದಿನ ಪ್ರಕರಣವನ್ನು ಭಾಷಾಂತರಿಸಬೇಕೆಂದು ಅವಳು ಪುಟ ವನ್ನು ಮಗುಚಿದಳು. ನಡುವಿನ ಭಾಗವನ್ನು ಓದತೊಡಗಿದಳು; ಆದರೆ

ಏನಾಶ್ಚರ್ಯ! ಅವಳಿಗೆ ಒಮ್ಮಿಂದೊಮ್ಮೆಲೆ ಆ ತರುಣನ ಹೆಸರು ನೆನಪಾ ಯಿತು; ಅವನನ್ನು ಮೊದಲುಸಲ ಕಂಡದ್ದಾವಾಗ ? ಎಲ್ಲಿ ? ಎಂಬುದೂ ಒಮ್ಮೆಲೇ ಅವಳ ಲಕ್ಷ್ಯಕ್ಕೆ ಬಂತು. ಈಗೊಂದು ತಾಸಿನ ಹಿಂದೆ ಎಷ್ಟು ನೆನೆಸಿ ಕೊಂಡರೂ ನೆನಪಾಗದ್ದು ಈಗೊಮ್ಮೆಲೆ ಹೇಗೆ ನೆನಪಾಯಿತು ? ಮನುಷ್ಯನ ಮನಸ್ಸು ಎಷ್ಟು ವಿಚಿತ್ರವಾಗಿದೆ!" ಅವಳು ತನ್ನಷ್ಟಕ್ಕೆ ತಾನೇ ಕೊಂಚ ನಕ್ಕಳು.

ಆ ತರುಣ, ಶ್ಯಾಮೂ ಭೋಸಲೆ! ಇಂಗ್ಲೀಷ ಐದನೆಯ ಇಯತ್ತೆ ಯಲ್ಲಿದ್ದಾಗಿನ ಮಾತದು! ಹಾತಕಣಂಗಲೆಯಲ್ಲಿ ನಾನಾಸಾಹೇಬರ ಬಾವಿಯ ಹತ್ತರ ಅವಳು ಪದ್ಮಾಕರನನ್ನು ಕಂಡಾಗ, ಅವನೂ ಅವನೊಡ ನಿದ್ದನು. ಆಮೇಲೆಯೂ ಒಂದೆರಡು ಸಲ ಶಕುಂತಲೆ ಅವನನ್ನು ಕಂಡಿದ್ದಳು, ಅವನ ಹೆಸರನ್ನೂ ಪದ್ಮಾಕರನಿಂದ ಕೇಳಿ ತಿಳಿದಿದ್ದಳು.

ಆದರೆ ಇಂದು ಅವನು ಭಾವೂಸಾಹೇಬರ ಕಡೆಗೆ ಬಂದಿದ್ದನೇಕೆ ? ಅವನ ಬರುವಿಕೆಗೂ ಪದ್ಮಾಕರನಿಗೂ ಏನಾದರೂ ಸಂಬಂಧವಿರಬಹುದೇ ? ಹಾಗೇನಾದರೂ ಇದ್ದರೆ ಪದ್ಮಾಕರನು ಎಲ್ಲಿದ್ದಾನೆಂಬುದು ಅವನಿಗೆ ಗೊತ್ತಿ ರಲೇ ಬೇಕು. ಬಳಿಕ ನಾನು ಪದ್ಮಾಕರನನ್ನು ಕಾಣಬಹುದಲ್ಲಽ.... !

ಆ ಕಲ್ಪನೆ ತಲೆಯಲ್ಲಿ ಸುಳಿದೊಡನೆ ಶಕುಂತಲೆ ಬೆಚ್ಚಿಬಿದ್ದಳು. ಮುಂಬಯಿ ಬಿಟ್ಟು ಹೊರಡುವಾಗ ಪದ್ಮಾಕರನನ್ನು ಕಾಣಬೇಕೆಂಬ ವಿಚಾರ ಅವಳಲ್ಲಿ ಇದ್ದಿರಲೇ ಇಲ್ಲ. ಬಂದಮೇಲೆ ಪದ್ಮಾಕರನ ಬಗ್ಗೆ ಕೇಳಿದ ಸುದ್ದಿಗಳಿಂದ, ಪದ್ಮಾಕರನನ್ನು ಕಾಣುವದು ಸಾಧ್ಯವಿಲ್ಲೆಂಬುದು ಅವಳಿಗೆ ಇನ್ನಷ್ಟು ದೃಢವಾಗಿತ್ತು. ಆದರೆ ಇಂದು ಅವನನ್ನು ಕಾಣುವ ಆಶೆ— ಮಸುಕಾಗಿಯೇ ಏಕಾಗಿರಲಿ—ಮತ್ತೆ ಉತ್ಪನ್ನವಾಗಿದೆ. ಇಷ್ಟೇ ಅಲ್ಲ, ಅವನನ್ನು ಕಾಣುವ ಹಂಬಲ ಅವಳ ಹೃದಯದಲ್ಲಿ ಆಳವಾಗಿ ಹುದುಗಿ ಬಿಟ್ಟಿದೆ.

ಪದ್ಮಾಕರನನ್ನು ಸಾಧ್ಯವಾದರೆ ಮರೆತು ದೂರ ಹೋಗಲೆಂದೇ ಅಲ್ಲವೇ ಅವಳು ಬಾಳಾಸಾಹೇಬರನ್ನು ಮದುವೆಯಾದದ್ದು ? ಆದರೆ ಇಂದು ಪದ್ಮಾ ಕರನ ಸಹವಾಸ ಮತ್ತೆ ಬೇಕೆನಿಸಿದರೆ, ಅದರಿಂದ ಮನಸ್ಸಿಗೆ ದುಃಖವಲ್ಲದೆ ಸುಖ ದೊರೆಯಬಹುದೇ ? ಪದ್ಮಾಕರನನ್ನು ಒಮ್ಮೆ ಕಂಡುಬಂದರೆ ಅವ

ನನ್ನು ತಿರುತಿರುಗಿ ಕಾಣುವ ಆಶೆಯಾಗುವದು ಸಹಜ. ಅವನನ್ನು, ಒಂದು ವೇಳೆ ; ಇನ್ನು ಮೇಲೆ ಕಾಣುವದೇ ಸಾಧ್ಯವಾಗಿರದಿದ್ದರೆ, ಅವಳು ತನ್ನ ದೈವವನ್ನು ನಿಂದಿಸುತ್ತಿದ್ದಳು. ಆದರೆ ಆ ದೈವವೇ ಅವಳಿಗೆ ಸುಖಪ್ರದ ವಾಗಿತ್ತು........

ಹೀಗೆಯೇ ವಿಚಾರ ಮಾಡುತ್ತ ಅವಳು ಅದೆಷ್ಟೋ ಹೊತ್ತು ಕುಳಿತಿದ್ದಳು; ವಿಚಾರ ನಿಲ್ಲುವ ಚಿಹ್ನೆಯೇ ತೋರಲಿಲ್ಲ. ಮನಸ್ಸನ್ನು ಮತ್ತೊಂದು ಕೆಲಸದಲ್ಲಿ ತೊಡಗಿಸಬೇಕೆಂದು ಹೊಸ ಕಾಗದವನ್ನು ತೆಗೆದುಕೊಂಡಳು; ಅದರ ಮೇಲೆ, ಮೂರನೆಯ ಪ್ರಕರಣ ಎಂದು ತಲೆಬರಹವನ್ನು ಬರೆದು ಮತ್ತೆ ತನ್ನ ಭಾಷಾಂತರ ಕಾರ್ಯದಲ್ಲಿ ತೊಡಗಿದಳು.

ಮಧ್ಯಾಹ್ನ ಭಾವೂಸಾಹೇಬರ ಪತ್ರ ಬಂತು; ಅವರು ಇಂದೇ ಬರುವವರಿದ್ದರು; ಆದರೆ ಏನೋ ಒಂದು ಮಹತ್ವದ ಕೆಲಸವಿದ್ದುದರಿಂದ ಇನ್ನು ಮೂರು ನಾಲ್ಕು ದಿನ ತಡೆದು ಬರುವದಾಗಿ ಬರೆದಿದ್ದರು. ಆ ಕೆಲಸಕ್ಕೆ ಬೇಕಾಗುವ ಕೆಲವೊಂದು ಕಾಗದ ಪತ್ರಗಳು ಮಾತ್ರ ಕೊಲ್ಹಾಪುರದಲ್ಲಿಯೇ ಉಳಿದಿದ್ದವು. ತಮ್ಮ ಟೇಬಲ್ಲಿನ ಬಲದ ಖಾನೆಯಲ್ಲಿ ಒಂದು ಪಾಕೀಟಿನಲ್ಲಿ ಅವುಗಳನ್ನೆಲ್ಲ ಹೊಂದಿಸಿಟ್ಟಿದ್ದರು. ಆ ಪಾಕೀಟಿನ ಮೇಲೆ ‘ ಬೆಳಗಾಂವ ’ ಎಂದು ಕೆಂಪು ಪೆನ್ಸಿಲ್ಲಿನಿಂದ ಇಂಗ್ಲಿಷಿನಲ್ಲಿ ಬರೆದಿದ್ದರು. ಪತ್ರದಲ್ಲಿ ‘ ಕೀಲಿಯ ಕೈಯನ್ನು ಇಲ್ಲಿ ಇಟ್ಟಿದ್ದೇನೆ. ಡ್ರಾಅರನ್ನು ತೆಗೆದು ಆ ಕಾಗದಪತ್ರಗಳನ್ನು ತೆಗೆದು ರಜಿಸ್ಟರ್ಡ ಪೋಸ್ಟಿನಿಂದ ಕೂಡಲೇ ಕಳಿಸು ’ ಎಂದು ಭಾವೂ ಶಕುಂತಲೆಗೆ ಬರೆದಿದ್ದರು.

ಆ ಮೇರೆಗೆ ಶಕುಂತಲೆ ಡ್ರಾಅರನ್ನು ತೆಗೆದು ಆ ಪಾಕೀಟನ್ನು ಹೊರ ಡೆಗೆದಳು. ಅದರ ಮೇಲೆ, ‘ ಬೆಳಗಾಂವ, Chemical formulae ( ರಾಸಾಯನಿಕ ಮಿಶ್ರಣದ ಲೆಕ್ಕಗಳು ) ಎಂದು ಬರೆದದ್ದಿತ್ತು. ಶಕುಂತಲೆ ಅದೊಂದನ್ನು ತೆಗೆದುಕೊಂಡು ಡ್ರಾಅರನ್ನು ಮುಚ್ಚುವದರಲ್ಲಿದ್ದಳು. ಅಷ್ಟರಲ್ಲಿ ಅವಳ ದೃಷ್ಟಿ ಸಹಜವಾಗಿಯೇ ಆ ಡ್ರಾಅರಿನಲ್ಲಿ ಒಳಗಿದ್ದ ವಸ್ತುಗಳ ಕಡೆಗೆ ಹರಿಯಿತು. ಆದರಲ್ಲಿ ಇನ್ನೂ ಅದೆಷ್ಟೋ ಕಾಗದಗಳೂ ಪಾಕೀಟುಗಳೂ ಇದ್ದವು. ಬೇರೆ ಬೇರೆ ಕಾರಖಾನೆಯ ಮಾಲೀಕರೊಂದಿಗೆ ನಡೆದ ವ್ಯವಹಾರ, ರಾಸಾಯನಿಕ ದ್ರವ್ಯಗಳ ವಿವರ, ವಿವಿಧ ಪ್ರಯೋಗಗಳನ್ನು

ಮಾಡಿ ದೊರೆತ ಪರಿಣಾಮ ಇತ್ಯಾದಿ ವಿಷಯಗಳೆಲ್ಲ ಆ ಕಾಗದಗಳಲ್ಲಿದ್ದಿರ ಬೇಕು. ಶಕುಂತಲೆಗೆ ಈ ಡ್ರಾಅರನ್ನು ತೆಗೆಯುವ ಪ್ರಸಂಗ ಎಂದೂ ಬಂದಿರಲಿಲ್ಲ. ಅಲ್ಲದೆ ಭಾವೂ ಅವಳಿಗೆ ಎಲ್ಲ ಸುದ್ದಿಯನ್ನೂ ಹೇಳಿಬಿಡುತ್ತಿದ್ದರು. ಅವರು ಹೇಳಿದ್ದಕ್ಕಿಂತ ಹೆಚ್ಚು ತಿಳಿಯಬೇಕೆಂಬ ಜಿಜ್ಞಾಸೆ ಶಕುಂತಲೆಯಲ್ಲಿ ಉಳಿದಿರುತ್ತಿರಲೇ ಇಲ್ಲ. ಹೀಗಾಗಿ ಅವರ ಟೇಬಲ್ಲಿನ ಡ್ರಾಅರನ್ನು ಅವಳೆಂದೂ ತೆಗೆದಿರಲಿಲ್ಲ. ಈಗ ಆ ಡ್ರಾಅರನ್ನು ಒಳಗೆ ಸರಿಸುವಾಗ ಬಲಬದಿಗೆ ಒಂದು ಕಾಗದದಮೇಲೆ ಸಿಕ್ಕು, ಡ್ರಾಅರು ಒಳಗೆ ಹೋಗದಾಯಿತು. ಶಕುಂತಲೆ ಆ ಕಾಗದವನ್ನು ಎಳೆದಳು; ನೋಡಿದರೆ ಅದರ ಮೇಲೆ ಪದ್ಮಾಕರನ ಕೈ ಬರಹ! ಅವನ ಕೈಬರಹದ ಕಾಗದ ಭಾವೂಸಾಹೇಬರ ಡ್ರಾಅರಿನಲ್ಲಿ ಹೇಗೆ ಬಂತು? ಅವಳಿಗೆ ಆಶ್ಚರ್ಯ! ಆ ಕಾಗದವನ್ನು ಬಿಚ್ಚಿ ಓದತೊಡಗಿದಳು--

"ಇನ್ನು ಮುಂದೆ ನನಗೆ 'ನಾನೇ' ಎಂದು ತಿರುಗಾಡುವದು ಸಾಧ್ಯವಾಗಲಾರದು. ಕಾರ್ಯವಾದರೊ, ಆಗಲೇ ಬೇಕು. ಈ ಕೆಲಸ ಎಷ್ಟು ಕಠಿಣವಿದೆ, ಇದರಲ್ಲಿ ಎಷ್ಟು ಗಂಡಾಂತರವಿದೆ ಎಂಬುದು ನನಗೆ ಗೊತ್ತು. ಆದರೆ ನನ್ನಂತಹ ಸಾವಿರಾರು ಜನರು ಬಲಿಯಾದ ಹೊರತು ನಮ್ಮ ದೇಶವು ಒಳ್ಳೆಯ ದಿನಗಳನ್ನು ಕಾಣಲಾರದೆಂಬುದೂ ಅಷ್ಟೇ ಸ್ಪಷ್ಟವಾಗಿದೆ. ಬಹುತೇಕ ನಾನು ನಿಮ್ಮನ್ನು ಕಾಣಲಿಕ್ಕಿಲ್ಲ. ವಿಶೇಷ ಕಾರಣವಿಲ್ಲದೆ ಚೀಟಿಯನ್ನೂ ಕಳಿಸಲಾರೆ; ಒಂದು ವೇಳೆ ಕಳಿಸಿದರೆ ಅದರಲ್ಲಿ ನನ್ನ ಸಹಿ 'ಉಷಃಕಾಲ' ಎಂದಿರುತ್ತದೆ. ಹಾಗಿದ್ದರೆ, ಮತ್ತು ಅದರಲ್ಲಿ ನಾನು ಬರೆದ ವಿಷಯವನ್ನು ನಿಮಗಾವ ತೊಂದರೆಯೂ ಇಲ್ಲದೆ ಮಾಡಬಹುದಾದರೆ ಮಾತ್ರ ಮಾಡಬೇಕು. ನನ್ನ ಬಗ್ಗೆ ಇದ್ದ ನಿಮ್ಮ ಅಂತಃಕರಣ ಅಪಾರವಾದುದು...."

ಶಕುಂತಲೆ ಆ ಪತ್ರವನ್ನು ಇದ್ದಲ್ಲಿಯೇ ಇಟ್ಟು ಡ್ರಾಅರನ್ನು ಮುಚ್ಚಿಬಿಟ್ಟಳು. ಆ ಪತ್ರದ ವಿಚಾರ ಮಾತ್ರ ಅವಳ ತಲೆಯಲ್ಲಿ ಇಡೀ ದಿನವೂ ಸುಳಿಯುತ್ತಿತ್ತು. ಶ್ಯಾಮೂ ಭೋಸಲೆ ಭಾವೂಸಾಹೇಬರಿಗೆ ಕೊಡಲು ತಂದಿದ್ದ ಪತ್ರ ಪದ್ಮಾಕರನದೇ ಇರಬಹುದೇ? ಪದ್ಮಾಕರನು ಸಂಕಟದಲ್ಲಿದ್ದು ಭಾವೂಸಾಹೇಬರ ನೆರವೇನಾದರೂ ಅವನಿಗೆ ಬೇಕಾಗಿದ್ದಿರಬಹುದೇ? ನಾನೇ ಹೋಗಿ ಅವನನ್ನು ಕಂಡರೆ ಹೇಗೆ? ಶ್ಯಾಮೂನಿಗೆ ಅವನಿದ್ದ ಸ್ಥಳ

ಗೊತ್ತಿರಬೇಕು ನಾನು ಪದ್ಮಾಕರನನ್ನು ಕಾಣಬೇಕಾಗಿದೆ; ಅವನೆಡೆಗೆ ಕರೆದು ಕೊಂಡು ಹೋಗು ಎಂದು ಶ್ಯಾಮೂನಿಗೆ ಸ್ಪಷ್ಟವಾಗಿ ಹೇಳಿಬಿಡಲೇ.... ?" ಅವಳ ತಲೆಯಲ್ಲಿ ವಿಚಾರಚಕ್ರ ತಿರುಗುತ್ತಲೇ ಇತ್ತು. "ಪದ್ಮಾಕರನನ್ನು ಕಾಣಲು ಹೋಗುವದರಿಂದ ನನ್ನ ಮನಸ್ಸಿನ ಅಶಾಂತಿ ಮತ್ತೆ ಜಾಗೃತವಾಗುವದೇನೋ ಸರಿ; ಆದರೆ ಅದನ್ನು ಒಪ್ಪಿಯೂ ನಾನು ಅವನನ್ನು ಕಾಣಲು ಹೋದರೆ, ನನ್ನ ಜೀವಾಳದ ಯಾವ ಪ್ರಶ್ನೆಯನ್ನು ತಾನೇ ನಾನು ಅವನೆದುರು ಎತ್ತಬಲ್ಲೆ? ನಾನು ಬಾಳಾಸಾಹೇಬರನ್ನು ಮದುವೆಯಾಗಲು ಮನಸ್ಸಿನ ಎಂತಹ ನಿರಾಶೆ ಕಾರಣವಾಗಿತ್ತೆಂಬುದನ್ನು ಅನನೇನು ಬಲ್ಲ? ನಿರಾಶೆಯ ಈ ಕೃತಿಯಿಂದ ಯಾವ ದುಃಖ ಕೊನೆಯ ವರೆಗೂ ನನ್ನ ಪಾಲಿಗೆ ಬಂದಿತೆಂಬುದಾದರೂ ಅವನಿಗೇನು ಗೊತ್ತು? ಗೊತ್ತಿಲ್ಲದಿದ್ದರೆ ಅದನ್ನು ಹೇಳುವ ಅವಶ್ಯಕತೆಯಾದರೂ ಏನು? ಸದ್ಯ ಆವನನ್ನು ಕಾಣುವದೆಂದರೆ ಅವನನ್ನು ಕಣ್ಣುತುಂಬ ನೋಡುವದು—ಬಹಳ ದಿನಗಳಿಂದ ನೋಡಿಲ್ಲ, ಅದಕ್ಕೇ; ಇನ್ನೇನೂ ಇಲ್ಲ! ಹಾಗಾದರೆ ಅವನ ಬಳಿಗೆ ಹೋಗಿ ಮಾಡುವದೇನು?"—ಮತ್ತೆ ಕ್ಷಣದಲ್ಲಿಯೇ ಅವಳಿಗೆನಿಸುತ್ತಿತ್ತು. "ಆವನನ್ನು ಕಣ್ಣು ತುಂಬ ನೋಡಿ ಎರಡು ಮಾತನಾಡಿದರೂ ನನಗೆ ಸಮಾಧಾನ, ಅಷ್ಟೇ ಸುಖ; ನನ್ನ ಸದ್ಯದ ಸುಖದುಃಖದ ವಿಚಾರವನ್ನು ಅವನೆದುರು ಎಷ್ಟು ಹೇಳಬಲ್ಲೆ ಎಂದು ಲೆಕ್ಕ ಹಾಕುವದರಲ್ಲಿ ಏನು ಅರ್ಥವಿದೆ? ಅವನ ಧೈರ್ಯ, ಅವನು ಕೈಕೊಂಡ ಕಾರ್ಯ ಇವನ್ನೆಲ್ಲ ನೋಡಿ ನನ್ನ ಮೆಚ್ಚಿಕೆಯನ್ನು ವ್ಯಕ್ತ ಮಾಡಬೇಕೆಂದು ಆಶೆಯುಂಟಾಗುತ್ತದೆ. ಅಂತಹ ಸುಸಂಧಿ ತಾನೇ ಬಂದಿರುವಾಗ ನಾನೇಕೆ ಅದನ್ನು ಕಳೆದುಕೊಳ್ಳಲಿ? ನನ್ನ ಪ್ರೇಮವನ್ನು ಅವನು ಕಂಡಿಲ್ಲ ಎಂಬ ಮಾತನ್ನೊಪ್ಪಿದರೂ, ಇಷ್ಟು ದಿನಗಳ ಮೇಲೆ ನನ್ನನ್ನು ಕಂಡದ್ದಕ್ಕಾದರೂ ಅವನಿಗೆ ಸಂತೋಷವಾಗುವದಿಲ್ಲವೇ? ಎಂಬ ವಿಚಾರದಿಂದ ಅವಳ ಮನಸ್ಸು ಸ್ಥಿರವಾದಂತೆನಿಸುತ್ತಿತ್ತು. ಆದರೆ ಮರುಕ್ಷಣದಲ್ಲಿಯೇ ಮತ್ತೆ ವಿಚಾರ ಪ್ರಾರಂಭವಾಗುತ್ತಿತ್ತು. "ಬೇಡವೇ ಬೇಡ; ಪದ್ಮಾಕರನನ್ನು ಕಾಣುವ ಈ ಸಂಧಿಯೆಂದರೆ ಅದೊಂದು ನನ್ನೆದುರು ಬಂದ ಮೋಹವೇ ಆಗಿರಬೇಕು. ಇದರಲ್ಲಿ ಸಿಕ್ಕುಬಿದ್ದರೆ, ನನ್ನ ಈಗಿನ ದುಃಖ ಇಮ್ಮಡಿಯಾದೀತು! ಈ ಸಂಧಿಯನ್ನು ಹಾಗೇ ಹೋಗಗೊಡುವದೇ ಉತ್ತಮ."

ರಾತ್ರಿ ಎಂಟೂವರೆ ಗಂಟೆಯಾಗಿತ್ತು; ಶ್ಯಾಮೂ ಮತ್ತೆ ಬಂದನು. ಶಕುಂತಲೆ ಅವನನ್ನು ಒಳಗಿನ ಕೋಣೆಗೆ ಕರೆದೊಯ್ದು ಕೂಡಿಸಿದಳು; ತಾನೂ ಕುಳಿತಳು; ಶ್ಯಾಮೂ ಅತ್ತಿತ್ತ ನೋಡಿ ಅವಳನ್ನು ಕೇಳಿದನು, "ಭಾವೂ ಬಂದಿದ್ದಾರೆಯೇ?"

"ಇಲ್ಲ, ಆದರೆ ಅವರ ಪತ್ರ ಬಂದಿದೆ; ಇನ್ನೂ ಮೂರು ನಾಲ್ಕು ದಿನಗಳಿಗೆ ಬರುವರಂತೆ" ಶಕುಂತಲೆಯೆಂದಳು.

ಶ್ಯಾಮೂ ತನ್ನಷ್ಟಕ್ಕೇ ಗುಣುಗುಟ್ಟಿದನು "ಏನು ಮಾಡಬೇಕಾಯಿತು ಹಾಗಾದರೆ?"

ಕೆಲನಿಮಿಷ ಅವನೂ ಮಾತನಾಡಲಿಲ್ಲ, ಶಕುಂತಲೆಯೂ ಮಾತನಾಡಲಿಲ್ಲ; ಮೌನವಾಗಿಯೇ ಇದ್ದರು.

"ಮುಂಜಾನೆ ನಿಮ್ಮನ್ನು ಗುರುತಿಸದೆ ಹೋದೆ; ಅದಕ್ಕಾಗಿ ಕ್ಷಮಿಸಬೇಕು." ಶಕುಂತಲೆ ನಗುನಗುತ್ತ ತಾನೇ ಮಾತಿಗೆ ಪ್ರಾರಂಭ ಮಾಡಿದಳು.

"ಹೌದು, ಆದರೆ ಈಗಾದರೂ ಗುರುತು ಹತ್ತಿತೋ ಇಲ್ಲೋ?"

"ಹತ್ತದೆ ಏನು? ಶ್ಯಾಮೂ ಭೋಸಲೇ ಅಲ್ಲವೇ?"

"ಹಾಂ, ಹೌದು, ಹೌದು." ಅವನೂ ನಕ್ಕನು. ಬಳಿಕ ಮನದಲ್ಲಿ ಏನೋ ವಿಚಾರ ಮಾಡಿ ನಿಶ್ಚಯಿಸಿದಂತೆ ಹೇಳತೊಡಗಿದನು. "ನಾನು ಈಗೊಂದು ಪತ್ರವನ್ನು ತಂದಿದ್ದೇನೆ; ಅದನ್ನು ನನಗೆ ಕೊಟ್ಟವರು s, ಕೊಡುವಾಗ—"

"ಕೊಟ್ಟವರೆಂದರೆ ಪದ್ಮಾಕರನಲ್ಲವೇ?"

ಶ್ಯಾಮೂ ನಕ್ಕನು, "ಹೌದು, ಭಾವೂಸಾಹೇಬರನ್ನು ಬಿಟ್ಟು ಇನ್ನಾರ ಕೈಯಲ್ಲಿಯೂ ಆ ಪತ್ರವನ್ನು ಕೊಡಕೂಡದೆಂದು ಹೇಳಿದ್ದಾನೆ; ಆದರೆ ನಿಮ್ಮ ಕಡೆಗೆ ಕೊಡಲು ಏನೂ ಅಡ್ಡಿಯಿಲ್ಲ, ಎಂದು ನನಗೆಸಿಸುತ್ತದೆ. ನೀವು ಇಲ್ಲಿದ್ದದ್ದು ಪದ್ಮಾಕರನಿಗೆ ಗೊತ್ತಿಲ್ಲ; ಇದ್ದರೆ ನಿಮ್ಮ ಕಡೆಗೇ ಪತ್ರವನ್ನು ಕೊಡಲು ಅವನು ಹೇಳುತ್ತಿದ್ದ."

ಶಕುಂತಲೆ ಹೇಳಿದಳು, "ನನ್ನ ಕೈಯಲ್ಲಿ ಪತ್ರವನ್ನು ಕೊಡಬೇಕೋ ಕೊಡಬಾರದೋ ಎಂಬುದನ್ನು ನೀವೇ ನಿಶ್ಚಯಿಸಬೇಕು; ಅದರಲ್ಲಿ ನಾನೇನು ಹೇಳಲಿ?"

"ನೀವು ಹೇಳುವದು ಬೇಡ; ನಾನೇ ನಿಶ್ಚಯಿಸಿದ್ದೇನೆ" ಎಂದು ಶ್ಯಾಮೂ ನಕ್ಕನು. ತನ್ನ ಒಳಕಿಸೆಯಿಂದ ಬಂದು ಮಾಡಿದ ಪಾಕೀಟನ್ನು ತೆಗೆದು ಅವಳ ಕೈಗಿತ್ತನು.

ಶಕುಂತಲೆ ಪತ್ರವನ್ನೊಡೆದು ಕೆಳಗಿನ ಸಹಿ ನೋಡಿದಳು; ಸಹಿ 'ಪದ್ಮಾಕರ,' ಎಂದಿರಲಿಲ್ಲ; ನಗುತ್ತ ಕೇಳಿದಳು "ಈ ಪತ್ರ ಪದ್ಮಾಕರನದೇ ಎಂದು ಯಾತರ ಮೇಲಿಂದ ?"

ಶ್ಯಾಮೂನಿಗೆ ಏನೂ ತಿಳಿಯದಾಯಿತು; ಗಂಭೀರವಾಗಿ ಹೇಳಿದ, "ತಾಯೀ, ನಾನು ಭೋಸಲೆ ಮನೆತನದಲ್ಲಿ ಹುಟ್ಟಿದ್ದೇನೆ; ಸುಳ್ಳು ಮೋಸ ಮಾಡಿದರೆ...."

"ಸುಮ್ಮನೆ ಚೇಷ್ಟೆ ಮಾಡಿದೆ; 'ಉಷಃಕಾಲ' ಎಂದು ಯಾರು ಸಹಿ ಮಾಡುವರೆಂಬುದು ನನಗೆ ಗೊತ್ತಿದೆ; ಅಲ್ಲದೆ ಈ ಕೈಬರಹ ನನಗೆ ಪೂರ್ಣ ಗೊತ್ತಿದ್ದದ್ದು."

ಶಕುಂತಲೆ ನಗುತ್ತ ಪತ್ರವನ್ನು ಬಿಚ್ಚಿ ಓದತೊಡಗಿದಳು.

"ಈಗೆರಡು ದಿನಗಳ ಹಿಂದೆ ××× ದಲ್ಲಿ ಆದ ಗೋಳೀಬಾರಿನ ಪ್ರಕರಣವನ್ನು ನೀವೂ ಕೇಳಿರಬಹುದು. ××× ದಲ್ಲಿ, ಅಂದು ಸಂತೆಯ ದಿನವಾಗಿದ್ದರೂ ನಾವು ಎಷ್ಟೊಂದು ಯಶಸ್ವಿಯಾದ ರೀತಿಯಲ್ಲಿ ಕಾರ್ಯವನ್ನು ಕೈಕೊಂಡು ಪೂರ್ಣಗೊಳಿಸಿದೆವು; ಆದರೆ ಅದೇ ಕಾರ್ಯವನ್ನು ××× ದಲ್ಲಿ ಏಕೆ ಮಾಡುವದಾಗಲಿಲ್ಲ ಎಂದು ಜನತೆಗೆ ಬಹಳ ಆಶ್ಚರ್ಯವುಂಟಾಗಿದೆ. ಅವರ ತರ್ಕವೇ ತಪ್ಪಿಬಿಟ್ಟದೆ ಇಲ್ಲಿ; ಜನರ ಗುಂಪು ಒಡೆಯದಂತೆ ಒಮ್ಮೆಲೆ ಮಾಮಲೇದಾರ ಕಚೇರಿಯ ಮೇಲೆ ಸಾಗಿ ಹೋಗಬೇಕಾಗಿತ್ತು. ಹಾಗಾಗಲಿಲ್ಲ, ಒಡೆದು ಮೂರು ನಾಲ್ಕು ಕಡೆ ಹಂಚಿ ಹೋಗಿ ಬಿಟ್ಟಿತು. ಮತ್ತೊಂದೆಂದರೆ ಆ ಊರಿನ ಪೋಲೀಸ ಅಮಲ್ದಾರನು........ ಹೋಗಲಿ, ಅದೇನೇ ಇರಲಿ; ಈ ಪತ್ರವನ್ನು ಅತ್ಯಂತ ಅವಸರದಲ್ಲಿ ಬರೆದು ನಿಮಗೆ ಕಳಿಸುತ್ತಿದ್ದೇನೆ........ ಮೇಲಿನ ಪ್ರಕರಣದಲ್ಲಿ ಇಬ್ಬರು ಯುವಕರು ಅತ್ಯಂತ ಉತ್ಸಾಹದಿಂದ, ಎಡೆಬಿಡದೆ ನನ್ನೊಡನೆ ದುಡಿದಿದ್ದಾರೆ, ದುಡಿಯುತ್ತಿದ್ದಾರೆ; ಅವರಿಬ್ಬರೂ ತೀರ ಬಡವರು; ಮನೆಯಲ್ಲಿ ವೃದ್ಧ ತಾಯಿತಂದೆಗಳು, ಮದುವೆಯಾದ ಅವರ ಚಿಕ್ಕ ಹೆಂಡಂದಿರು ಇವರನ್ನು ಬಿಟ್ಟರೆ ಬೇರೆ ಯಾರೂ ಇಲ್ಲ;

ಮಕ್ಕಳು ಹೊರಟು ಹೋದದ್ದರಿಂದ ಅವರಿಗೆ ಬಹಳ ದುಃಖವಾಗಿರಬೇಕು. ಆದರೆ ಆ ದುಃಖವನ್ನು ಕಡಿಮೆ ಮಾಡುವದು ಹೇಗೆ ? ಬೇರಾವ ದೃಷ್ಟಿಯಿಂದ ಸಹಾಯ ಮಾಡುವದಾಗದಿದ್ದರೂ ಆರ್ಥಿಕ ದೃಷ್ಟಿಯಿಂದಾದರೂ ಸಹಾಯ ಮಾಡಬಹುದೇನೋ ಎಂದು ನನಗೆನಿಸುತ್ತದೆ........ಶ್ಯಾಮೂನನ್ನು ನಿಮ್ಮೆಡೆಗೆ ಕಳಿಸಿದ್ದೇನೆ, ಎರಡು ಎರಡೂವರೆ ನೂರು ರೂಪಾಯಿಗಳನ್ನಾದರೂ ಅವನೆಡೆಗೆ ಕೊಟ್ಟರೆ........"

ಓದಿ ಪತ್ರವನ್ನು ಶಕುಂತಲೆ ಕೈಯಲ್ಲಿ ಹಾಗೇ ಹಿಡಿದಿದ್ದಳು. ಅವಳ ಬೆರಳುಗಳು ಅವಳಿಗೆ ತಿಳಿಯದಂತೆಯೇ ಅದನ್ನು ಮಡಿಚುತ್ತಿದ್ದವು. ಶಕುಂತಲೆ ಬಿಚ್ಚಿ ಮತ್ತೆ ಪತ್ರವನ್ನೋದಿದಳು. ಏನೋ ಯೋಚಿಸುತ್ತ, "ಈಗ ಬಂದೆ" ಎಂದು ಹೇಳಿದವಳೇ ಒಳಗೆ ಹೋಗಿ ಕೆಲ ನೋಟುಗಳನ್ನು ಹಿಡಿದುಕೊಂಡು ಹೊರಬಂದಳು. ಶ್ಯಾಮೂನಿಗೆ ಅವುಗಳನ್ನು ಕೊಟ್ಟು ಕೊಂಚ ನಕ್ಕಳು; ಉತ್ತರರೂಪವಾಗಿ ಅವನೂ ನಕ್ಕನು. ಹಣ ದೊರೆತ ಕೂಡಲೆ ಹೋಗುವದೆಂದರೆ ಅವನಿಗೆ ಬಹು ಸಂಕೋಚವೆನಿಸಿತು. ಕುಳಿತುಕೊಂಡರೆ ಮಾತಾಡುವದಾದರೂ ಏನು ? ಕೊನೆಗೆ ಅವನೇ ಪ್ರಾರಂಭ ಮಾಡಿದನು.

"ಇಲ್ಲಿ, ನೀವಿದ್ದುದು ಪದ್ಮಾಕರನಿಗೆ ಗೊತ್ತಿಲ್ಲ; ಹೇಳಲೇ ಅವನಿಗೆ ?"

ಏನು ಉತ್ತರ ಕೊಡಬೇಕೋ ಶಕುಂತಲೆಗೆ ತಿಳಿಯದಾಯಿತು. ಅವಳ ಮನಸ್ಸು ಇನ್ನೂ ಉಯ್ಯಾಲೆಯಲ್ಲಿ ತೂಗುತ್ತಿತ್ತು. ಶ್ಯಾಮೂನೊಡನೆ ಮಾತಾಡುವಾಗ, ಪದ್ಮಾಕರನ ಪತ್ರವನ್ನು ಓದುತ್ತಿರುವಾಗ, "ಪದ್ಮಾಕರನನ್ನು ನನಗೆ ಕಾಣಬೇಕಾಗಿದೆ" ಎಂದು ಶ್ಯಾಮೂನಿಗೆ ಹೇಳಿಬಿಡಲೇ ಎಂದು ಅವಳ ಮನಸ್ಸು ಯೋಚಿಸುತ್ತಿತ್ತು. ಪತ್ರವನ್ನು ಓದಿದ ಮೇಲಂತೂ 'ಈ ರೂಪಾಯಿಗಳನ್ನು ತೆಗೆದುಕೊಂಡು ನಾನೇ ನಿನ್ನೊಡನೆ ಬರುತ್ತೇನೆ, ನಡೆ' ಎಂದು ಹೇಳಲೇನೋ ಎಂದು ಯೋಚಿಸಿದಳು. ಆದರೆ ಆ ವಿಚಾರವನ್ನು ಧೈರ್ಯದಿಂದ ಕೂಡಲೇ ಹತ್ತಿಕ್ಕಿಬಿಟ್ಟು ಪದ್ಮಾಕರನನ್ನು ಕಾಣಲು ಹೋಗುವಂತಿಲ್ಲ ಎಂದು ನಿರ್ಧರಿಸಿದಳು. ಅದಕ್ಕೆಂದೇ ಒಂದೂ ಮಾತಾಡದೆ ಹಣವನ್ನು ಶ್ಯಾಮೂನ ಕೈಗೆ ಕೊಟ್ಟಿದ್ದಳು. ಶ್ಯಾಮೂನೂ ಹಣವನ್ನು ತೆಗೆದುಕೊಂಡು ಸುಮ್ಮನೆ ಹೋಗಿಬಿಟ್ಟಿದ್ದರೆ, ಅವಳೆದುರು ಈ ಪ್ರಶ್ನೆಯೇ ಬರುತ್ತಿ

ರಲಿಲ್ಲ. ಆದರೆ ಈಗ? ಆ ಪ್ರಶ್ನೆಯನ್ನು ಕೇಳಿ ಶಕುಂತಲೆಯು ಮನದ ವಿಚಾರವನ್ನು ಅವನು ಅಗಿದು ಹೊರದೆಗೆದಿದ್ದನು. ಆದರೂ ಆ ಪ್ರಶ್ನೆಗೆ ಬಲಿ ಬೀಳಬಾರದೆಂದು ಅವಳು ಅದನ್ನು ಬಿಟ್ಟುಕೊಟ್ಟು ಮತ್ತೊಂದೇ ಪ್ರಶ್ನೆಯನ್ನು ಕೇಳಿದಳು.

" ಪದ್ಮಾಕರನು ಆರೋಗ್ಯದಿಂದಿದ್ದಾನಲ್ಲವೇ ? "

" ಹಾಂ, ಆರೋಗ್ಯವಾಗಿದ್ದಾನೆ " ಶ್ಯಾಮೂ ಹೇಳಿದನು.

" ಊಟ, ವಿಶ್ರಾಂತಿ ಮಾತ್ರ ಹೊತ್ತುಹೊತ್ತಿಗೆ ಸಿಗುತ್ತಿರಲಿಕ್ಕಿಲ್ಲ. "

" ಇಲ್ಲ, ಹಾಗೇನೂ ಇಲ್ಲ. ನಮ್ಮ ವಿರುದ್ಧ ಹೊಂಚುಹಾಕಿ ಕುಳಿತ ಜನ ಕೆಲವರಿದ್ದರೆ, ನಮ್ಮನ್ನು ಪ್ರೀತಿಯಿಂದ ಕಾಣುವ ಜನರೂ ಕೆಲವರಿದ್ದಾರೆ; ನಮ್ಮ ಕಾರ್ಯಬಾಹುಲ್ಯದಲ್ಲಿ ಹಸಿವೆ ನೀರಡಿಕೆಗಳನ್ನೂ ಕೆಲಸಲ ಮರೆಯಬೇಕಾಗುತ್ತದೆ. ವಿಶ್ರಾಂತಿಯ ಗತಿಯೂ ಅದೇ! ಇವಿಷ್ಟೇ ಅಲ್ಲ; ಜೊತೆಗೆ ಮಾನಸಿಕ ತ್ರಾಸ ಬೇರೆ! ಯಾರಿಗೆ ಯಾವ ಕಾಲದಲ್ಲಿ ದುರ್ಬುದ್ಧಿಯುಂಟಾಗಿ, ಪೋಲೀಸರಿಗೆ ನಮ್ಮ ಸುಳಿವು ಹತ್ತಿ, ನಮ್ಮನ್ನು ಸೆರೆಹಿಡಿಯಬಹುದೋ ಎಂಬ ಅಂಜಿಕೆ ಬೇರೆ! ಕದ್ದು ಮುಚ್ಚಿ ಕೆಲಸ ಮಾಡುವದೆಂದರೆ ಅದೂ ಒಂದು ಬಗೆಯ ಸೆರೆಮನೆವಾಸವೇ ! ಆದರೆ ಈ ಯುದ್ಧದ ಸ್ವರೂಪವೇ ಹೀಗಿದೆ. ಅವರ ಕಣ್ಣಿಗೆ ಮಣ್ಣೆರಚಿ, ನಮ್ಮ ಕಾರ್ಯವನು ಮಾಡುವದರಲ್ಲಿಯೂ ಒಂದು ಬಗೆಯ ಸಮಾಧಾನವಿರುತ್ತದೆ. ಪದ್ಮಾಕರನು ಸುಖವಾಗಿದ್ದಾನೆ; ನೀವೀಗ ನೋಡಿದರೆ ಅವನ ಆರೋಗ್ಯ ಮೊದಲಿನಂತೆಯೇ ಇದೆ, ಎಂದು ಹೇಳುವಿರಿ............ ನೀವು ಅವನನ್ನು ನೋಡಿ ಎಷ್ಟು ದಿನಗಳಾದವು ? "

" ಎಷ್ಟೋ ! "

" ಕಾಣಲು ಬರುವಿರಾ ಹಾಗಾದರೆ ? "

ಶಕುಂತಲೆ ಈ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲ; ಅದರಿಂದ ಏನು ಉತ್ತರ ಕೊಡಬೇಕೆಂಬುದೇ ಅವಳಿಗೆ ತೋಚದಾಯಿತು. ಪ್ರಕ್ಷುಬ್ಧವಾದ ಸಮುದ್ರದ ಮೇಲಿನ ಗಾಳಿ ಕ್ಷಣಹೊತ್ತು ಶಾಂತವಾಗುವಂತೆ, ಅವಳ ಕದಲಿದ ಮನಸ್ಸು ಅದೇ ಒಂದು ಕ್ಷಣಮಾತ್ರ ಶಾಂತವಾಗಿತ್ತು; ಶ್ಯಾಮೂನ ಪ್ರಶ್ನೆಯಿಂದ ಮತ್ತೆ ಅದು ಜಾಗೃತವಾಯಿತು; ಅವಳ ಅಂತರಾಳದಲ್ಲಿ ಹುದುಗಿದ

ಮಾತು ತಾನೇ ಹೊರಬಂದುಬಿಟ್ಟಿತು.

"ನಾವು ಕಾಣಲು ಬರಬಹುದೇ ಹಾಗಾದರೆ? ಏನೂ ತೊಂದರೆ ಇಲ್ಲವಷ್ಟೇ?"

"ತೊಂದರೆಯೆಲ್ಲಿಯದು? ಅವಶ್ಯ ಬನ್ನಿ."

"ಯಾವಾಗ ಬರಲಿ?"

"ಪದ್ಮಾಕರನ ಸ್ಥಿತಿ ಮಾತ್ರ ಈಗ ಬಹಳ ವಿಚಿತ್ರವಾಗಿದೆ; ನಾಳೆ, ಈ ಹೊತ್ತಿಗೆ ಯಾವ ಸ್ಥಳದಲ್ಲಿ ಇರುತ್ತಾನೆಂಬುದು ಆತನಿಗೇ ಗೊತ್ತಿರುವದಿಲ್ಲ. ಬಳಿಕ......." ಶ್ಯಾಮೂ ಗೊಂದಲದಲ್ಲಿ ಬಿದ್ದಂತೆ ಕಂಡಿತು; ಏನೋ ನಿಶ್ಚಯಿಸಿಕೊಂಡವನಂತೆ ಮತ್ತೆ ತಾನೇ ಕೇಳಿದನು "ನಿಮಗೆ ಅವನನ್ನು ಕಾಣುವ ಆಶೆಯಿದ್ದರೆ ಈಗಲೇ ನನ್ನೊಡನೇಕೆ ಬರುವದಿಲ್ಲ?"

"ಈಗಲೇ?" ಶಕುಂತಲೆ ಬೆಚ್ಚಿಬಿದ್ದಳು; ಪದ್ಮಾಕರನನ್ನು ಕಾಣಲು ಬರುವೆನೆಂದು ಹೇಳಿದ್ದಳೇನೋ ಸರಿ, ಆದರೆ ಆ ವೇಳೆ ಇಷ್ಟು ಬೇಗ ಬರಬಹುದೆಂದು ಅವಳೆಣಿಸಿರಲಿಲ್ಲ.

"ಹೌದು, . ಈಗಲೇ; ನನ್ನೊಡನೆ ಬರುವಿರಲ್ಲವೇ?" ಶ್ಯಾಮೂ ಕೇಳಿದನು.

"ಯಾವ ಊರಿಗೆ ಹೋಗುವದು?"

"ಊರು ಗೀರು ಒಂದೂ ಇಲ್ಲ."

"ಬಳಿಕ?"

"ಪದ್ಮಾಕರನು ಇಲ್ಲಿಯೇ ಅಂದರೆ ಕೊಲ್ಹಾಪುರದಲ್ಲಿಯೇ ಇದ್ದಾನೆ."

ಶಕುಂತಲೆ ಕ್ಷಣಹೊತ್ತು ಸ್ತಬ್ಧಳಾದಳು; ಬಳಿಕ ಯೋಚಿಸಿ ತಾನೇ ಹೇಳಿದಳು, "ನಿಮ್ಮೊಡನೇ ಬರುತ್ತೇನೆ ಹಾಗಾದರೆ."

## ೧೦

ಈ ನೋಟವನ್ನು ನೋಡನೋಡುತ್ತಿದ್ದಂತೆಯೇ ಶಕುಂತಲೆಯ ಮನದಲ್ಲಿ ಭಾವನೆಯ ತರಂಗಗಳೇಳತೊಡಗಿದವು; ದೇಶದಲ್ಲಿ ಎಲ್ಲೆಡೆಗೂ ಪ್ರಕ್ಷೋಭ ಪಸರಿಸಿದೆ; ರಾಜಕೀಯ ವಾತಾವರಣವಂತೂ ಭೀಕರವಾಗಿದೆ. ಇದನ್ನು ಒಂದು ವೇಳೆ ಬದಿಗಿಟ್ಟರೂ ಜೀವನವೇ ಒಂದು ಸಮಸ್ಯೆಯಾಗಿ ಕುಳಿತಿದೆ. ಇದರಲ್ಲಿ ಕ್ಷಣಕ್ಷಣಕ್ಕೆ ಬದಲಾದಣೆಗಳಾಗುತ್ತಿವೆ. ಆದರೆ ಇಲ್ಲಿಯ ಈ ನಿಸರ್ಗ ಸೌಂದರ್ಯದಲ್ಲಿ ಮಾತ್ರ ಕೊಂಚವೂ ವ್ಯತ್ಯಾಸವಿಲ್ಲ; ವರ್ಷಾನುವರ್ಷಗಳುರುಳಿದರೂ ಅಚ್ಚಳಿಯದ ಉದಾತ್ತ ಸೌಂದರ್ಯದಿಂದ ಹಾಗೇ ಕಂಗೊಳಿಸುತ್ತಿದೆಯಲ್ಲ!

ಅವಳೊಂದು ಚಿಕ್ಕ ಪ್ರವಾಹದ ದಡದಲ್ಲಿ ಕುಳಿತಿದ್ದಳು; ಪ್ರವಾಹದ ನೀರು ಆಳವಾಗಿರಲಿಲ್ಲ. ಮೊಣಕಾಲ ಮಟ್ಟಕ್ಕೆ ಇದ್ದಿರಬಹುದು. ಆದರೆ ನೀರು ಮಾತ್ರ ಒಳ್ಳೇ ಶೀವಿಯಿಂದ ಹರಿಯುತ್ತಿತ್ತು. ಪ್ರವಾಹದ ಇಬ್ಬದಿಗಳಲ್ಲೂ ಅಂದವಾದ ಹಸಿರು ಹುಲ್ಲು! ಜಾನೇವರಿ ತಿಂಗಳಾದ್ದರಿಂದ ಹುಲ್ಲಿನ ಹಸಿರು ಬಣ್ಣ ಕೊಂಚ ಸಪ್ಪಗಾಗಿದ್ದರೂ ಹುಲ್ಲು ಪುಷ್ಟವಾಗಿತ್ತು. ಅದರ ಮೂಲಕ ಹವೆಯಲ್ಲಿಯೂ ಕೊಂಚ ಆರ್ದ್ರತೆ ಬಂದಿತ್ತು. ಪ್ರವಾಹದ ಹಿಂಬದಿಗೆ ಕಾಡುಗಿಡಗಳು ದಟ್ಟವಾಗಿ ಹಬ್ಬಿದ್ದವು; ಅವುಗಳ ಮಧ್ಯೆ

ಅಲ್ಲೊಂದು ಇಲ್ಲೊಂದು ಮಾವಿನ ಗಿಡಗಳೂ ಕಾಣಿಸುತ್ತಿದ್ದವು. ಅವುಗಳ ಹಿಂಬದಿಗೆ ಹೋದರೆ ಹರಹಿದ ಗುಡ್ಡ ! ಅದರ ಮೇಲೆ ದೊಡ್ಡ ದೊಡ್ಡ ಬಂಡೆಗಲ್ಲುಗಳು, ಕಾಡು ಹೂಕಾಯಿಗಳಿಂದ ತುಂಬಿದ ಗಿಡಬಳ್ಳಿಗಳು ! ಆ ದಿಕ್ಕಿನಿಂದ ನಡುವೆಯೇ ಪಕ್ಷಿಯ ಇಂಪಾದ ಕೂಜನ ಕೇಳಬರುತ್ತಿತ್ತು. ಮತ್ತೆ ಗುಡ್ಡದಲ್ಲಿಯ ಅದರ ಪ್ರತಿಧ್ವನಿ ಸಹಿತ ! ಎದುರು ಪಶ್ಚಿಮದಲ್ಲಿ ಮೂರು ನಾಲ್ಕು ಮೈಲುಗಳ ವರೆಗೆ ಹಬ್ಬಿದ ತಪ್ಪಲು ಪ್ರದೇಶ ! ಅಸ್ತಂಗತ ನಾಗುತ್ತಿದ್ದ ಸೂರ್ಯನ ಕೆಂಪು ಕಿರಣಗಳು ಇವೆಲ್ಲವುಗಳಿಗೆ ಕೆಂಪು ಬಣ್ಣ ಬಳಿದುಬಿಟ್ಟಿವೆ !

ಸ್ಥಳ ನಿಜಕ್ಕೂ ಬಹಳ ಶಾಂತವಾದುದು; ಮನೋಹರವಾದುದು, ಅಶಾಂತಿ, ಭಯ, ದುಃಖಗಳ ಸಂಪರ್ಕ ಯಾವ ರೀತಿಯಲ್ಲೂ ಅಲ್ಲಿ ಉಂಟಾಗದು. ಅಲ್ಲಿದ್ದವರಿಗೆ ಸುತ್ತುಮುತ್ತಲು ಏನು ನಡೆದಿವೆ ಎನ್ನುವದು ಕೂಡ ತಿಳಿಯುತ್ತಿರಲಿಲ್ಲ. ಮುಗ್ಧ ಬಾಲಕನು ತೊಟ್ಟಿಲಲ್ಲಿ ಮಲಗಿ ನಿದ್ರೆಹೋದಂತೆ ಸೃಷ್ಟಿ ಶೋಭೆ ಗುಡ್ಡಗಾಡಿನ ಮಧ್ಯದಲ್ಲಿ ಪ್ರಶಾಂತವಾಗಿ ಹರಹಿತ್ತು !

ಸಂಕಟಗಳನ್ನು ಒದಿಗೆ ಸರಿಸಿ ವಿಶ್ರಾಂತಿಯನ್ನು ಪಡೆಯಲು ಇದಕ್ಕಿಂತ ಒಳ್ಳೆಯ ಸ್ಥಳ ಬೇರಾವುದಾದರೂ ಇರಬಹುದೇ ?

ಶಕುಂತಲೆ ನೋಡಿದಳು, ಪದ್ಮಾಕರನು ಅವಳಿಂದ ನಾಲ್ಕಾರು ಮಾರು ದೂರದಲ್ಲಿ ಇಬ್ಬರು ರೈತರೊಂದಿಗೆ ಏನೋ ಮಾತಾಡುತ್ತ ಕುಳಿತಿದ್ದಾನೆ, ಮಾತು ಕೇಳಿಸುತ್ತಿರಲಿಲ್ಲ; ಅಲ್ಲದೆ ಶಕುಂತಲೆಯ ಲಕ್ಷವೂ ಆ ಕಡೆಗೆ ಇದ್ದಿರಲಿಲ್ಲ. ಲಕ್ಷ್ಯಕೊಟ್ಟು ಕೇಳಿದಾಗ ಆಗೊಂದು ಈಗೊಂದು ಶಬ್ದ ಕಿವಿಗೆ ಕೇಳುತ್ತಿತ್ತು. ಅಷ್ಟರಿಂದಲೇ ಊಹಿಸಬಹುದಾದರೆ, ಆ ಇಬ್ಬರು ರೈತರಲ್ಲಿ ಒಬ್ಬನು—ಅವನನ್ನು ನೋಡಿದರೆ ವಯೋವೃದ್ಧನೆಂದು ಬೇಕಾದವರೂ ಹೇಳಬಹುದು—ಶಾಹೂಮಹಾರಾಜರ ಕಾಲದಲ್ಲಿ ಎತ್ತುಗಳ ಕಾದಾಟ ಒಳ್ಳೇ ರಮ್ಯವಾಗಿರುತ್ತಿತ್ತೆಂದು ವರ್ಣಿಸಿ ವರ್ಣಿಸಿ ಹೇಳುತ್ತಿದ್ದನು. ಒಳ್ಳೇ ತಲ್ಲೀನನಾಗಿ ಅವನ ಮಾತನ್ನು ಕೇಳುತ್ತಿರುವವನಂತೆ ಪದ್ಮಾಕರನು ಅವನೆಡೆಗೆ ನೋಡುತ್ತಿದ್ದನು. ನಡುನಡುವೆ ಒಂದೊಂದು ಮಾತನ್ನೂ ಆಡುತ್ತಿದ್ದನು. ಈಗ ಇಪ್ಪತ್ತುನಾಲ್ಕು ತಾಸುಗಳ ಹಿಂದೆಯೇ ಅವನೊಂದು ದೊಡ್ಡ ಸಂಕಟದಲ್ಲಿ ಸಿಕ್ಕು ಪಾರಾಗಿ ಬಂದಿದ್ದಾನೆಂಬುದರ ಸುಳಿವು ಕೂಡ, ಅವನೊಡನೆ

ಮಾತಾಡುತ್ತಿದ್ದವರಿಗೆ ಹತ್ತುವಂತಿರಲಿಲ್ಲ.

ಅವನ ಆ ಬಗೆಯ ಮನೋವೃತ್ತಿಯನ್ನು ಕಂಡು ಶಕುಂತಲೆಗೆ ಬಹಳ ಆಶ್ಚರ್ಯವೆನಿಸಿತು. ನಿನ್ನಿನ ಆ ಭಯಂಕರ ಘಟನೆಯನ್ನು ನೆನೆದುಕೊಂಡರೆ ಅವಳ ಎದೆ ಇನ್ನೂ ಬಡಿದುಕೊಳ್ಳುತ್ತಿತ್ತು. ತುಸು ಹೊತ್ತಿನ ಹಿಂದೆ ಮುಖ ತೊಳೆಯಲೆಂದು ಅವಳು ಆ ಪ್ರವಾಹದ ಬಳಿ ಹೋಗಿದ್ದಳು. ಆಗ ನೀರಿನಲ್ಲಿಯೂ, ಭೀತಿಯಿಂದ ಕಂಗೆಟ್ಟ ಅವಳ ಮುಖದ ಪ್ರತಿಬಿಂಬ ಕಾಣಬೇಕೇ? ಅವಳು ಗಾಬರಿಯಾಗಿ ದೂರ ಸರಿದಳು; ನಿನ್ನಿನ ಆ ಘಟನೆ ! ಅದರಲ್ಲಿಯ ಒಂದೊಂದು ಮಾತು ನೆನೆಸಿಕೊಂಡರೂ ಅವಳ ಮೈಮೇಲೆ ಮುಳ್ಳುಗಳೇಳುತ್ತಿದ್ದವು. ತಾನಾಗಲಿ, ಪದ್ಮಾಕರನಾಗಲಿ ಬದುಕಿರುವದು ಕೂಡ ಅವಳಿಗೆ ಸುಳ್ಳೆನಿಸುತ್ತಿತ್ತು.

ನಿನ್ನೆ ಕೈಕೊಂಡಿದ್ದ ಕಾರ್ಯಕ್ಕೆ ಇಂತಹ ಭಯಂಕರ ಸ್ವರೂಪ ಬರಬಹುದೆಂಬುದನ್ನು ಕನಸು ಮನಸಿನಲ್ಲಿ ಕೂಡ ಯಾರೂ ಎಣಿಸಿರಲಿಲ್ಲ. ಪೇಟೆಯಲ್ಲಿಯ ಸೆರೆಮನೆಯ ಮೇಲೆ ಸಾಗಿ ಹೋಗಿ ಅಲ್ಲಿಯ ಕೈದಿಗಳನ್ನೆಲ್ಲ ಬಂಧಮುಕ್ತರನ್ನಾಗಿ ಮಾಡುವದು, ಬಳಿಕ ನೆರೆಯಲ್ಲಿದ್ದ ಇಮಾರತಿಯ ಮೇಲೆ ಏರಿ ಹೋಗಿ ಅಲ್ಲಿಯ ಬೊಕ್ಕಸವನ್ನು ಸ್ವಾಧೀನಪಡಿಸಿಕೊಳ್ಳುವದು, ಇವೇ ನಿನ್ನಿನ ಕಾರ್ಯದಲ್ಲಿ ಮುಖ್ಯವಾದವುಗಳು. ಇವುಗಳನ್ನು ಸಾಧಿಸಲು ಹೆಚ್ಚಿನ ಧೈರ್ಯವೇನೋ ಬೇಕಾಗಿತ್ತು, ನಿಜ; ಆದರೆ ಸಾಧನೆಯ ಮಾರ್ಗವೆಲ್ಲ ಯುಕ್ತಿ-ಪ್ರಯುಕ್ತಿಗಳಿಂದ ರಚಿಸಲ್ಪಟ್ಟಿತ್ತು. ಶಿಥಿಲತೆ ಎಲ್ಲಿಯೂ ಕಂಡುಬರುತ್ತಿರಲಿಲ್ಲ. ಇಷ್ಟೊಂದು ವಿಶ್ವಾಸದಿಂದಲೇ ಪದ್ಮಾಕರನು ತನ್ನ ಜನರನ್ನು ಕಳಿಸಿಕೊಟ್ಟಿದ್ದನು, ಈ ಎಲ್ಲ ಕಾರ್ಯಗಳನ್ನು ಯಶಸ್ವಿಯಾಗಿ ಸಾಧಿಸಿ ಆ ಜನರು ತಾಸೆರಡು ತಾಸುಗಳಲ್ಲಿ ಹಿಂದಿರುಗುವರೆಂಬ ನಿರೀಕ್ಷಣೆಯೂ ಇತ್ತು. ತಾನೇ ಈ ಜನರನ್ನು ಕರೆದುಕೊಂಡು ಹೋಗಿ ಕೆಲಸವನ್ನು ಮುಗಿಸಿಕೊಂಡು ಬರಬೇಕೆಂಬುದು ಪದ್ಮಾಕರನ ಇಚ್ಛೆಯಾಗಿತ್ತು. ಆದರೆ ಜನರೇ ಅವನನ್ನು ಕರೆದೊಯ್ಯಲು ಒಪ್ಪುತ್ತಿರಲಿಲ್ಲ; ಕಾರ್ಯದಲ್ಲಿ ಮುಂದಾಲೋಚನೆ, ಯುಕ್ತಿ ಪ್ರಯುಕ್ತಿಗಳೇನೋ ಸಾಕಷ್ಟಿದ್ದವು; ಆದರೂ ಏನು ನಿಯಮ ? ಕಾಲು ಜಾರಿ ಕೊರಕಲಲ್ಲಿ ಬೀಳಬಹುದು. ಹಾಗೇನಾದರೂ ಆದರೆ ಮಾತ್ರ ಪ್ರಕರಣ ಗೋಳೀಬಾರಿನ ವರೆಗೂ ಹೋಗುವದು. ತಮ್ಮ ಮುಂದಾಳಾದ ಪದ್ಮಾ

ಕರನು ಇಂತಹ ಸಂಕಟದಲ್ಲಿ ಸಿಕ್ಕಿಬಿದ್ದರೆ ಹೇಗೆ? ಎನ್ನುವ ಭೀತಿ ಜನರಿಗೆ; ಆದರೆ ಪದ್ಮಾಕರನ ಇಚ್ಛೆಯನ್ನು ಪೂರ್ಣವಾಗಿ ಅಲ್ಲಗಳೆಯುವದೂ ಜನರಿಗೆ ಇಷ್ಟವಿರಲಿಲ್ಲ. ಕೊನೆಗೆ, ನದಿಗೆ ಹೊಂದಿದ್ದ ಇನಾಮದಾರರ ಕಿಲ್ಲೆಯನ್ನು ಬಿಟ್ಟು, ಆವಾರದಲ್ಲಿ ಪಶ್ಚಿಮಕ್ಕೆ ತೀರ ತುದಿಗಿದ್ದ ಒಂದು ಕಿರುಮನೆಯಲ್ಲಿ ಶಕುಂತಲೆ, ಪದ್ಮಾಕರರು ಕುಳಿತಿರಬೇಕು. ಜನರು ಯೋಜನೆಯ ಮೇರೆಗೆ ಕಾರ್ಯವನ್ನು ಕೈಕೊಂಡು ಕೂಡಲೇ ಗಡಿದಾಟಿ ಗೊತ್ತಾದ ಸ್ಥಳಕ್ಕೆ ಬರಬೇಕು; ಇದೆಲ್ಲದರ ವರದಿಯನ್ನು ಶ್ಯಾಮೂ ಭೋಸಲೆ, ಪದ್ಮಾಕರನಿಗೆ ತಿಳಿಸಬೇಕು ಎಂದು ನಿಶ್ಚಯಿಸಲ್ಪಟ್ಟಿತು.

ಪದ್ಮಾಕರನು ಹಾಗೆ ದಾರೀ ನೋಡುತ್ತ ಕುಳಿತಾಗ ಬಂದೂಕಿನ ಸಪ್ಪಳ ಒಮ್ಮಿಂದೊಮ್ಮೆಲೆ ಕೇಳಿಸಿತು. ಪದ್ಮಾಕರನು ಗಾಬರಿಯಾಗಿ ಅವಳೆಡೆಗೆ ನೋಡಿದನು, " ಹಾಂ, ಅಂದರೆ— ? " ಹತ್ತಿಪ್ಪತ್ತು ನಿಮಿಷಗಳ ತರುವಾಯ ಬಂದೂಕಿನ ಸಪ್ಪಳಗಳು ಒಂದರ ಹಿಂದೊಂದು ಕೇಳಬರತೊಡಗಿದವು. ಪದ್ಮಾಕರನು ಗಾಬರಿಯಾಗಿ ಓಡುತ್ತೋಡುತ್ತ ಬಾಗಿಲು ಕಡೆಗೆ ಸಾಗಿದನು. ಶಕುಂತಲೆ ತನ್ನ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಅವನನ್ನು ಹಿಂದೆ ಸರಿಸಿದಳು. ಆಗ ದುಃಖಾವೇಶದಲ್ಲಿ ಪದ್ಮಾಕರನ ಮುಖದಿಂದ ಶಬ್ದಗಳು ಹೊರಹೊರಟವು '' ಹಾ ಘಾತವಾಯಿತು ! "

ಆ ಬಳಿಕಿನ ಹತ್ತಿಪ್ಪತ್ತು ನಿಮಿಷಗಳು ತೀರ ಭೀಕರವಾಗಿದ್ದವು. ಮನಸ್ಸು ಪ್ರಕ್ಷುಬ್ಧವಾಗಿತ್ತು. ಆ ಭಯಾನಕ ದೃಶ್ಯ ಈಗೂ ಶಕುಂತಲೆಯ ಕಣ್ಣೆದುರು ಕಟ್ಟಿದಂತಿತ್ತು. ಅದನ್ನವಳು ಮರೆಯುವದು ಸಾಧ್ಯವೇ ಇರಲಿಲ್ಲ.

ಬಂದೂಕಿನ ಸಪ್ಪಳದಿಂದ ಪರಿಣಾಮ ಒಳ್ಳೆಯದಾಗಿಲ್ಲ ಎಂಬುದು ಗೊತ್ತಾಗಿಯೇ ಇತ್ತು. ಆದರೆ ಆದದ್ದಾದರೂ ಏನು ಎಂಬುದನ್ನು ಮಾತ್ರ ತಿಳಿಯಲು ಮಾರ್ಗವಿರಲಿಲ್ಲ. ಬೊಕ್ಕಸವನ್ನು ಕಾಯಲು ಮೂರುನಾಲ್ಕು ಜನ ಪೋಲೀಸರು ಇರುತ್ತಿದ್ದ ವಿಷಯ ಗೊತ್ತಿತ್ತು. ಆದರೆ ಅವರ ಕಣ್ಣಲ್ಲಿ ಮಣ್ಣೆರಚುವ ಯುಕ್ತಿಯೂ ಬಳಿಯಲ್ಲಿತ್ತು. ಈ ಯುಕ್ತಿಯನ್ನು ವಿಫಲಗೊಳಿಸಲು ಯಾವ ವಿಘ್ನ ತಾನೇ ಅಡ್ಡ ಬಂತು ? ಬಂದೂಕಿನ ಸಪ್ಪಳ ಇಷ್ಟೊಂದು ಸಲ ಏಕೆ ಕೇಳಿಸಿತು ? ಒಂದೂ ತಿಳಿಯಲು ಮಾರ್ಗವಿರಲಿಲ್ಲ. ಗೋಳಿಬಾರು ನಡೆದಿದೆಯೆಂದ ಮೇಲೆ ಪ್ರಾಣಹಾನಿ ಬಹಳವಾಗಿರಬೇಕು.

ಪದ್ಮಾಕರನ ಆಜ್ಞೆಯನ್ನು ಶಿರಸಾವಹಿಸಿ ಹೋಟಿ ಜನರ ಮುಖಗಳು ಒಂದೊಂದಾಗಿ ಶಕುಂತಲೆಯ ಕಣ್ಣೆದುರು ಬರತೊಡಗಿದವು. ಅವುಗಳಲ್ಲಿ ಎಷ್ಟು ಮುಖಗಳು ವಿದ್ರೂಪವಾಗಿರುವವೋ, ಎಷ್ಟನ್ನು ಅವಳು ಇನ್ನು ಮುಂದೆ ಕಾಣುವದೇ ಸಾಧ್ಯವಿಲ್ಲವೋ ಯಾರು ಬಲ್ಲರು ? ಶಕುಂತಲೆ ಮನಸ್ಸಿನಲ್ಲಿ ಯೋಚಿಸಿದಳು " ದೇಶದಲ್ಲಿ ಸ್ವಾತಂತ್ರ್ಯವನ್ನು ದೊರಕಿಸಲು ಇದು ವರೆಗೆ ಎಷ್ಟೋ ಸಲ ಚಳವಳಿ ನಡೆದಿದೆ. ಆದರೆ ಈ ಸಲದ ಚಳವಳಿ ಮಾತ್ರ ಭಿನ್ನವಾಗಿತ್ತು; ಉಗ್ರಸ್ವರೂಪದ್ದಾಗಿತ್ತು. ಇದರಲ್ಲಿ ಧುಮುಕಿದವರು ಮರಣಕ್ಕೆ ಆಹುತಿಯಾದಂತೆಯೇ! ಈಗೊಂದು ತಾಸಿನ ಹಿಂದೆ ಶ್ಯಾಮೂ ಭೋಸಲೆ ಮತ್ತು ಅವನ ಸಂಗಡಿಗರು ಎಷ್ಟೊಂದು ಉತ್ಸಾಹದಿಂದ, ಆವೇಶದಿಂದ ಮಾತಾಡುತ್ತಿದ್ದರು! ಅವರೆಲ್ಲ ಅಧಿಕಾರಿಗಳ ಸಂಹಾರಶಕ್ತಿಗೆ ಬಲಿಯಾಗಿರ ಬಹುದೇ ? ಎಂತಹ ಭಯಂಕರ ಘಟನೆ ಸಂಭವಿಸಿದೆಯೋ ಯಾರಿಗೆ ಗೊತ್ತು ? "

ಒಂದೆಡೆಗೆ ಶಕುಂತಲೆಯ ಮನದಲ್ಲಿ ಈ ವಿಚಾರ ತರಂಗಗಳು ಒಂದರ ಮೇಲೊಂದು ಅಪ್ಪಳಿಸುತ್ತಿದ್ದರೆ, ಇನ್ನೊಂದೆಡೆಗೆ ಪದ್ಮಾಕರನು, " ಬಿಡು ನನ್ನನ್ನು ಬಿಟ್ಟುಬಿಡು! ನನಗೆ ಇಲ್ಲಿ ಕೂತಿರುವದು ಸಾಧ್ಯವಿಲ್ಲ........, ನನ್ನ ಜನರು, ನನ್ನ ಜನರು........, ಬಿಡು ಬಿಡು " ಎಂದು ಕೂಗುತ್ತ, ಅವಳನ್ನು ತಪ್ಪಿಸಿ ಹೋಗುವ ಪ್ರಯತ್ನದಲ್ಲಿ ತೊಡಗಿದ್ದನು. ಶಕುಂತಲೆ ತನ್ನ ಶಕ್ತಿಯಿಂದ ಅವನನ್ನು ಗಟ್ಟಿಯಾಗಿ ಹಿಡಿದಿದ್ದಳು. ಅದೇ ಸ್ಥಳದಲ್ಲಿಯೇ ಅವನನ್ನು ಗಟ್ಟಿಯಾಗಿ ಹಿಡಿದು ನಿಲ್ಲಿಸುವ ಶಕ್ತಿ ತನ್ನಲ್ಲಿ ಹೇಗೆ ಬಂತು, ಎಂದು ಅವಳಿಗೇ ಆಶ್ಚರ್ಯ!

ಕೊನೆಗೆ ಯಾರೋ ಬಾಗಿಲು ಬಡಿದಂತಾಯಿತು; " ಪದ್ಮಾಕರ! ತಾಯೀ ಬೇಗ ಬಾಗಿಲು ತೆರೆಯಿರಿ, " ಅಂಜಿಕೆಯಿಂದ ಹೊರಹೊರಟ ಶಬ್ದಗಳು ಕೇಳಿಸಿದವು.

ಬಾಗಿಲು ತೆರೆಯಿತು; ಹೊರಗಿನ ವ್ಯಕ್ತಿ ಬಂದವನೇ ನುಡಿದನು, " ನೀವಿಬ್ಬರೂ ಇನ್ನು ಮೇಲೆ ಒಂದು ನಿಮಿಷ ಕೂಡ ಇಲ್ಲಿ ನಿಲ್ಲುವಂತಿಲ್ಲ; ಗಡಿಯನ್ನು ದಾಟಿ ದೊಡ್ಡ ರಸ್ತೆಯನ್ನು ಬಿಟ್ಟು ಸಿಕ್ಕಲ್ಲಿ ಹೋಗಿ ಅಡಗಿಕೊಳ್ಳ ಬೇಕಾಗಿದೆ; ನಾನೂ ನಿಮ್ಮೊಡನೆ ಬರುವೆ, ನಡೆಯಿರಿ. "

ಪದ್ಮಾಕರನು ಆತುರದಿಂದಲೇ ಕೇಳಿದನು, “ಅಲ್ಲವೋ, ನಡೆದದ್ದೇನೆಂಬುದನ್ನಾದರೂ ಹೇಳುವಿಯೋ ಇಲ್ಲವೋ ?”

“ಹೇಳುವೆ, ಹೇಳುವೆ.”

ಅವನು ಹೇಳಿದ ವಿಷಯ ಅನಪೇಕ್ಷಿತವಾಗಿತ್ತು, ಅಷ್ಟೇ ದುಃಖದಾಯಕವೂ ಆಗಿತ್ತು.

ಬೊಕ್ಕಸವನ್ನು ಕಾಯುತ್ತಿದ್ದ ಒಬ್ಬ ಪೋಲೀಸಿನೊಂದಿಗೆ ಹೋರಾಟವಾಗಿ ಶ್ಯಾಮೂ ಭೋಸಲೆ ಅವನ ಬಂದೂಕನ್ನು ಕಸಿದುಕೊಂಡಿದ್ದನು. ಮತ್ತೆ ಆ ಪೋಲೀಸನು ಎದೆಎದೆ ಬಡಿದುಕೊಳ್ಳುತ್ತ ಕಚೇರಿಯ ಕಡೆಗೆ ಓಡಿ ಹೋಗುತ್ತಿದ್ದಾಗ ಅವನ ಮೇಲೆ ಶ್ಯಾಮೂ ಬಂದೂಕು ಹಾರಿಸಿದ್ದನು. ಕರ ವಸೂಲಿಗಾಗಿ ಅದೇ ದಿನ ಮಾಮಲೇದಾರರು ಆ ಊರಿಗೆ ಬರುವ ವಿಷಯ ಪದ್ಮಾಕರನ ಜನರಿಗೆ ಗೊತ್ತಿರಲಿಲ್ಲ; ಮಾಮಲೇದಾರರು ಈಗೆರಡು ತಾಸುಗಳ ಹಿಂದೆಯೇ ಬಂದಿದ್ದರು. ಅವರೊಡನೆ ಪೋಲೀಸರ ದಳವೂ ಇತ್ತು. ಶ್ಯಾಮೂ ಹಾರಿಸಿದ ಬಂದೂಕಿನ ಸಪ್ಪಳ ಅವರಿಗೂ ಕೇಳಿಸಿರಬೇಕು. ಹತ್ತಿಪ್ಪತ್ತು ನಿಮಿಷಗಳಲ್ಲಿ ಪೋಲೀಸರ ದಳ ಬಂದು, ಬೊಕ್ಕಸದ ಮೇಲೆ ಸಾಗಿ ಹೋದ ಜನರನ್ನು ಸುತ್ತುವರಿಯಿತು. ಗೋಳಿಬಾರು ಪ್ರಾರಂಭವಾಯಿತು. ಆರು ಜನರು ನಿಂತಲ್ಲಿಯೇ ಉರುಳಿಬಿದ್ದರು; ಉಳಿದವರೆಲ್ಲ ಹಿಡಿಯಲ್ಪಟ್ಟರು; ಊರಲ್ಲಿ ಎಲ್ಲಿ ನೋಡಿದರೂ ಭಯಾನಕ ವಾತಾವರಣ; ಪದ್ಮಾಕರನೂ ಊರಲ್ಲೆಲ್ಲಿಯೋ ಅಡಗಿರಬೇಕೆಂದು ಅವನ ಶೋಧ ಜೇರಿ ನಡೆದಿತ್ತು.

ಒಂದೇ ಉಸುರಿನಲ್ಲಿ ಇದೆಲ್ಲವನ್ನೂ ವಿವರಿಸಿ ಅವನೆಂದ “ನೀವಿಬ್ಬರೂ ಈ ಕ್ಷಣಕ್ಕೆ ಇಲ್ಲಿಂದ ಹೋಗಲೇ ಬೇಕು....; ಹಾಂ, ನಡೆಯಿರಿ, ಒಂದು ನಿಮಿಷವೂ ಇಲ್ಲಿ ನಿಲ್ಲುವಂತಿಲ್ಲ.”

ಬಳಿಕ ಕೂಡಲೆ ಆ ಆವಾರದಿಂದ ಹೊರಬಿದ್ದು ನದಿಯನ್ನು ದಾಟಿ, ರಾತ್ರಿಯಾಗುವ ವರೆಗೆ ದಾರಿ ನಡೆದು ನಡೆದು ಕಡೆಗೊಂದು ಕತ್ತಲುಗವಿಯಲ್ಲಿ ರಾತ್ರಿಯನ್ನು ಹೇಗೋ ಕಳೆದಾಯಿತು. ಬೆಳಗಾಗುವದೇ ತಡ, ಮತ್ತೆ ಹತ್ತು ಹದಿನೈದು ಮೈಲು ನಡೆದು, ಈ ಹಳ್ಳಿಯಲ್ಲಿಯೇ ಒಬ್ಬ ಒಕ್ಕಲಿಗನ ಗುಡಿಸಲಿಗೆ ಬಂದು ತಲುಪಿದ್ದೆವು. ಇಲ್ಲಿಂದ ಮುಂದೆ ಸಾಗಲು ಏನೂ ತೊಂದರೆಯಿಲ್ಲ ಎಂದು ವರದಿ ಬರುವವರೆಗೆ ಅಲ್ಲಿಯೇ ಇರಬೇಕೆಂದು

ಪದ್ಮಾಕರನಿಗೆ ಮತ್ತೆ ಮತ್ತೆ ಹೇಳಿ ಅವನಿಂದ ವಚನ ತೆಗೆದುಕೊಂಡು ಆ ವ್ಯಕ್ತಿ ಹೊರಟು ಹೋದನು.

ಶಕುಂತಲೆಗೆ ಆ ಊರಿನ ಹೆಸರು ಕೂಡ ಗೊತ್ತಿರಲಿಲ್ಲ; ಆದರೆ ದಾರಿಯಲ್ಲಿ ಆಕಸ್ಮಾತ್ ಭೆಟ್ಟಿಯಾದ ಒಬ್ಬ ಅಪರಿಚಿತ ಮನುಷ್ಯನು ಸಹಾನುಭೂತಿಯ ನಾಲ್ಕು ಮಾತುಗಳನ್ನಾಡಿ ಸಮಾಧಾನ ಹೇಳುವಂತೆ, ಅಲ್ಲಿಯ ನಿರ್ಜನ ಏಕಾಂತ ಶಕುಂತಲೆ ಪದ್ಮಾಕರರೀರ್ವರಿಗೂ ಆಶ್ರಯವಾಗಿತ್ತು. ಈ ಸಣ್ಣ ಹಳ್ಳಿಗೆ ಅವಳೆಂದಾದರೂ ಬರುತ್ತಿದ್ದಳೋ ಅಥವಾ ಇಲ್ಲವೇ ಇಲ್ಲವೋ; ಆದರೆ ಈಗ ಮಾತ್ರ ಅಲ್ಲಿಯ ನಿಸರ್ಗ ಶೋಭೆ ಅವಳನ್ನು ಆಕರ್ಷಿಸಿಬಿಟ್ಟಿತ್ತು. ಅದರ ಸಹವಾಸದಲ್ಲಿ ಅವಳ ಮನಸ್ಸೂ ಕೊಂಚ ಹುರುಪುಗೊಂಡಿತ್ತು.

ಸುತ್ತುವರಿದ ಸೃಷ್ಟಿಸೌಂದರ್ಯವನ್ನು ನಿರೀಕ್ಷಿಸುತ್ತಿದ್ದಂತೆಯೇ ಅವಳ ತಲೆಯಲ್ಲಿ ವಿಚಾರವೊಂದು ಸುಳಿಯಿತು. "ಪದ್ಮಾಕರನೂ, ನಾನೂ ಇಲ್ಲಿ ಸುರಕ್ಷಿತವಾಗಿರುವೆಂಬುದು ಬರೀ ಭಾಸವಾಗಿರಲಿಕ್ಕಿಲ್ಲವಷ್ಟೇ ?" ಬಳಿಕ ಹಿಂದಿನ ದಿನ ನಡೆದ ದುರ್ಘಟನೆಯ ಚಿತ್ರ ಒಂದೊಂದಾಗಿ ಅವಳ ಸ್ಮೃತಿಪಟಲದಲ್ಲಿ ಹಾದು ಹೋಗುತ್ತಿದ್ದವು; ಅವುಗಳ ನೆನಪಿನಿಂದುಂಟಾದ ದುಃಖ ಕೂಡ ಅವಳಿಗೆ ಅಸಹ್ಯವೆನಿಸುತ್ತಿತ್ತು.

* * * *

ರಾತ್ರಿಯಾದೊಡನೆಯೇ ಪದ್ಮಾಕರನು ತನ್ನ ಸ್ಥಳದಲ್ಲಿಯೇ ಎದ್ದು ಕುಳಿತು ಶಕುಂತಲೆಗೆ ಹೇಳಿದನು, "ಹಾಂ, ಇನ್ನು ಎದ್ದು ಹೊರಡೋಣ."

"ಎಲ್ಲಿಗೆ ಹೋಗುವದು ?" ಶಕುಂತಲೆ ನಗುತ್ತಲೇ ಕೇಳಿದಳು.

"ಎಲ್ಲಿಗೆಂದರೆ ? ನಮ್ಮ ಮನೆಗೆ," ಪದ್ಮಾಕರನೂ ನಕ್ಕನು.

ಕುಳಿತ ಸ್ಥಳದಲ್ಲಿಂದ ಎದ್ದು ಸಮೀಪ ಬಂದು ಶಕುಂತಲೆ ಕೇಳಿದಳು, "ನಮ್ಮ ಮನೆಗೆ ? ಭಿವಾ ಕಾಕಾನ ಮನೆಯೇ ನಿಮ್ಮದಾಗಿ ಬಿಟ್ಟಿತೇ ?.... ಹೌದೇನು ಕಾಕಾ ? ನಿಮ್ಮ ಮನೆಯನ್ನು ಇವರಿಗೇ ಕೊಟ್ಟುಬಿಟ್ಟಿದ್ದೀರಾ ನೀವೂ ?

ಈಗ ಕೆಲಹೊತ್ತಿನ ಹಿಂದೆ ಎತ್ತುಗಳ ಕಾದಾಟದ ವರ್ಣನೆಯನ್ನು ಒಳ್ಳೇ ಉತ್ಸಾಹದಿಂದ ಮಾಡುತ್ತಿದ್ದ ಆ ಮುದುಕ ನಗುನಗುತ್ತ ಹೇಳಿದನು,

" ಬಡವನ ಗುಡಿಸಲು ಅಷ್ಟೊಂದು ಮನಸ್ಸಿಗೆ ಬಂದಿಷ್ಟರೆ, ತೆಗೆದುಕೊಂಡು ಬಿಡಿರಿ ತಾಯೀ, ಅದೇನು ದೊಡ್ಡದು ! "

ಬಳಿಕ ಆ ಮೂವರೂ ಎದ್ದು ಪ್ರವಾಹದ ದಂಡೆಗುಂಟ ನಡೆಯುತ್ತ ಊರಕಡೆಗೆ ಸಾಗಿದರು.

ಆ ಊರಲ್ಲಿ ' ಮನೆ ' ಎಂದು ಯಾವುದಕ್ಕಾದರೂ ಹೇಳುವದಾದರೆ, ಅದು ನಮ್ಮ ಭಿವಾ ಕಾಕಾನ ವಸತಿಸ್ಥಾನಕ್ಕೆ ಮಾತ್ರ; ಅಲ್ಲಿಯೂ ಕೂಡ ಅರ್ಥವನ್ನು ಸ್ವಲ್ಪ ಎಳೆದು ಜಗ್ಗಬೇಕಾಗಿತ್ತು. ಈಗೆರಡು ವರ್ಷಗಳ ಹಿಂದೆ ಹೊಲದ ಬೆಳೆ ಒಳ್ಳೇ ಹುಲುಸಾಗಿ ಬಂತು. ಆಗ ಭಿವಾ ಕಾಕಾನ ಮಗ ಹಳೇ ಹೆಂಟೆಯ ಮನೆಯನ್ನು ಕೆಡವಿ ನಗರದ ಪದ್ಧತಿಯ ಮನೆಯನ್ನು ಗಚ್ಚು ಕಲ್ಲುಗಳಿಂದ ಕಟ್ಟಿಸಬೇಕೆಂದು ಹಟ ಹಿಡಿದನು ಮುದುಕನೂ ಅವನಿಗೆ ಎದುರು ಮಾತಾಡಲಿಲ್ಲ, ' ನಿನಗೆ ಹೇಗೆ ಬೇಕೋ ಹಾಗೆ ಮಾಡು ' ಎಂದು ಹೇಳಿಬಿಟ್ಟನು. ಎರಡು ತಿಂಗಳಲ್ಲಿಯೇ ಕೆಳ ಅಂತಸ್ತಿನ ಎರಡು ಕಿರುಮನೆ ಗಳೂ ಅಡಿಗೆಯ ಮನೆಯೂ ಸಿದ್ಧವಾದವು. ಮೇಲಂತಸ್ತಿನ ಕಟ್ಟುವ ಕೆಲ ಸವೂ ನಡೆದಿತ್ತು; ಗೋಡೆಯನ್ನು ಕಟ್ಟಿಯಾಗಿತ್ತು. ಆದರೆ ಅಷ್ಟರಲ್ಲಿಯೇ ಮುದುಕನ ಮಗ ಹಾಸಿಗೆ ಹಿಡಿದನು; ಮಳೆಗಾಲ ಬಂದದ್ದರಿಂದ ಮೇಲಂತ ಸ್ತಿಗೆ ಹೇಗೋ ಒಂದು ಮಾಳಿಗೆಯನ್ನು ಹೊದಿಸಿದರು. ತಾನು ನೆಟ್ಟಗಾದ ಮೇಲೆ ಅದನ್ನು ಮತ್ತೆ ಚೆನ್ನಾಗಿ ಕಟ್ಟಿಸಬೇಕೆಂದು ಮಗನ ಆಶೆ; ಆದರೆ ಆಶೆ ಈಡೇರಲಿಲ್ಲ; ಮುದುಕನ ಮಗ ಮಲಗಿದವನು ಏಳಲೇ ಇಲ್ಲ; ಮೇಲಂತ ಸ್ತಿನ ಗೋಡೆಗಳು ಹಾಗೇ ಹುರುಬರಕಾಗಿ ನಿಂತುಬಿಟ್ಟವು; ಅಲ್ಲಿ ಬಾಗಿಲನ್ನೂ ಹಚ್ಚಲಿಲ್ಲ, ಹಂಚಿನ ಹೊದಿಕೆಯನ್ನೂ ಹಾಕಲಿಲ್ಲ; ಮನೆ ಅಂಕಡೊಂಕಾಗಿ ಹಾಗೇ ಉಳಿದುಬಿಟ್ಟಿತು. ಅಂತೂ ಮನೆಗೆ ಪೂರ್ಣವಾದ ಕಳೆಯಿದ್ದಿರಲಿಲ್ಲ; ' ಯಾರಿಗಾಗಿ ಮನೆಯನ್ನು ಕಟ್ಟಿಸುತ್ತಿದ್ದೆನೋ ಅವನೇ ಹೋದ ಬಳಿಕ ಇನ್ನೇಕೆ ಆ ಮನೆಯ ವಿಚಾರ ? ' ಎಂದು ಭಿವಾ ಕಾಕಾ ಹಾಗೇ ಬಿಟ್ಟ ಬಿಟ್ಟಿದ್ದನು.

ರಾತ್ರಿ ಊಟವಾದ ಮೇಲೆ ಮೂವರೂ ಮನೆಯ ಮುಂಭಾಗದಲ್ಲಿ ಮಾತಾಡುತ್ತ ಕುಳಿತಾಗ, ಆಕಸ್ಮಾತ್ತಾಗಿ ಮನೆಯ ಮಾತು ಹೊರಟು, ಅದರ ಇತಿಹಾಸವೆಲ್ಲ ಮುದುಕನಿಂದ ಶಕುಂತಲೆ ಪದ್ಮಾಕರರಿಗೆ ತಿಳಿಯಿತು. ಮಾತು

ಇನ್ನೂ ಸಾಗಿತ್ತು, ಚಂದ್ರ ಮೇಲೇರಿ, ರಾತ್ರಿ ಮೀರುತ್ತ ಬಂದುದನ್ನು ಸೂಚಿಸಿದನು. ಆಗ ಮುದುಕನು 'ರಾತ್ರಿ ಬಹಳವಾಯಿತು, ಮೇಲೆ ಹೋಗಿ ಮಲಗಿಕೊಳ್ಳಿರಿ' ಎಂದು ಅವರನ್ನು ಎಚ್ಚರಿಸಿದನು.

ಶಕುಂತಲೆ ಪದ್ಮಾಕರರು ವಿಶ್ರಾಂತಿಗಾಗಿ ಮೇಲೆ ಹೋಗಿ ಮಲಗಿದರೇನೋ ನಿಜ, ಆದರೆ ಮುದುಕನು ಹೇಳಿದ, ಮನೆಯ ದುಃಖದಾಯಕ ಇತಿಹಾಸ ಅವಳ ಮನವನ್ನು ಆವರಿಸಿಬಿಟ್ಟಿತ್ತು; ನಿದ್ರೆ ಎಷ್ಟೊತ್ತಾದರೂ ಬರಲೊಲ್ಲದು; ಮೇಲೆ ಬೆಳಕಿನ ಕಿಂಡಿಯಿಂದ ಚಂದ್ರನ ಕಿರಣವೊಂದು ಒಳಗೆ ಬರುತ್ತಿತ್ತು. ಅದನ್ನೇ ನೋಡುತ್ತ ಕಣ್ಣು ತೆರೆದು ಮಲಗಿದ್ದಳು. ಎರಡು ದಿನವೂ ದಾರಿ ನಡೆದದ್ದರಿಂದ ಅವಳ ಮೈಯೆಲ್ಲ ನೋವಾಗಿತ್ತು. ಗಾಢನಿದ್ರೆ ಹತ್ತಿದ್ದರೆ ದಣಿವು ಹೋಗುತ್ತಿತ್ತೇನೋ! ಆದರೆ ಏನು ಮಾಡಿದರೂ ನಿದ್ರೆ ಬರಲಿಲ್ಲ.

ಅವಳಿಗೆ ಬಹಳ ಬೇಸರವಾಯಿತು. ಅಲ್ಲಿಯೇ ಮಲಗಿದ ಪದ್ಮಾಕರನನ್ನು ಎಬ್ಬಿಸಿ ಮಾತನಾಡುತ್ತ ಕೂಡೋಣವೇ ಎಂದು ಒಂದು ಸಲ ಅನಿಸಿತು; ಆದರೆ ಮರುಕ್ಷಣದಲ್ಲಿಯೇ ಮತ್ತೆ ಅನಿಸಿತು, 'ಪಾಪ! ಅವನಿಗೇಕೆ ಸುಮ್ಮನೆ ತೊಂದರೆ? ಅವನ ದೇಹ ಮನಸ್ಸುಗಳೆರಡೂ ದಣಿದಿವೆ; ನಿದ್ರೆ ಹತ್ತಿದ್ದರೆ ಒಳ್ಳೇದಾಯಿತಲ್ಲ!' ಎಂದು ಹಾಗೇ ಹೊರಳಿ ಮಲಗಿದಳು.

ಕೊಂಚ ಹೊತ್ತಿನ ತರುವಾಯ ಅವಳಿಗೇಕೋ, ಪದ್ಮಾಕರನು ಅವಳನ್ನು ಕೂಗಿದಂತೆನಿಸಿತು. ಶಕುಂತಲೆ ಕೇಳಿದಳು,

"ನೀನಿನ್ನೂ ಎಚ್ಚರಾಗಿಯೇ ಇದ್ದೀಯಾ? ನನಗೆನಿಸಿತು, ನಿದ್ರೆ ಹತ್ತಿರಬಹುದೆಂದು."

"ಛೀ, ನಿದ್ರೆಯೆಲ್ಲಿಯದು? ಏನು ಮಾಡಿದರೂ ಹತ್ತುವಂತಿಲ್ಲ." ಅವನೆಂದನು.

"ಹಾಂ, ನಿನ್ನಿನ ಘಟನೆಯನ್ನು ಕುರಿತು ವಿಚಾರ ಮಾಡುತ್ತಿರಬಹುದು; ಅದಕ್ಕೆ ಹಾಗಾಗಿದೆ—"

"ಇಲ್ಲ, ಬರೇ ವಿಚಾರಮಾಡಿ ಉಪಯೋಗವಿಲ್ಲವೆಂದು ಆ ವಿಷಯವನ್ನು ಅಲ್ಲಿಗೇ ಬಿಟ್ಟುಬಿಟ್ಟಿದ್ದೇನೆ."

"ಮತ್ತೆ ಎಂತಹ ವಿಚಾರ ನಡೆದಿದೆ ಹಾಗಾದರೆ?"

“ ಅವೇ ! ಅದೊಂದು ವಿಚಾರ; ಅವಕ್ಕಾಗಿ ಇದುವರೆಗೆ ಹೊತ್ತೇ ದೊರೆತಿರಲಿಲ್ಲ. ”

“ ಅದಾವ ವಿಚಾರವದು ? ”

ಪದ್ಮಾಕರನು ಎದ್ದು ಕುಳಿತೆಂದನು, “ ಇದು ನೋಡು, ನಿನಗೆ ನಿದ್ರೆ ಬರದಿದ್ದರೆ, ನಾವಿಬ್ಬರೂ ಎದ್ದು ಕುಳಿತು ಮಾತಾಡೋಣ........ ಆ ದಿವಸ ಶ್ಯಾಮೂನೊಡನೆ ನನ್ನನ್ನು ಕಾಣಲು ಬಂದವಳು, ಈಗ ನಾಲ್ಕು ತಿಂಗಳಾದರೂ ನನ್ನೊಡನೆಯೇ ಅಡ್ಡಾಡುತ್ತಿದ್ದೀ; ನಾವಿಬ್ಬರೂ ಹಗಲು ರಾತ್ರಿ ಒಂದೆಡೆಗಿದ್ದರೂ ನಮ್ಮ ನಮ್ಮ ಜೀವನದ ವಿಚಾರವಾಗಿ ಮಾತಾಡಲು ಇದುವರೆಗೆ ವೇಳೆಯೇ ದೊರೆತಿಲ್ಲ; ನಮ್ಮ ಕೆಲಸವೇ ಅಂತಹದಾಗಿ ಬಿಟ್ಟಿದೆ; ನೀನಾದರೂ ನನ್ನನ್ನು ಅಂತಃಕರಣಪೂರ್ವಕವಾಗಿ ಸುಖವಾಗಿದ್ದೇನೆಯೇ ಅಥವಾ ಇಲ್ಲವೇ ಎಂದು ಒಂದು ದಿನವಾದರೂ ಕೇಳಿಲ್ಲ; ನನಗಾದರೂ ಹಾಗೆಯೇ ನಿನ್ನನ್ನು ಕೇಳುವದಾಗಿಲ್ಲ; ನನ್ನ ಕಾರ್ಯದಲ್ಲಿ ಸಹಾಯ ಮಾಡಲು ನೀನು ಉತ್ಸಾಹದಿಂದ ಮುಂದೆ ಬಂದಿ, ನಾನು ಒಪ್ಪಿದೆ; ಎಂತಹ ಪ್ರಸಂಗದಲ್ಲಿಯೂ ನೀನು ಹಿಂಜರಿಯಲಿಲ್ಲ; ಆದರಿಂದ ನಿನ್ನಲ್ಲಿದ್ದ ನನ್ನ ಆದರ ಮತ್ತೂ ಹೆಚ್ಚಾಯಿತು. ಆದರೆ ನನ್ನನ್ನು ಸುತ್ತುವರಿದ ನೂರಾರು ಜನರಲ್ಲಿ ನೀನೂ ಒಬ್ಬಳು ಎಂಬ ದೃಷ್ಟಿಯಿಂದ ಇದುವರೆಗೆ ನೋಡುತ್ತಿದ್ದೆ. ಬೇರೊಂದು ದೃಷ್ಟಿಯಿಂದ ನೋಡಲು ನನಗೆ ಸಮಯವೇ ದೊರೆತಿರಲಿಲ್ಲ. ಸಂಕಟದಲ್ಲಿ ಸಿಕ್ಕದ್ದರಿಂದಲೇ ಯಾಕಾಗಲೊಲ್ಲದು, ಕೆಲಸದ ಜಂಜಡದಿಂದ ದೂರವಾಗಿ ಇಂದು ಈ ಏಕಾಂತ ಸ್ಥಳದಲ್ಲಿ ನಾವಿಬ್ಬರೂ ಕಲೆತಿದ್ದೇವೆ. ಕೆಲವೊಂದು ಮಾತುಗಳನ್ನು ಕುರಿತು ನಿನ್ನನ್ನು ಕೇಳಬೇಕೆಂದು ನನಗೆನಿಸುತ್ತದೆ. ಕೇಳಿದ ಹೊರತು ನನಗೆ ಸಮಾಧಾನವಿಲ್ಲ. ”

ಶಕುಂತಲೆ ಎದ್ದು ಗೋಡೆಗೆ ಒರಗಿ ಕುಳಿತಳು. ಪದ್ಮಾಕರನ ಮಾತು ಮುಗಿದರೂ ಅವಳು ಕೆಲಕ್ಷಣ ಹಾಗೇ ಕುಳಿತಿದ್ದಳು. ಬಳಿಕ ತಾನೇ ಹೇಳಿದಳು.

“ ನಿನಗೇನು ಕೇಳುವದಿದೆಯೋ ಕೇಳು. ”

ಇಲ್ಲಿ ಬಂದು ಈ ಚಳವಳಿಯಲ್ಲಿ ಭಾಗ ವಹಿಸಲು ಬಾಳಾಸಾಹೇಬರು —ಬಾಳಾಸಾಹೇಬ ಎಂದೇ ಅಲ್ಲವೇ ಅವರ ಹೆಸರು—ನಿನಗೆ ಒಪ್ಪಿಗೆ ಕೊಟ್ಟ

ಡ್ಡಾರೆಯೇ ? "

" ಅವರ ಒಪ್ಪಿಗೆಯನ್ನು ನಾನು ಕೇಳಿಲ್ಲ. "

" ಅಂದರೆ ? "

" ನನ್ನ ಒಪ್ಪಿಗೆಯಿಲ್ಲದಾಗ ತಮಗೇನು ಬೇಕೋ ಅದನ್ನು ಮಾಡಲು ಅವರು ಹೊರಟು ಹೋದರು; ಬಳಿಕ ನಾನಿಲ್ಲಿ ತಂದೆಯವರ ಕಡೆಗೆ ಬಂದೆ. ನಿನ್ನ ಕಾರ್ಯದಲ್ಲಿ ನಾನು ಸಹಾಯ ಮಾಡಲು ತಂದೆಯವರ ಒಪ್ಪಿಗೆ ಅವಶ್ಯವಿತ್ತು. ಆ ಮೇರೆಗೆ ನಾನು ಅವರ ಒಪ್ಪಿಗೆಯನ್ನು ಪಡೆದೇ ಇಲ್ಲಿಗೆ ಬಂದಿದ್ದೇನೆ. "

" ಹಾಗೆಂದರೆ ? ನಿನ್ನ ಮಾತಿನ ಅರ್ಥವೇ ನನಗಾಗಲಿಲ್ಲ. "

" ಅರ್ಥವಾಗಬೇಕಾದರೆ ನಿನಗೆ ಬಹಳಷ್ಟು ಹೇಳಬೇಕಾಗುತ್ತದೆ. "

" ಹೇಳು ಹಾಗಾದರೆ. "

ಶಕುಂತಲೆ ಒಂದೆರಡು ನಿಮಿಷ ಹಾಗೇ ಕುಳಿತಳು.

ಇನ್ನು ಪದ್ಮಾಕರನಿಗೆ ಮೊದಲಿನಿಂದ ಎಲ್ಲ ವಿಷಯವನ್ನೂ ಹೇಳಬೇಕು;—ನಿರಾಶೆಯಿಂದ ಬಾಳಾಸಾಹೇಬರನ್ನು ಮದುವೆಯಾದದ್ದು, ಮುಂದೆ ಅದರ ಪರಿಣಾಮ, ಸಹಿಸಲಸಾಧ್ಯವಾಗಿ ಅವಳು ತವರುಮನೆಗೆ ಬಂದದ್ದು, ಬಾಳಾಸಾಹೇಬರ ಕಡೆಗೆ ಮತ್ತೆ ಹೋಗುವಂತಿಲ್ಲೆಂಬ ಅವಳ ನಿಶ್ಚಯ, ಇವೆಲ್ಲವುಗಳನ್ನು ಇದೇ ಮೊದಲು ಸಲ ಅವಳು ಪದ್ಮಾಕರನಿಗೆ ಹೇಳಬೇಕಾಗಿತ್ತು.

ಬಾಳಾಸಾಹೇಬರ ಮನಿಯಾರ್ಡರನ್ನು ಹಿಂತಿರುಗಿ ಕಳಿಸಿದ ಮೇಲೆ ಅವರಿಂದ ಬಂದ ಪತ್ರಗಳ ನೆನಪಾಯಿತವಳಿಗೆ! ಅವುಗಳಲ್ಲಿ ಮೊದಲನೆಯ ಪತ್ರವನ್ನು ಬಾಳಾಸಾಹೇಬರು ಬೆಳಗಾವಿಯ ಛಾವಣಿಯಿಂದ ಬರೆದಿದ್ದರು; ಅದರಲ್ಲಿ ಮನಿಯಾರ್ಡರನ್ನು ಕಳಿಸಿದ ವಿಷಯವೂ ಇತ್ತು. ಮತ್ತೆ ಮುಂಬಯಿಯಲ್ಲಿ ಕೊಡಬೇಕಾಗಿದ್ದ ಹಣವನ್ನೆಲ್ಲ ಮುಟ್ಟಿಸಿಬಿಡಬೇಕೆಂದು ಬರೆದಿದ್ದರು. ಸೈನ್ಯಖಾತೆಯಲ್ಲಿಯ ಅವರ ಶಿಕ್ಷಣ ಬೇಗನೇ ಮುಗಿಯುವದಿತ್ತು; ಮುಗಿದ ಮೇಲೆ ಎಲ್ಲಿ ಹೋಗಬೇಕಾಗಬಹುದೆಂಬುದು ಮಾತ್ರ ಗೊತ್ತಿರಲಿಲ್ಲ. ಬಳಿಕ ಮೂರು ವಾರಗಳ ತರುವಾಯ ಬಾಳಾಸಾಹೇಬರ ಎರಡನೆಯ ಪತ್ರ ಬಂತು; ಬಹಳ ಅವಸರದಿಂದ ಅದನ್ನು ಬರೆದಿದ್ದರೆಂದು ಕಾಣುತ್ತದೆ.

"ನಮ್ಮನ್ನು ರಣರಂಗಕ್ಕೆ ಕಳಿಸುತ್ತಿದ್ದಾರೆ, ಎಲ್ಲಿಯೆಂಬುದನ್ನು ತಿಳಿಸಲು ಸರಕಾರದ ಒಪ್ಪಿಗೆಯಿಲ್ಲ; ಆದರೆ ನೀನು ಮುಂಬಯಿಗೆ ಈ ವಿಳಾಸಕ್ಕೆ ಬರೆದರೆ ನನಗೆ ನಿನ್ನ ಪತ್ರ ಸಿಗುವದು" ಎಂದಿಷ್ಟೇ ಆ ಪತ್ರದಲ್ಲಿತ್ತು. ತಮ್ಮ ಸಹಿಯ ಕೆಳಗೆ ತಾಜಾ ಕಲಮಿನಲ್ಲಿ ಮತ್ತೊಂದು ವಾಕ್ಯವನ್ನು ಬೇರೆ ಕೂಡಿಸಿದ್ದರು. "ನೀನು ಮನಿಯಾರ್ಡರನ್ನು ಹಿಂತಿರುಗಿ ಏಕೆ ಕಳಿಸಿದೆಯೋ ತಿಳಿಯಲಿಲ್ಲ; ಇದರ ಜೊತೆಗೆ ನಾಲ್ಕು ನೂರು ರೂಪಾಯಿಯ ಚೆಕ್ಕನ್ನು ಕಳಿಸಿದ್ದೇನೆ." ಶಕುಂತಲೆ ಆ ಚೆಕ್ಕನ್ನೂ ಹಿಂದಿರುಗಿ ಕಳಿಸಿದ್ದಳು. ಆ ಬಳಿಕ ಎರಡು ತಿಂಗಳ ಮೇಲೆ ಅವರಿಂದ ಮತ್ತೊಂದು ಪತ್ರ ಬಂತು; ಅದರಲ್ಲಿದ್ದುದು ಕೇವಲ ನಾಲ್ಕು ಸಾಲಿನ ಕ್ಷೇಮದ ವಾರ್ತೆ! ಪತ್ರ ಎಲ್ಲಿಂದ ಬಂದಿತೆಂಬುದನ್ನೂ ತಿಳಿಯಲು ಮಾರ್ಗವಿರಲಿಲ್ಲ. ಅಧಿಕಾರಿಗಳು ಅದು ಬಂದ ಊರಿನ ಹೆಸರು ತಿಳಿಯದಷ್ಟು ವ್ಯವಸ್ಥೆ ಮಾಡಿದ್ದರು. ಅದರ ಜೊತೆಗೆ ಕೇಸರಿ ಕಾಗದದ ಇನ್ನೊಂದು ಚೀಟಿಯಿತ್ತು. ಮುಂಬಯಿಯಲ್ಲಿ ಸೈನ್ಯದ ಮುಖ್ಯ ಕಚೇರಿಯ ವಿಳಾಸಕ್ಕೆ ಪತ್ರ ಬರೆದರೆ ಅದನ್ನು ಅವರಿಗೆ ಕಳಿಸಲಾಗುವದೆಂದು ಇಂಗ್ಲೀಷಿನಲ್ಲಿ ಟಾಯಿಪ ಮಾಡಿದ್ದರು. ಆ ಪತ್ರಕ್ಕೂ ಶಕುಂತಲೆ ಉತ್ತರ ಬರೆದಿರಲಿಲ್ಲ; ಅದರ ಮೇಲೆ ಬಾಳಾಸಾಹೇಬರಿಂದಲೂ ಪತ್ರ ಬಂದಿರಲಿಲ್ಲ.

ಈ ವಿಷಯವನ್ನೆಲ್ಲ ಪದ್ಮಾಕರನಿಗೆ ಹೇಳುವದೇ ಅಥವಾ ಇಲ್ಲವೇ?— ಈ ಯೋಚನೆಯಿಂದ ಶಕುಂತಲೆ ಒಂದು ಕ್ಷಣ ಹಾಗೇ ಕುಳಿತಿದ್ದಳು. ಈ ಅವಳ ಮೌನಕ್ಕೆ ಇದೊಂದೇ ಕಾರಣವಾಗಿರಲಿಲ್ಲ; ಇನ್ನೂ ಒಂದು ಕಾರಣವಿತ್ತು. ತನ್ನ ಜೀವನವು ಹೀಗಾಗಲು ಪದ್ಮಾಕರನ ದೋಷವೂ ಕೆಲವಂಶಗಳಲ್ಲಿದೆ ಎಂದು ಅವಳಗೀಗ ಮನವರಿಕೆಯಾಗತೊಡಗಿತ್ತು. ಅವನು ಅವಳ ಪ್ರೇಮವನ್ನು ಸ್ವೀಕರಿಸಿದ್ದರೆ—ಅಥವಾ ಅದೇಕೆ ಅದನ್ನು ಬರೀ ಕಂಡುಕೊಂಡಿದ್ದರೂ ಅವಳ ಜೀವನ ಈ ಮಾರ್ಗವನ್ನು ಹಿಡಿಯುತ್ತಿರಲಿಲ್ಲ. ಜೀವನವು ಸುಖಮಯವೇ ಆಗುತ್ತಿತ್ತೆಂದು ಹೇಳುವದು ಸಾಧ್ಯವಿಲ್ಲ. ಆದರೆ ಈ ದುಃಖ ಮಾತ್ರ ಪಾಲಿಗೆ ಬರುತ್ತಿರಲಿಲ್ಲ!

ಆದರೆ ಇದೆಲ್ಲವನ್ನೂ ಹೇಳುವದಾದರೆ, ನಿಜವಾಗಿಯೂ ಪದ್ಮಾಕರನಿಗೆ ದುಃಖವಾಗುತ್ತಿತ್ತು. ಹಾಗಾದರೆ ಏನು ಹೇಳಬೇಕು?—ನಾನು ಹೀಗೆಲ್ಲ ಹೇಳುವದರಿಂದ ಆಗುವ ಲಾಭವಾದರೂ ಏನು? ಅದಕ್ಕಿಂತ ನನ್ನ ಮನಸ್ಸಿ

ನಲ್ಲಿ ಹುದುಗಿದ ದುಃಖವನ್ನು ಒಂದು ಶಬ್ದದಿಂದಲೂ ಹೊರಗೆಡವದೆ, ಸಹಿಸಿ ಕೊಂಡಿದ್ದರೆ ಅದೇ ಒಳ್ಳೇದಲ್ಲವೇ?

ಹೀಗೆಲ್ಲ ವಿಚಾರ ಮಾಡುತ್ತ ಗೋಡೆಗೆ ಒರಗಿ ಕುಳಿತವಳು ಹಾಗೇ ಕುಳಿತುಬಿಟ್ಟಳು. ಕೆಳಗಿನಿಂದ ಗಾಂಜಾದ ಉಗ್ರವಾಸನೆ ಬಂತು. ಜೊತೆಗೆ ಕೆಮ್ಮಿದ ಸಪ್ಪಳವೂ ಕೇಳಿಸಿತು. ಮುದುಕನು ಚಿಲಿಮೆಯನ್ನು ಸೇದುತ್ತ ಕುಳಿತಿದ್ದನು.

ಶಕುಂತಲೆ ಸುಮ್ಮನೆ ಕುಳಿದಿದ್ದನ್ನು ಕಂಡು ಪದ್ಮಾಕರನೆಂದ, " ನೀನು ಮಾತೇಕೆ ಆಡುವದಿಲ್ಲ?"

" ಇಲ್ಲಿಯ ವರೆಗಾದರೂ ಎಲ್ಲಿ ಮಾತಾಡಿದ್ದೇನೆ?........ ಈಗಾದರೂ ಮಾತಾಡಿ ಪ್ರಯೋಜನವೇನು?" ಶಕುಂತಲೆ ನುಡಿದಳು.

" ಹಾಗೆಲ್ಲs ಮಾತಾಡಬೇಡ, ನನಗೆ ವಿಷಯವನ್ನೆಲ್ಲ ಹೇಳು."

" ಹೇಳತೊಡಗಿದರೆ ನಿನ್ನನ್ನೂ ಹೀಯಾಳಿಸಿ ನಾನು ಬಯ್ದು ಬಿಡ ಬಹುದು."

" ಹೀಗೋ!" ಪದ್ಮಾಕರನು ಬೆಚ್ಚಿಬಿದ್ದನು. " ಹಾಗಿದ್ದರೂ ಅಡ್ಡಿ ಯಿಲ್ಲ, ಹೇಳಿಬಿಡು. ನನ್ನ ಬಗ್ಗೆ ನಿನ್ನಲ್ಲಿ ಅಂತಹ ಭಾವನೆಯುಂಟಾಗಿದ್ದರೆ ಅದು ನನಗೆ ತಿಳಿದಷ್ಟೂ ಗುಣ. ಹೇಳು, ಮನದಲ್ಲಿ ಏನನ್ನೂ ಬಚ್ಚಿಡಬೇಡ, ಎಲ್ಲವನ್ನೂ ಹೇಳಿಬಿಡು."

ಆದರೂ ಶಕುಂತಲೆ ಮೌನವಾಗಿಯೇ ಇದ್ದಳು; ಮುಖವನ್ನು ಮೇಲೆತ್ತಿ ಅವಳು ಪದ್ಮಾಕರನೆಡೆಗೆ ದೃಷ್ಟಿಯನ್ನು ಚೆಲ್ಲಿದಳು. ಅವರೀರ್ವರ ಕಣ್ಣುಗಳು ಮಾತನಾಡಿದವು. ಬಳಿಕ ಶಕುಂತಲೆ ತನ್ನ ಮಾತನ್ನು ಪ್ರಾರಂಭಿಸಿದಳು.

ಪದ್ಮಾಕರನ ಬಗ್ಗೆ ತನ್ನಲ್ಲಿ ಪ್ರೇಮವಂಕುರಿಸಿದಂದಿನಿಂದ, ಶ್ಯಾಮೂ ಭೋಸಲೆಯೊಡನೆ ಕೊಲ್ಹಾಪುರದಲ್ಲಿ ಗುಪ್ತ ಸ್ಥಳದಲ್ಲಿ ಅವನನ್ನು ತಾನು ಕಾಣಲು ಬಂದ ದಿನದ ವರೆಗೆ, ಶಕುಂತಲೆ ಎಲ್ಲ ವಿಷಯವನ್ನು ಹೇಳಿಬಿಟ್ಟಳು. ಮನಸ್ಸಿನಲ್ಲಿಯ ದುಃಖಾವೇಗವನ್ನು ಹತ್ತಿಕ್ಕಿ ಅವಳು ಹೇಳುತ್ತಿದ್ದಳು.

" ಮತ್ತೆ ಇದೆಲ್ಲಕ್ಕೆ, ಪದ್ಮಾಕರ, ನೀನೇ ಕಾರಣನಾಗಿದ್ದೀ; ಅಂಜ ಬೇಡ, ನನಗನಿಸಿದ್ದನ್ನು ಹೇಳಿದ್ದೇನೆ. ನನ್ನ ಜೀವನವು ಹೀಗಾಗಲು ನೀನೇ

ಬಹುಮುಟ್ಟಿಗೆ ಕಾರಣ; ನಿನ್ನ ಈ ನಿರ್ವಿಕಾರ ಗಂಭೀರ ಸ್ವಭಾವದ ಮೂಲಕ ನನಗೆಂತಹ ನಿರಾಶೆಯನ್ನು ಸಹಿಸಬೇಕಾಯಿತು! ನನ್ನ ಅಂತಃಕರಣದಲ್ಲಿ ಅದೆಂತಹ ದುಃಖವುಂಟಾಯಿತು! ಅದೆಲ್ಲ ನೆನಪಾದರೆ ನಿನ್ನ ಮೇಲೆ ಎಂತಹ ಸಿಟ್ಟು ಬರುತ್ತದೆ!! ನಿನ್ನ ಬಗ್ಗೆ ನನ್ನಲ್ಲಿ ಅಪಾರವಾದ ಪ್ರೇಮವಿತ್ತು, ಇನ್ನೂ ಇದೆ. ಅದರಿಂದಲೇ ನನ್ನ ಮನಸ್ಸಿನ ತೂಕವಿನ್ನೂ ತಪ್ಪಿಲ್ಲ; ಆದರೂ ನಿನ್ನ ಬಗ್ಗೆ ಒಂದೊಂದು ಸಲ ಎಲ್ಲಿಯದೋ ದ್ವೇಷ ನನ್ನಲ್ಲಿ ಮೂಡುತ್ತದೆ. ನಿನ್ನ ಬಗ್ಗೆ ತಿರಸ್ಕಾರವುಂಟಾಗುತ್ತದೆ. ನಿನ್ನ ಬಗ್ಗೆ ನನ್ನಲ್ಲಿದ್ದ ಅಪಾರ ಪ್ರೇಮ ಕೂಡ ನಿನಗೆ ಕಾಣಿಸಬಾರದೆಂದರೆ ನೀನು ನಿಜದಾಗಿಯೂ ಕುರುಡನಾಗಿದ್ದೆಯಾ?"

ಶಕುಂತಲೆ ಸ್ತಬ್ಧಳಾಗಿ ಕುಳಿತುಬಿಟ್ಟಳು.

ಹೀಗೆಯೇ ಮಾತಾಡುತ್ತ ಕುಳಿತರೆ ತನ್ನ ಭಾವನೆಗಳೇ ತನ್ನ ಸ್ವಾಧೀನದಲ್ಲಿ ಉಳಿಯಲಿಕ್ಕಿಲ್ಲವೆಂಬ ಭೀತಿ ಅವಳನ್ನಾವರಿಸಿತೇನೋ! ಕಲಕಲ ನಿನಾದದಿಂದ ಹರಿಯುವ ನೀರನ್ನು ಒಡ್ಡು ಹಾಕಿ ಅಡ್ಡಗಟ್ಟಿದಂತೆ ತುಟಿಯ ತುದಿಗೆ ಬಂದ ಶಬ್ದಗಳನ್ನು ಅವಳು ಒಳ್ಳೇ ಶಕ್ತಿಯಿಂದ ಹತ್ತಿಕ್ಕಿಬಿಟ್ಟಳು.

"ನಾನು ಕುರುಡನಾಗಿರಲಿಲ್ಲ; ನನಗೆಲ್ಲವೂ ಸ್ಪಷ್ಟವಾಗಿ ಕಾಣಿಸುತ್ತಿತ್ತು. ನೀನು ನನ್ನ ಬಗ್ಗೆ ಮೊದಲನೆಯ ಪ್ರೇಮಸೂಚಕ ಶಬ್ದವನ್ನು ನುಡಿದಂದೇ ನಾನದನ್ನು ಕಂಡುಕೊಂಡಿದ್ದೇನೆ." ಪದ್ಮಾಕರನು ಮೃದುವಾಗಿ ನುಡಿದನು.

ಶಕುಂತಲೆ ಒಮ್ಮೆಲೆ ಬೆಚ್ಚಿಬಿದ್ದು ಅವನೆಡೆಗೆ ನೋಡಿದಳು; ಕೆಲಕ್ಷಣ ಮೌನವಾಗಿಯೇ ಕುಳಿತಿದ್ದು ಬಳಿಕ, ಮೆಲ್ಲಗೆ ಮತ್ತೆ ಪ್ರಾರಂಭ ಮಾಡಿದಳು.

"ಇದನ್ನೇನು ಹೇಳುತ್ತಿದ್ದೀ ಪದ್ಮಾಕರ?"

"ಇಷ್ಟೇ ಅಲ್ಲ, ನೀನು ಎಂದಿನಿಂದ ನನ್ನನ್ನು ಪ್ರೀತಿಸಲು ಪ್ರಾರಂಭ ಮಾಡಿದಿಯೋ ಅದಕ್ಕೆ ಮೊದಲೇ ನಾನು ನಿನ್ನವನಾಗಿದ್ದೆ ಎಂಬುದೂ ನನಗೆ ಗೊತ್ತಿತ್ತು."

"ಆಂ, ಇದೇನು ನಾನು ಕೇಳುತ್ತಿದ್ದೇನೆ! ನೀನು ನಿಜವಾಗಿಯೂ ನನ್ನನ್ನು ಪ್ರೀತಿಸುತ್ತಿದ್ದೆಯಾ? ಹೀಗಿದ್ದೂ ಕೂಡ ನನಗೆ ಒಂದು ದಿನವಾದರೂ ಉತ್ತರ ದೊರೆಯಲಿಲ್ಲವಲ್ಲ! ನಿರ್ವಿಕಾರನಾಗಿದ್ದು ಕುರುಡನಂತೆ

ವರ್ತಿಸಿದಿ !! ನಾನಾದರೂ ನಿನಗೆ ಶಿಕ್ಷೆಯಾದಂದು ನನ್ನ ಜೀವನದಿಂದಲೇ ಹೋಗಿಬಿಟ್ಟೆಯೆಂದು ತಿಳಿದೆ........; ಅಯ್ಯೋ, ಒಂದು ಶಬ್ದದಿಂದಲಾದರೂ ನನಗೆ ತಿಳಿಸಬಾರದಿತ್ತೇ ? "

"ಇಲ್ಲ ಶಕುಂತಲಾ, ನಾನು ಕುರುಡನಾಗಿದ್ದೆ; ಒಂದು ಶಬ್ದದಿಂದಲೂ ನನ್ನ ಭಾವನೆಯನ್ನು ಹೊರಗೆಡವಲಿಲ್ಲ ನಿಜ. ಆದರೆ ನಾನು ಸರಿಯಾದುದನ್ನೇ ಮಾಡಿದೆ; ನಾನು ಹೇಳುವದು ನಿನಗೆ ಒಪ್ಪಿಗೆಯಾದೀತು ಅಥವಾ ಒಂದು ವೇಳೆ ಆಗಲಿಕ್ಕೂ ಇಲ್ಲ; ಹೇಳುವದನ್ನಂತೂ ಮೊದಲು ಕೇಳಿಕೊ. ಈಗೆರಡು ತಲೆಗಳಿಂದಲೂ ನಮ್ಮ ಮನೆತನದ ಹಿರಿಯರು ಅನುಭವಿಸಿದಂಥ ಅಧಿಕಾರದ ಬಲಾತ್ಕಾರ ಮತ್ತು ಅಸಹಾಯ ದಾಸ್ಯಗಳು, ನಾನು ಚಿಕ್ಕವನಿದ್ದಾಗಿನಿಂದಲೇ ನನ್ನ ಮನಸ್ಸಿನ ಮೇಲೆ ಪ್ರಬಲವಾದ ಆಘಾತವನ್ನುಂಟು ಮಾಡಿದ್ದವು. ನನಗೆ ತಿಳಿಯಹತ್ತಿದಂದಿನಿಂದ, ಇವೆರಡನ್ನು ಎದುರಿಸುವಲ್ಲಿಯೇ ನನ್ನ ಜೀವನಶಕ್ತಿಯ ಸಾರ್ಥಕತೆ ಎಂಬುದು ಮತ್ತಷ್ಟು ಮನದಟ್ಟಾಯಿತು. ಅಂದಿನಿಂದ ನಾನು ಆ ಕಾರ್ಯದ ದಾಸನಾಗಿಬಿಟ್ಟೆ......... ನಾನು ನಿಶ್ಚಿಂತನಾಗಿದ್ದು, ಇನ್ನುಳಿದ ಜನರಂತೆಯೇ ಆಯುಷ್ಯವನ್ನು ಕಳೆಯುವ ಇಚ್ಛೆಯುಳ್ಳವನಾಗಿದ್ದರೆ ನಿನ್ನ ಪ್ರೇಮವನ್ನು ಸ್ವೀಕರಿಸಲು ಕ್ಷಣಾರ್ಧ ವಿಲಂಬವನ್ನೂ ಮಾಡುತ್ತಿರಲಿಲ್ಲ. ಆದರೆ ನನ್ನದು ಆ ಪ್ರೇಮದ ಮಾರ್ಗವಾಗಿರಲಿಲ್ಲ. ನನ್ನ ಮಾರ್ಗ ತೀರ ಭಿನ್ನವಿತ್ತು; ಈಗಾದರೂ ನಾನು ಅನುಸರಿಸುತ್ತಿರುವದು ಅದೇ ಮಾರ್ಗವನ್ನೇ ಎಂಬುದು ನಿನಗೆ ಗೊತ್ತಿದೆ. ನಮ್ಮ ದೇಶವು ಸ್ವತಂತ್ರವಿದ್ದಿದ್ದರೆ— ಹೋಗು, ಆ ಮಾತಾದರೂ ಏಕೆ ಬೇಕು ?—ಆದರೆ ನಿನಗಿಷ್ಟೇ ಹೇಳುತ್ತೇನೆ, ನಮ್ಮ ಮಾತೃಭೂಮಿಯ ಸ್ವಾತಂತ್ರ್ಯ ಮತ್ತು ಸೇವೆ ಇವೆರಡರ ತರುವಾಯ ನಿನಗೆ ಪ್ರಿಯವಾದುದು ಪವಿತ್ರವಾದುದು ಯಾವುದು ಎಂದು ಯಾರಾದರೂ ಕೇಳಿದರೆ ನಾನಿಷ್ಟೇ ಹೇಳಬಲ್ಲೆ, 'ಶಕುಂತಲೆ ಮತ್ತು ಅವಳ ಪ್ರೇಮ.' "

ಪದ್ಮಾಕರನು ಸುಮ್ಮನಾದನು.

ಅವನ ಸ್ತಬ್ಧತೆಯ ಕಾರಣ ಶಕುಂತಲೆಗೆ ಕೂಡಲೇ ತಿಳಿಯಿತು. ಹಿಂದೊಂದು ಸಲ ಮಾತನಾಡುತ್ತಿದ್ದಂತೆಯೇ ಅವಳೂ ಸುಮ್ಮನಾಗಿ ಬಿಟ್ಟಿದ್ದಳಲ್ಲವೇ ? ಹಾಗೆಯೇ ತಡೆಯಿಲ್ಲದೆ ಮಾತನಾಡುತ್ತ ಹೊರಟರೆ, ಭಾವ

ನಾವೇಶಕ್ಕೆ ಬಲಿಬೀಳಬಹುದೆಂಬ ಅಂಜಿಕೆಯಿಂದಲೇ ಅವನೂ ಹಾಗೆ ಮಾಡಿರ ಬೇಕು !

ಶಕುಂತಲೆಗೇನೋ ಎನಿಸುತ್ತಿತ್ತು. ಪದ್ಮಾಕರನು ಹೀಗೆಯೇ ಮಾತ ನಾಡುತ್ತಿರಬೇಕೆಂದು; ಆದರೆ ಅವನು ಮಾತಾಡಿದ್ದಷ್ಟು ಕೂಡ ಅವಳಿಗೀಗ ಮೆಲುಕಾಡಿಸಲು ಸಾಕಾಗಿತ್ತು. ಅವಳ ಪ್ರೇಮವನ್ನು ಅವನು ಕಂಡುಕೊಂಡಿ ದ್ದನು, ಇಷ್ಟೇ ಅಲ್ಲ, ಅವನ ಹೃದಯದಲ್ಲಿಯೂ ಅವಳಿಗಾಗಿ ಉತ್ಕಟ ಪ್ರೇಮವಿತ್ತು; ಸ್ವದೇಶಪ್ರೇಮವೊಂದನ್ನು ಬಿಟ್ಟರೆ ಅವನಿಗೆ ಆ ಪ್ರೇಮವೇ ಅಮೌಲ್ಯವಾದುದು. ಅದು ಶಕುಂತಲೆಗೆ ಈಗ ಗೊತ್ತಾಗಿತ್ತು. ಅದರಿಂದ ಅವಳಿಗೊಂದು ಬಗೆಯ ಅಭೂತಪೂರ್ವ ಆನಂದವೆನಿಸುತ್ತಿತ್ತು, ಧನ್ಯತೆಯೆನಿ ಸುತ್ತಿತ್ತು. ಲೌಕಿಕ ದೃಷ್ಟಿಯಿಂದ ಅವಳ ಪ್ರೇಮವೇನೋ ಸಫಲವಾಗಿರ ಲಿಲ್ಲ, ಅದು ಆಗುವದೆಂಬ ಆಶೆಯೂ ಉಳಿದಿರಲಿಲ್ಲ. ಆದರೆ ಇದುವರೆಗೂ 'ಪ್ರೇಮ ವಿಫಲವಾಯಿತಲ್ಲ' ಎಂದು ಅವಳನ್ನಾವರಿಸಿದ್ದ ನಿರಾಶೆಯ ದುಃಖ, ಅವನ ಮಾತಿನಿಂದ ದೂರವಾಯಿತು. "ಸ್ವಾತಂತ್ರ್ಯ ಮತ್ತು ದೇಶಸೇವೆಯ ತರುವಾಯ ಅತ್ಯಂತ ಪ್ರಿಯವಾದ ಮತ್ತು ಪವಿತ್ರವಾದ ವಸ್ತುವು ಯಾವುದು ಎಂದು ಯಾರಾದರೂ ನನ್ನನ್ನು ಕೇಳಿದರೆ ನಾನು ಹೇಳುವದಿದೇ, 'ಶಕುಂತಲೆ ಮತ್ತು ಅವಳ ಪ್ರೇಮ." ಈ ಮಾತುಗಳನ್ನು ಅವನೇ ಹೇಳಿದ್ದನಲ್ಲವೇ ? ಇದಕ್ಕಿಂತ ಹೆಚ್ಚಿಗೆ ಅವಳಿಗೇನು ಬೇಕಾಗಿತ್ತು ? ಈ ಮಾತುಗಳನ್ನು ಕೇಳಿ ಅವಳಲ್ಲೊಂದು ಅದ್ಭುತ ಶಕ್ತಿಯೇ ಸಂಚರಿಸಿತು. ನಿರಾಶೆ ದುಃಖಗಳು ಇನ್ನು ಅವಳನ್ನು ಮುಟ್ಟುವಂತಿರಲಿಲ್ಲ. ಯಾವ ಬಗೆಯ ಜೀವನ ಅವಳ ಪಾಲಿಗೆ ಬಂದರೂ ಅವಳಿಗದು ಅಸಹ್ಯವೆನಿಸುವಂತಿರಲಿಲ್ಲ. ಇನ್ನು ಮುಂದೆ ಅವಳೊಂದು ಬಗೆಯ ಗುಪ್ತ ಆನಂದದ ಉನ್ಮಾದದಲ್ಲಿಯೇ ಇರುವವಳಿದ್ದಳು.

ಈ ರೀತಿಯ ಭಾವನೆಯ ಅಲೆಗಳು ತಲೆಯಲ್ಲಿ ಏಳುತ್ತಿದ್ದುದರಿಂದ ಶಕುಂತಲೆ ಮಾತನಾಡದೆ ಸುಮ್ಮನೇ ಕುಳಿತಿದ್ದಳು.

ಪದ್ಮಾಕರನು ಎದ್ದು ಅವಳ ಸಮೀಪಕ್ಕೆ ಬರಲಿಲ್ಲ. ಅವನು ಬರ ಬೇಕೆಂದು ಅವಳಿಗೂ ಅನಿಸಲಿಲ್ಲ.

ಅವರಿಬ್ಬರೂ ಹೀಗೆಯೇ ದೂರದಲ್ಲಿ—ಪ್ರೇಮದ ಸಾಮ್ರಾಜ್ಯ ಮೋಹ

ದಿಂದ ಜಪ್ಪಿಸಿ ದೂರದಲ್ಲಿ—ಇರುವವರಿದ್ದರು. ಈ ಅಂತರದಲ್ಲಿಯೇ ಅವರೀರ್ವರ ಪ್ರೇಮದ ನಿಜವಾದ ಸಾಮರ್ಥ್ಯ ಮತ್ತು ಪಾವಿತ್ರ್ಯಗಳಡಗಿದ್ದವು.

ಎಷ್ಟೋ ಹೊತ್ತಿಗೆ ಪದ್ಮಾಕರನು ತನ್ನ ಸ್ಥಳದಿಂದೆದ್ದನು; ಬಳಿಯಲ್ಲಿಯೇ ಇದ್ದ ಕಿಟಕಿಯ ಹತ್ತಿರ ಹೋಗಿ ನಿಂತು ಹಣಿಕಿಕ್ಕಿ ನುಡಿದನು.

" ಆ ! ಎಷ್ಟು ಸುಂದರವಾಗಿದೆ ಬೆಳದಿಂಗಳು ! ಎಲ್ಲ ದಿಕ್ಕುಗಳೂ ಈ ಮೋಹಕ ಪ್ರಕಾಶದಿಂದ ಪ್ರಫುಲ್ಲಿತವಾಗಿವೆ ! "

ಶಕುಂತಲೆ ಎದ್ದು ತನ್ನ ಬಳಿಗೆ ಬಂದು, ಆ ಹೊರಗಿನ ಸೃಷ್ಟಿಸೌಂದರ್ಯವನ್ನು ಸವಿಯಬೇಕೆಂದು ಅವನೂ ಹೇಳಲಿಲ್ಲ, ಅವಳಾದರೂ ಎದ್ದು ಅವನ ಬಳಿಗೆ ಹೋಗಲಿಲ್ಲ. ಹೊರಗಿನ ಸೌಂದರ್ಯವನ್ನು ನೋಡಿ ಅವಳಿಗೆ ಆಗ ಬೇಕಾದುದಾದರೂ ಏನು ? ಅವಳ ಅಂತಃಕರಣದಲ್ಲಿ ಮಿತಿಯಿಲ್ಲದ ಸಾಮರ್ಥ್ಯ ಸಮಾಧಾನಗಳ ಸೌಂದರ್ಯ ತುಂಬಿ ತುಳುಕುತ್ತಿದ್ದಿಲ್ಲವೇ ? ಅದೆಂತಹ ಅಪೂರ್ವ ಸೌಂದರ್ಯ !

## ೧೧

ಶಕುಂತಲೆ ಕಣ್ತೆರೆದು ತಂದೆಯ ಕಡೆಗೆ ನೋಡಿದಳು; ಅವರ ಮುಖದ ಮೇಲೆ ಮೂಡಿದ್ದ ವಿಲಕ್ಷಣ ಗಾಂಭೀರ್ಯವನ್ನು ಇದಕ್ಕೆ ಮೊದಲು ಅವಳೆಂದೂ ಕಂಡಿರಲಿಲ್ಲ.

ಕೆಲನಿಮಿಷಗಳ ಹಿಂದೆ ಅವರೆಂದಿದ್ದರು, "ಛಬೂ, ಮಧೂ, ನಿನ್ನ ತಾಯಿ, ಎಲ್ಲರನ್ನೂ ಇಲ್ಲಿ ಹೊರಗೆ ಕರೆದುಕೊಂಡು ಬಾ; ನಾವೆಲ್ಲರೂ ಕೂಡಿ ಪ್ರಾರ್ಥನೆ ಮಾಡೋಣ" ಎಂದು; ಆಗಲೇ ಶಕುಂತಲೆಗೆ ಆಶ್ಚರ್ಯವೆನಿಸಿತು, "ಭಾವೂ ಪ್ರಾರ್ಥನೆ ಮಾಡಬೇಕೆನ್ನುತ್ತಿದ್ದಾರೆ; ಅದೇನು ಕಾರಣ?"

ಈಶ್ವರನ ಪೂಜೆ ಪ್ರಾರ್ಥನೆಗಳಂತೂ ಒತ್ತಟ್ಟಿಗುಳಿಯಲಿ, ಈಶ್ವರನ ಅಸ್ತಿತ್ವದ ಬಗ್ಗೆ ಕೂಡ ಅವರೆಂದೂ ವಿಶ್ವಾಸವನ್ನು ತೋರಿಸುತ್ತಿರಲಿಲ್ಲ; ಪರಮೇಶ್ವರನಿಗೆ ಅಂಜಿ ನಡೆಯಬೇಕು, ಅವನ ದೃಷ್ಟಿಯಿಂದ ನಾವೆಲ್ಲರೂ ಪಾಪಿಗಳು, ಪರಮೇಶ್ವರನ ಕೃಪೆಯೊಂದಿದ್ದರೆ ಏನು ಬೇಕಾದರೂ ಆದೀತು, ಎಂಬ ಮಾತುಗಳನ್ನು ಅವಳ ಬಾಲ್ಯದಲ್ಲಿ ಅವಳಿಗಾಗಲಿ ಅಥವಾ ಅವಳ ತಂಗಿ ತಮ್ಮಂದಿರಿಗಾಗಲಿ ಅವರೆಂದೂ ಹೇಳಿರಲಿಲ್ಲ. ಇಷ್ಟೇ ಏಕೆ, ಈಗ ಮೂರು ವಾರಗಳ ಹಿಂದೆ ಛಬೂ ಜಡ್ಡಿನಿಂದ ಹಾಸಿಗೆ ಹಿಡಿದಿದ್ದಳು. ಈ

ವಿಷಯ ಭಾವೂಸಾಹೇಬರಿಂದ ತಿಳಿದಾಗ, ಪದ್ಮಾಕರನನ್ನು ಬಿಟ್ಟು ಶಕುಂತಲೆ ಮನೆಗೆ ಬಂದಳು; ಛಬೂ ಕಟ್ಟಿನ ಜ್ವರದಿಂದ ಬಳಲುತ್ತಿದ್ದಳು; ಭಾವೂಸಾಹೇಬರಾಗಲಿ, ಶಕುಂತಲೆಯಾಗಲಿ ಹಗಲು ರಾತ್ರಿ ಅವಳ ಹಾಸಿಗೆಯ ಬಳಿ ಇದ್ದೇ ಇರುತ್ತಿದ್ದರು. ಒಂದು ರಾತ್ರಿ ಮಗುವಿನ ಜಡ್ಡು ವಿಕೋಪಕ್ಕೇ ಹೋಯಿತು; ಎಲ್ಲರೂ ಗಾಬರಿಯಾದರು; ಆದರೆ ಭಾವೂಸಾಹೇಬರ ಧೈರ್ಯ ಕದಲಲಿಲ್ಲ; ಆಗಲೂ ಅವರು ಪ್ರಾರ್ಥನೆಯ ಮಾತನ್ನೆತ್ತಲಿಲ್ಲ.

ಆದರೆ ಈಗ ಪ್ರಾರ್ಥನೆ ಮಾಡಬೇಕೆನ್ನುತ್ತಿದ್ದಾರೆ!

ಅಂದು ಗಾಂಧೀಜಿಯವರ ಉಪವಾಸದ ಹನ್ನೊಂದನೆಯ ದಿನ; ಪುಣೆಯ ಆಗಾಖಾನ ಅರಮನೆಯಲ್ಲಿ ಗಾಂಧೀಜಿ ಮಲಗಿದ್ದರು. ಆದರೆ ವಿಶ್ವದ ಲಕ್ಷ್ಯವೆಲ್ಲ ಅವರ ಪ್ರಕೃತಿಯ ಕಡೆಗೆ; ಆ ಚಿರಸ್ಮರಣೀಯ ಐತಿಹಾಸಿಕ ಘಟನೆಯ ಸಾದ್ಯಂತ ವಿವರವನ್ನು ಇಂಗ್ಲಂಡ, ಅಮೇರಿಕೆಯ ಜನರಿಗೆ ದಿನವೂ ತಿಳಿಸುವದಕ್ಕಾಗಿ, ಅಲ್ಲಿಯ ದೊಡ್ಡ ದೊಡ್ಡ ವೃತ್ತಪತ್ರಗಳ ಸುದ್ದಿಗಾರರು ಆಗಾಖಾನ ಅರಮನೆಯ ಆವಾರದಲ್ಲಿ ಅಡ್ಡಾಡುತ್ತಿದ್ದರು. ಹಿಂದುಸ್ಥಾನದ ಮೂಲೆಮೂಲೆಗೂ ತಾಸುತಾಸಿಗೆ ಗಾಂಧೀಜಿಯವರ ಪ್ರಕೃತಿಯ ವಿವರ ಟೆಲಿಫೋನಿನ ಮೂಲಕ ಹೋಗುತ್ತಿತ್ತು. ಆದರೆ ಇಂದಿನ ಸುದ್ದಿ ಚಿಂತಾಜನಕವಾಗಿತ್ತು. ಆ ಸುದ್ದಿ ಬಂದೊಡನೆ ಶಾಲೆ ಕಾಲೇಜುಗಳ ವಿದ್ಯಾರ್ಥಿಗಳು ಹೊರಬಿದ್ದು ಬಂದರು. ಅಂಗಡಿಗಳು ಮುಚ್ಚಲ್ಪಟ್ಟವು; ಜನರ ವ್ಯವಹಾರವೆಲ್ಲ ನಿಂತುಹೋಯಿತು. ಪ್ರತಿಯೊಬ್ಬನ ಮುಖದ ಮೇಲೆಯೂ ವ್ಯಕ್ತವಾಗುತ್ತಿದ್ದುದು ಒಂದೇ ಒಂದು ಚಿಂತೆ—ಗಾಂಧೀಜಿಯವರ ಪ್ರಾಣ ಸುರಕ್ಷಿತವಾಗಿ ಉಳಿಯುವದೇ ಇಲ್ಲವೇ ?

ಭಾವೂ ಅವಳಿಗೆ ಹೇಳಿದರು, "ನಾವೆಲ್ಲರೂ ಒಟ್ಟಿಗೇ ಕುಳಿತು ಪ್ರಾರ್ಥನೆ ಮಾಡೋಣ,, ಅದನ್ನು ಕೇಳಿ ಮೊದಲು ಅವಳಿಗೆ ಆಶ್ಚರ್ಯವೆನಿಸಿದರೂ ಹಿಂದಿನಿಂದ ತಲೆಯಲ್ಲಿ ವಿಚಾರ ಬಂತು—ತನಗೆ ಅತ್ಯಂತ ಪ್ರಿಯನಾದಂಥ ವ್ಯಕ್ತಿಯ ಮೇಲೆ ಸಂಕಟ ಕಡಿದುಕೊಂಡು ಬಿದ್ದರೆ, ಎಂತಹ ಮನುಷ್ಯನ ಧೈರ್ಯವೂ ಕರಗಿ ಹೋಗುತ್ತದೆ; ಅವನು ನಮ್ರನಾಗುತ್ತಾನೆ. ಅಸಹಾಯನಾಗುತ್ತಾನೆ; ಆ ವ್ಯಕ್ತಿಯ ರಕ್ಷಣೆ ಮಾಡುವದು ಯಾವ ಒಂದು ಅಜ್ಞಾತ ಶಕ್ತಿಯ ಕಡೆಗಿದೆಯೋ, ಆ ಶಕ್ತಿಗೆ ಶರಣು ಹೋಗಲು ಸಿದ್ಧನಾಗುತ್ತಾನೆ.

ಶಕುಂತಲೆ ತನ್ನ ತಾಯಿ, ತಂಗಿ, ತಮ್ಮಂದಿರನ್ನು ಕರೆದುಕೊಂಡು ಹೊರಗೆ ಬಂದಳು; ಎಲ್ಲರೂ ಕಣ್ಣುಮುಚ್ಚಿ ಕೈಜೋಡಿಸಿ ಕುಳಿತರು. ಭಾವೂ ಗಂಭೀರವಾಗಿ ಆದರೆ ಮೃದುವಾಗಿ ಹೇಳತೊಡಗಿದರು; ಯಾವ ಶಕ್ತಿಯ ಆವಾಹನೆಯನ್ನು ಅವರು ಮಾಡುತ್ತಿದ್ದರೋ ಯಾರಿಗೆ ಗೊತ್ತು? ಆದರೆ ಅಂತಃಕರಣ ಪೂರ್ವಕವಾಗಿ ಆ ಶಕ್ತಿಗೆ ಬೇಡಿಕೊಳ್ಳುತ್ತಿದ್ದರು. ಕೊನೆಗೆ ಅವರ ಕುತ್ತಿಗೆಯ ಶಿರ ಬಿಗಿದುಬಂದವು; ಮಾತುಗಳು ಹೊರಡದಾದವು. ಮಾತಿಗೆ ಬದಲಾಗಿ ಗಾಂಧೀಜಿಯವರ ಪ್ರಿಯ ಗೀತವಾದ "ವೈಷ್ಣವ ಜನ ತೋ" ಅವರ ಬಾಯಿಂದ ಹೊರಬಂದಿತು; ಆ ಗೀತ ಶಕುಂತಲೆಗೂ ಬರುತ್ತಿತ್ತು; ತಂಗಿ ತಮ್ಮಂದಿರಿಗೂ ಕಲಿಸಿದ್ದಳು. ತಂದೆಯ ಸ್ವರದಲ್ಲಿ ಎಲ್ಲರೂ ತಮ್ಮ ಸ್ವರವನ್ನು ಸೇರಿಸಿದರು.

ಗೀತ ಮುಗಿದೊಡನೆಯೇ ಭಾವೂ ಸ್ತಬ್ಧರಾಗಿ ಕುಳಿತರು. ಶಕುಂತಲೆಯ ಅಂತಃಕರಣದಲ್ಲಿಯ ಸ್ತಬ್ಧತೆ ಆ ಸ್ತಬ್ಧತೆಯನ್ನು ಕಂಡುಕೊಂಡಿತು. ಆಗ ಅವಳಿಗೆನಿಸಿತು—ಈ ಕ್ಷಣಕ್ಕೆ ದೇಶದಲ್ಲಿಯ ಮನೆಮನೆಗಳಲ್ಲಿ ಕೋಟ್ಯಾವಧಿ ಜನರ ಅಂತಃಕರಣದಲ್ಲಿಯ ಸ್ತಬ್ಧತೆ ಪ್ರಚಂಡ ಪ್ರವಾಹವಾಗಿ ಗಾಂಧೀಜಿಯವರೆಡೆಗೆ ಹರಿಯುತ್ತಿರಬೇಕು. ಆ ಪ್ರವಾಹದಲ್ಲಿ ಅದೆಂತಹ ಶಕ್ತಿಯಿದ್ದಿರಬೇಕು! ಆ ಶಕ್ತಿಯ ಒಂದಂಶ ತನ್ನಲ್ಲೂ ಇದೆಯಲ್ಲವೇ? ಎಂಬ ಅಭಿಮಾನ ಅವಳಲ್ಲಿ ಜಾಗೃತವಾಯಿತು; ಮೈಮೇಲೆ ರೋಮಾಂಚನಗಳೆದ್ದವು. ಆದರೆ ಈ ವಿಶ್ವಾಸಾಭಿಮಾನಗಳು ಕೂಡಲೇ ಮಾಯವಾಗಿ ತಾನೊಂದು ದುರೂಹ ಎತ್ತರದ ಮೇಲಿಂದ ಕೆಳಗೆ ಬೀಳುತ್ತಿದ್ದಂತೆ ಅವಳಿಗೆನಿಸಿತು.

ಅವಳು ಕಣ್ದೆರೆದು ತಂದೆಯ ಕಡೆಗೆ ನೋಡಿದಳು, ಎಂದೂ ಕಾಣದ ಗಾಂಭೀರ್ಯ ಅವರ ಮುಖದ ಮೇಲೆ ಇಂದು ಅವಳಿಗೆ ಕಾಣಿಸಿತು.

ಮರುದಿನವೇ ವಾರ್ತೆ ಬಂತು— ಗಾಂಧೀಜಿಯವರ ಪ್ರಾಣಕ್ಕೇನೂ ತೊಂದರೆಯಿಲ್ಲ ಎಂದು ನಿಶ್ಚಿತವಾಗಿ ಹೇಳಲು ಬರುವಂತಿಲ್ಲವಾದರೂ ಅವರ ಪ್ರಕೃತಿಯಲ್ಲಿ ಕೊಂಚ ಗುಣವಿದೆ. ಮುಂದೆ ಮೂರು ನಾಲ್ಕು ದಿನಗಳಲ್ಲಿಯೂ ವಾರ್ತೆ ಆಶಾದಾಯಕವಾಗಿತ್ತು. ಇಪ್ಪತ್ತೊಂದನೆಯ ದಿನ ಈ ಉಪವಾಸದ ದಿವ್ಯದಿಂದ ಗಾಂಧೀಜಿ ಸುಖರೂಪವಾಗಿ ಪಾರಾಗುವರೆಂದು ಜನ ನುಡಿಯತೊಡಗಿದರು. ಗಾಂಧೀಜಿ ಉಪವಾಸವನ್ನು ಮುಗಿಸಿದ ವಾರ್ತೆ ದೇಶದ

ಜನರನ್ನೆಲ್ಲ ಆನಂದದಲ್ಲಿ ಮುಳುಗಿಸಿತು. ಆದರೆ ಈ ಆನಂದದಲ್ಲಿಯೂ ಒಂದು ಶಲ್ಯ ಜನರ ಮನವನ್ನು ಚುಚ್ಚುತ್ತಿತ್ತು. ಗಾಂಧೀಜಿಯವರ ಉಪ ವಾಸದ ಸಂಕಲ್ಪ ತಿಳಿದ ಮೇಲೆ ಯಾವ ಕರಾರುಗಳೂ ಇಲ್ಲದೆ ಅವರನ್ನು ಬಿಡುಗಡೆ ಮಾಡಬೇಕಾಗಿತ್ತು. ಈ ಅಭಿಪ್ರಾಯ ಕೇವಲ ಹಿಂದೀಯರದಿಷ್ಟೇ ಆಗಿರಲಿಲ್ಲ; ನಾಲ್ಕೂ ಖಂಡಗಳಲ್ಲಿಯ ವಿಚಾರವಂತ ಮುಂದಾಳುಗಳದೂ ಆಗಿತ್ತು. ಆದರೆ ಕರಾರುಗಳಿಲ್ಲದೆ ಅವರನ್ನು ಬಿಡುಗಡೆ ಮಾಡಬಾರದೆಂಬುದು ಸರಕಾರದ ಹಟ!

ಇನ್ನುಳಿದವರ ಜೊತೆಗೆ ಶಕುಂತಲೆಗೆ ಈ ದುಃಖವಂತೂ ಆಗಿಯೇ ಆಗಿತ್ತು. ಇದರೊಡನೆ ಮನಸ್ತಾಪವನ್ನುಂಟು ಮಾಡುವ ಇನ್ನೊಂದು ಶಲ್ಯವೂ ಅವಳಿಗೆ ಚುಚ್ಚುತ್ತಿತ್ತು. ದೇಶದಲ್ಲಿ ಇಂತಹ ಘಟನೆಗಳು ನಡೆಯು ತ್ತಿರುವಾಗ ಅವಳ ಬಾಳಾಸಾಹೇಬರು ಎಲ್ಲಿದ್ದರು? ಸರಿಯಾಗಿ ವಿಚಾರ ಮಾಡಲೂ ಕೂಡ ಒಪ್ಪದೆ ಅವಳನ್ನು ಬಿಟ್ಟು ಹೊರಟುಹೋಗಿದ್ದರು. ಈಗ ಯಾವ ರಣರಂಗದಲ್ಲಿದ್ದಿರಬಹುದು?

ಯಾವುದೋ! ಅವಳಿಗೆ ಇದೂವರೆಗೂ ಗೊತ್ತಿರಲಿಲ್ಲ.

ತಂಗಿಯ ಪ್ರಕೃತಿಯ ಬಗ್ಗೆ ಭಾವೂಸಾಹೇಬರಿಂದ ಅವಳಿಗೆ ಸುದಿ ತಿಳಿದೊಡನೆ ಎಲ್ಲವನ್ನೂ ಬಿಟ್ಟುಕೊಟ್ಟು ಅವಳು ಮನೆಗೆ ಓಡಿ ಬಂದಳು. ಆಗ ಎಂಟು ಹತ್ತು ದಿನ ಮೊದಲು ಬಂದಿದ್ದ ಬಾಳಾಸಾಹೇಬರ ಪತ್ರವನ್ನು ಭಾವೂ ಅವಳಿಗೆ ಕೊಟ್ಟರು. ರಣಕ್ಷೇತ್ರದ ಛಾವಣಿಯಿಂದ ಬಾಳಾಸಾಹೇ ಬರು ಬರೆದ ಎರಡನೆಯ ಪತ್ರವಿದು. ಮೊದಲಿನ ಪತ್ರದಂತೆಯೇ ಈ ಪತ್ರದ ಮೇಲಿನ ವಿಳಾಸವನ್ನೂ ತಿಳಿಯದಂತೆ ವ್ಯವಸ್ಥೆ ಮಾಡಿದ್ದರು. ಇದರಂ ತೆಯೇ ಪತ್ರದಲ್ಲಿಯ ಎಷ್ಟೋ ವಿಷಯವನ್ನೂ ತಿಳಿಯದಂತೆ ಗೆರೆ ಹೊಡೆ ದಿದ್ದರು; ಇನ್ನು ತಿಳಿಯತಕ್ಕ ಉಳಿದ ವಿಷಯವೆಂದರೆ ಅವರ ಕ್ಷೇಮ ಸಮಾ ಚಾರ. ಪತ್ರದಲ್ಲಿಯ ಒಂದೆರಡು ಸಾಲುಗಳನ್ನು ಮಾತ್ರ ಸೆನ್ಸಾರ ಮಾಡು ವವರು ಕಾಟು ಹಾಕಿದ್ದಿಲ್ಲ. ಅದೇಕೆ ಹಾಗೆ ಬಿಟ್ಟಿದ್ದರೋ ಯಾರಿಗೆ ಗೊತ್ತು? ಆ ಸಾಲುಗಳು ಓದಲು ಬರುವಂತಿದ್ದವು. ಓದಿ ಶಕುಂತಲೆಗೆ ವಿಚಿತ್ರವೆನಿ ಸಿತು. "ಸುತ್ತಲೂ ನಡೆಯುತ್ತಿರುವ ಘಟನೆಗಳನ್ನು ನೋಡುತ್ತಿರುವದಾಗು ವದಿಲ್ಲ. ಒಂದೊಂದು ಸಲ ಎನಿಸುತ್ತದೆ, ಇಂತಹ ಪ್ರಚಂಡ ಪ್ರಮಾಣದಲ್ಲಿ

ಈ ಸಂಹಾರ ಏತಕ್ಕಾಗಿ ನಡೆದಿದೆ? ಎಂದು ........ ನೀನು ಹೇಳಿದುದೆಲ್ಲ ಈಗ ನೆನಪಾಗುತ್ತಿದೆ; ಬಳಿಕ ವಿಚಾರ ಮಾಡುತ್ತೇನೆ—ನೀನು ತಪ್ಪಿದೆಯೋ ಅಥವಾ ನಿನಗೆ ತಪ್ಪೆಂದು ಹೇಳುವ ನಾನು ತಪ್ಪಿದೆನೋ? ಎಂದು........"

ಪತ್ರದಲ್ಲಿ ಹೇಗೋ ತಪ್ಪಿ ಉಳಿದ ಆ ಒಂದೆರಡು ಹರಕು ಮುರಕು ವಾಕ್ಯಗಳಿಗೆ ಅರ್ಥ ಹಚ್ಚಲು ಅವಳಿಗೆ ಬರುತ್ತಿರಲಿಲ್ಲ. ಏನಿದ್ದರೂ ಇತ್ತ ಹಿಂದೀಯರ ಸ್ವಾತಂತ್ರ್ಯದ ಬೇಡಿಕೆಯನ್ನು ಸರಕಾರವು ಹಿಂದೆ ನೂಕುತ್ತಿದ್ದಾಗ, ಅವಳ ಪತಿಯು ರಣಾಂಗಣದಲ್ಲಿದ್ದುದು ಅವಳಿಗೆ ಎಲ್ಲಿಲ್ಲದ ಮನಸ್ತಾಪವನ್ನುಂಟು ಮಾಡಿತ್ತು. ಯಾತರಿಂದಲೂ ಅದು ಕಡಿಮೆಯಾಗುವಂತಿರಲಿಲ್ಲ.

ಈ ಮನಸ್ತಾಪವನ್ನು ದೂರ ಮಾಡಲು ಅವಳಿಗೆ ಒಂದೇ ದಾರಿಯಿತ್ತು. ಅದೆಂದರೆ ಮತ್ತೆ ಪದ್ಮಾಕರನ ಕಡೆಗೆ ಹೋಗಿ ಅವನ ಕಾರ್ಯದಲ್ಲಿ ಲೀನವಾಗುವದು. ತಂಗಿಯ ಪ್ರಕೃತಿ ಈಗ ಗುಣವಾಗತೊಡಗಿತ್ತು. 'ನಾನು ಮತ್ತೆ ಪದ್ಮಾಕರನ ಕಡೆಗೆ ಹೋಗಲೇ?' ಎಂದು ತಂದೆಯುನ್ನು ಕೇಳಲು ಏನೂ ಅಡ್ಡಿಯಿರಲಿಲ್ಲ. ಕಳೆದ ಐದಾರು ದಿನಗಳಲ್ಲಿ ಅವಳಿಗೆ ಪದ್ಮಾಕರನಿಂದ ಸುದ್ದಿಯೇ ಇರಲಿಲ್ಲ. ಆದರೆ ಅವನು ಅಲ್ಲಿಗೆ ಬೇಗನೆ ಬರುವನೆಂಬ ಆಶೆ ಅವಳಿಗಿತ್ತು. ಅವನು ಬಂದೊಡನೆಯೇ ತಂದೆಯುವರನ್ನು ಕೇಳಿ ಅವನೊಡನೆ ಹೊರಟು ಹೋಗುವದೆಂದು ಅವಳು ಮನದಲ್ಲಿಯೇ ನಿಶ್ಚಯಿಸಿದಳು.

ಆದರೆ ಮಾರ್ಚ ಹನ್ನೆರಡನೆಯ ತಾರೀಖಿನ ಸುಮಾರಿಗೆ ಪದ್ಮಾಕರನ ಬಗ್ಗೆ ಮರ್ಮಭೇದಿಯಾದ ಸುದ್ದಿ ಬಂದಿತು! ಇನ್ನುಳಿದ ಏಳೆಂಟು ಜನ ಕಾರ್ಯಕರ್ತರೊಡನೆ ಅವನೂ ಸೆರೆ ಹಿಡಿಯಲ್ಪಟ್ಟಿದ್ದನು. ಅವನ ಮೇಲೆ ಭಯಂಕರ ಆರೋಪಗಳಿದ್ದವು. ನಿಯಮದಂತೆ ಖಟ್ಲೆ ಪ್ರಾರಂಭವಾಗುವದಕ್ಕೆ ಮೊದಲಿನ ಅಪರಾಧಿ ಅವನೀಗ ಆಗಿದ್ದನು.

ಸುದ್ದಿ ಶಕುಂತಲೆಗೆ ಮುಟ್ಟಿದರೂ ಅವಳಿಗೆ ವಿಶ್ವಾಸವೆನಿಸಲಿಲ್ಲ. ಈ ಸಂಕಟ ಪದ್ಮಾಕರನ ಮೇಲೆ ಬರುವ ಸಂಭವವಿತ್ತೇನೋ ಸರಿ; ಆದರೆ ಅದರಲ್ಲಿ ಸಿಗದಿರುವ ದಕ್ಷತೆ ಅವನಲ್ಲಿ ಅಪಾರವಾಗಿತ್ತು. ಪ್ರಸಂಗ ಬಂದರೆ ತಮ್ಮ ಪ್ರಾಣವನ್ನು ಬಲಿ ಕೊಟ್ಟಾದರೂ ಅವನನ್ನು ಉಳಿಸಿಕೊಳ್ಳಲು ಜನ

ಸಿದ್ಧರಿದ್ದರೆಂಬುದನ್ನು ಅವಳು ಪದ್ಮಾಕರನ ಸಹವಾಸದಲ್ಲಿ ನಾಲ್ಕು ತಿಂಗಳು ಇದ್ದು ಪ್ರತ್ಯಕ್ಷ ಕಂಡಿದ್ದಳು. ಪದ್ಮಾಕರನು ಸೆರೆ ಹಿಡಿಯಲ್ಪಟ್ಟನೆಂಬ ಸುದ್ದಿಯಿಂದ ಅವಳಿಗೆ ದುಃಖವೂ ಆಯಿತು, ಅಷ್ಟೇ ಆಶ್ಚರ್ಯವೂ ಎನಿಸಿತು. ಜಗತ್ತಿನಲ್ಲಿ ಸ್ವಾರ್ಥಸಾಧನೆಗಾಗಿ ವಿಶ್ವಾಸಘಾತ ಮಾಡುವ ಜನರೇನು ಕಡಿಮೆಯೇ? ಎಂಬ ವಿಚಾರವು ಅವಳ ತಲೆಯಲ್ಲಿ ಸುಳಿದು ಹೋಯಿತು.

ಅದರೊಡನೆಯೇ ಶಕುಂತಲೆಗೆ ಯುದ್ಧಕ್ಕಾಗಿ ಹೋದ ಬಾಳಾಸಾಹೇಬರ ನೆನಪಾಯಿತು. ಅದೂ ಕೂಡ ಸನ್ಮಾನದ ಸ್ವಾರ್ಥಕ್ಕಾಗಿ, ಹೊಟ್ಟೆಯ ಪಾಡಿಗಾಗಿ ಅಲ್ಲವೇ ?

ತಾನು ಬಾಳಾಸಾಹೇಬರ ಪತ್ನಿ ಎಂದೆನಿಸಿಕೊಳ್ಳಲು ಆ ಕ್ಷಣ ಅವಳಿಗೆ ಅತ್ಯಂತ ನಾಚಿಕೆಯೆನಿಸಿತು. ಒಂದೆಡೆ ಪದ್ಮಾಕರನು ಅನೇಕ ವರ್ಷಗಳ ಸೆರೆಮನೆವಾಸದ ದಾರಿ ನೋಡುತ್ತಿದ್ದಾನೆ, ಒಂದೆಡೆ ಬಾಳಾಸಾಹೇಬರು ಯುದ್ಧದಲ್ಲಿ ತೊಡಗಿದ್ದಾರೆ. ಈ ಇಬ್ಬರು ವ್ಯಕ್ತಿಗಳ ಪರಸ್ಪರ ವಿರುದ್ಧ ಜೀವನದಲ್ಲಿ ಅವಳ ಜೀವನ ಸಿಲುಕಿಬಿದ್ದಿತ್ತು !

ಎಪ್ರಿಲ್ ತಿಂಗಳಿನಲ್ಲಿ ಪದ್ಮಾಕರನ ಖಟ್ಲೆಗೆ ಪ್ರಾರಂಭವಾಯಿತು. ಮೊದಲು ಈ ತರಹದ ಖಟ್ಲೆಗಳಲ್ಲಿ ಪದ್ಮಾಕರನಿಗಾಗಿದ್ದ ಶಿಕ್ಷೆಯನ್ನು ನೋಡಿದರೆ, ಇದರ ಮುಂದೆ ಅವುಗಳು ಏನೂ ಅಲ್ಲ; ಈ ಸಲದ ಶಿಕ್ಷೆಯ ಸ್ವರೂಪ ಉಗ್ರವಾಗಿ ಕಾಣುತ್ತಿತ್ತು. ಖಟ್ಲೆಯನ್ನು .ಕೇಳಲು ಶಕುಂತಲೆ ದಿನಾಲು ಭಾವೂಸಾಹೇಬರೊಡನೆ ಕೋರ್ಟಿಗೆ ಹೋಗುತ್ತಿದ್ದಳು. ಅಲ್ಲಿ ಅನೇಕ ಸಲ ಪದ್ಮಾಕರ ಶಕುಂತಲೆಯರ ದೃಷ್ಟಿಯ ಭೆಟ್ಟಿಯಾಗುತ್ತಿತ್ತು. ಹೀಗೆ ನೋಟಗಳು ಒಂದಾದ ಬಳಿಕ ಬಹಳ ಹೊತ್ತಿನ ವರೆಗೆ ಪದ್ಮಾಕರನು ತನ್ನ ದೃಷ್ಟಿಯನ್ನು ಬೇರೆಡೆಗೆ ಹೊರಳಿಸುತ್ತಿರಲಿಲ್ಲ. ನಟ್ಟ ನೋಟದಿಂದ ಅವಳೆಡೆಗೇ ನೋಡುತ್ತಿದ್ದನು. ಅವಳಿಗೆ ಮಾತ್ರ ಅರ್ಥವಾಗುವಂತೆ ಮುಗುಳ್ನಗೆ ನಗುತ್ತಿದ್ದನು. ಆ ನಗೆ ಕಂಡೊಡನೆ ಭಿವಾ ಕಾಕಾನ ಮನೆಯಲ್ಲಿ ಅಂದು ರಾತ್ರಿ ಆವನಾಡಿದ ಮಾತು ಅವಳಿಗೆ ನೆನಪಾಗುತ್ತಿತ್ತು. "....ಅದರ ತರುವಾಯ್ರ ಅತ್ಯಂತ ಪ್ರಿಯವಾದ ಮತ್ತು ಪವಿತ್ರವಾದ ವಸ್ತು ಯಾವುದು ಎಂದು ಯಾರಾದರೂ ನನ್ನನ್ನು ಕೇಳಿದರೆ........" ಈ ಶಬ್ದಗಳ ನೆನಪಾಗಿ ಅವಳ ಕುತ್ತಿಗೆಯ ಶಿರ ಒಮ್ಮೆಲೆ ಬಿಗಿದುಬರುತ್ತಿದ್ದವು. "........ಆದರೆ ನನ್ನದು

ಪ್ರೇಮದ ಮಾರ್ಗವಾಗಿರಲಿಲ್ಲ; ನನ್ನ ದಾರಿ ಬೇರೆಯೇ ಆಗಿತ್ತು. ಈಗಾದರೂ ನಾನು ಅದೇ ಮಾರ್ಗದಿಂದ ಸಾಗುತ್ತಲಿದ್ದೇನೆ...." ಈ ಮಾತುಗಳೂ ಅವಳ ನೆನಪಿಗೆ ಬರುತ್ತಿದ್ದವು. ಶಕುಂತಲೆ ತನ್ನ ನೋಟದಿಂದಲೇ ಅವನಿಗೆ ಉತ್ತರ ಹೇಳುವ ಪ್ರಯತ್ನ ಮಾಡುತ್ತಿದ್ದಳು. "ಅಹುದು ಪದ್ಮಾಕರ, ನೀನು ಆ ಮಾರ್ಗದಿಂದ ಹೋಗುವದು ನನಗೆ ಕಾಣಿಸುತ್ತದೆ. ನಿನ್ನ ಮುಖದ ಮೇಲೆ ಒಡೆದು ಕಾಣುವ ನಿರ್ಭಯತೆ ನಿಜವಾಗಿಯೂ ವೀರನಿಗೆ ಒಪ್ಪುತಕ್ಕಂತಹದು."

ಖಟ್ಲೆ ನಡೆದಾಗ ಪ್ರಶ್ನೋತ್ತರಗಳ ಗೊಂದಲ ನಡೆದೇ ಇರುತ್ತಿತ್ತು. ಸಾಕ್ಷಿದಾರರು ಒಬ್ಬರ ಹಿಂದೊಬ್ಬರು ಬರುತ್ತಿದ್ದರು; ನಡುವೆಯೇ ಇಬ್ಬಣದ ವಕೀಲರೂ ಈರ್ಷೆಗೆ ಬೀಳುತ್ತಿದ್ದರು. ಆದಾವುದರ ಕಡೆಗೂ ಶಕುಂತಲೆಯ ಲಕ್ಷ್ಯವಿದ್ದಿರಲಿಲ್ಲ; ಪದ್ಮಾಕರನನ್ನು ಕಣ್ತುಂಬ ನೋಡುವ ಸಂಧಿ ಇದೇ ಕೊನೆಯದಾಗಬಹುದೋ ಏನೋ ಎಂದು ಅವಳಿಗೆ ವ್ಯಸನ; ಅವನನ್ನು ನೋಡುವ ಆಶೆಯನ್ನು ಪೂರ್ತಿ ಮಾಡಿಕೊಳ್ಳಬೇಕೆಂದು ಅವಳ ಹಟ. ಖಟ್ಲೆ ಪ್ರಾರಂಭವಾಗುವದಕ್ಕೆ ಮೊದಲೇ ಅವಳು ಭಾವೂಸಾಹೇಬರೊಡನೆ ಕೋರ್ಟಿಗೆ ಹೋಗುವಳು. ಖಟ್ಲೆ ಮುಗಿದು ಜನರೆಲ್ಲ ಎದ್ದು ಹೋದರೂ, ಆ ಸ್ಥಳ ಬಿಟ್ಟು ಏಳಬೇಕೆಂಬ ನೆನಪು ಕೂಡ ಅವಳಿಗಿರುತ್ತಿದ್ದಿಲ್ಲ. ಮನೆಗೆ ಬಂದ ಮೇಲೂ ಅವಳೊಬ್ಬಳೇ ಕುಳಿತು "ಪದ್ಮಾಕರನ ಮುಖದ ಮೇಲೆ ಎಂತಹ ಧೈರ್ಯ ಎಂತಹ ಸಮಾಧಾನ ಕಾಣುತ್ತಿತ್ತು!" ಎಂದು ನೆನೆಸಿಕೊಂಡು ಸಮಾಧಾನ ಪಟ್ಟುಕೊಳ್ಳುತ್ತಿದ್ದಳು. ಈ ನೆನಪಿನಿಂದ ಅವಳ ಮನಸ್ಸಿಗೊಂದು ಬಗೆಯ ಶಾಂತಿ ದೊರೆಯುತ್ತಿತ್ತು. ಒಂದೊಂದು ಸಲ ಮಾತ್ರ ಅವಳಿಗೆನಿಸುತ್ತಿತ್ತು, "ಈ ಖಟ್ಲೆ ಬೇಗನೆ ಮುಗಿದು, ಪದ್ಮಾಕರನು ಒಂದು ದಿನ ನನ್ನ ದೃಷ್ಟಿಪಥದಿಂದ ಮಾಯವಾಗಿ ಬಿಡಬಹುದು; ಅವನಿಗೆ ಇಪ್ಪತ್ತು ವರ್ಷದ ಶಿಕ್ಷೆ ಕೂಡ ಆಗುವ ಸಂಭವ........ ಜನರೆನ್ನುತ್ತಾರೆ! ಇಪ್ಪತ್ತು ವರ್ಷ! ಅಲ್ಲಿಯ ವರೆಗೆ ನಾನು ಬದುಕಿಯಾದರೂ ಇರಬಹುದೇ?" ಈ ಕಲ್ಪನೆಯಿಂದ ಅವಳು ಬೆಚ್ಚಿ ಬೀಳುತ್ತಿದ್ದಳು. ಬಳಿಕ ತಾನೇ ಎದ್ದು ತಂದೆಯವರ ಕೋಣೆಗೆ ಹೋಗಿ ಅವರೊಡನೆ ಮಾತನಾಡುತ್ತ ಕುಳಿತುಕೊಳ್ಳುತ್ತಿದ್ದಳು.

ಇಂದಾದರೂ ಅವಳು ತಂದೆಯವರ ಕೋಣೆಯ ಕಡೆಗೆ ಹೀಗೆಯೇ

ಹೊರಳಿದಳು; ಆಗ ಭಾವೂ ಒಂದು ತಾರಿನ ಕಾಗದವನ್ನು ಓದುತ್ತಿದ್ದರು. ಅವಳನ್ನು ನೋಡುತ್ತಲೇ ಹೇಳಿದರು "ಇದೇ ಈಗ ಬಂತು ಈ ತಾರು."

"ಯಾರದು?" ಶಕುಂತಲೆ ಅವಸರದಿಂದ ಕೇಳಿದಳು.

'ನೋಡು' ಎಂದು ಭಾವೂ ಅವಳಿಗೆ ತಾರಿನ ಕಾಗದವನ್ನು ಕೊಟ್ಟರು. ಅದರಲ್ಲಿಯ ಸಹಿಯನ್ನು ಕಂಡು ಶಕುಂತಲೆ ಗೊಂದಲದಲ್ಲಿ ಬಿದ್ದಳು. ಸೈನ್ಯ ದಲ್ಲಿಯ ಒಬ್ಬ ದೊಡ್ಡ ಅಮುಲ್ದಾರರ ಹೆಸರು ಅದಾಗಿರಬೇಕು. ಆದರೆ ಅವರು ತನಗೇಕೆ ತಾರು ಮಾಡಬೇಕು? ಕೂಡಲೆ ಅವಳಿಗೆ ಆ ಸಂಬಂಧ ನೆನಪಾಯಿತು; ಅದರಲ್ಲಿಯ ವಿಷಯವನ್ನೆಲ್ಲ ನೆಟ್ಟಗೆ ಓದಿಕೊಂಡಳು.

ಭಯಂಕರ ಸ್ಫೋಟವೊಂದರಲ್ಲಿ ಸಿಕ್ಕು ಬಾಳಾಸಾಹೇಬರ ಕಣ್ಣುಗಳು ಹೋಗಿದ್ದವು. ರಣಕ್ಷೇತ್ರದಲ್ಲಿಯ ದವಾಖಾನೆಯಲ್ಲಿ ಶಕ್ಯವಿದ್ದಷ್ಟು ಉಪ ಚಾರವನ್ನು ಅವರಿಗೆ ಮಾಡಿದ್ದರು. ಆದರೆ ಸ್ಫೋಟದಲ್ಲಿ ಸಿಕ್ಕು ಸುಟ್ಟಿದ್ದ ರಿಂದ ಅವರ ಕಣ್ಣುಗಳ ದೃಷ್ಟಿ ಮಾಯವಾಗಿ ಬಿಟ್ಟಿತ್ತು. ಇನ್ನು ಮುಂದೆ ಅವರು ಯುದ್ಧ ಮಾಡುವಂತಿರಲಿಲ್ಲ; ಅದಕ್ಕಾಗಿ ಅವರನ್ನು ತಿರುಗಿ ಹಿಂದು ಸ್ಥಾನಕ್ಕೆ ಕಳಿಸಲಾಗಿತ್ತು. ಸದ್ಯ ಅವರು ಮುಂಬಯಿಯ ಸೈನ್ಯದ ದವಾ ಖಾನೆಯಲ್ಲಿದ್ದರು. ಹತ್ತು ದಿನಗಳ ಮಟ್ಟಿಗೆ ಅವರಿಗೆ ಇಳಿದುಕೊಳ್ಳುವ ವ್ಯವಸ್ಥೆ ಅಲ್ಲಿಯೇ ಆಗುವದಿತ್ತು. ಅಷ್ಟರಲ್ಲಿ ಅವರನ್ನು ಮನೆಗೆ ಕರೆದು ಕೊಂಡು ಬರಬೇಕಾಗಿತ್ತು.

ವಿಷಯವನ್ನೆಲ್ಲ ಓದಿದ ಬಳಿಕ ಶಕುಂತಲೆ ತಂದೆಯ ಮುಖವನ್ನು ನೋಡಿದಳು. ಅವಳ ಕಣ್ಣಲ್ಲಿ ನೀರು ತುಂಬಿರಲಿಲ್ಲ ಅಥವಾ ಬಹಳ ದುಃಖ ವಾದಂತೆಯೂ ಅವಳ ಮುಖದ ಮೇಲೆ ವ್ಯಕ್ತವಾಗುತ್ತಿರಲಿಲ್ಲ. ಒಂದೊಂದು ಸಲ ಹೀಗೂ ಆಗುವದುಂಟು—ಅನಪೇಕ್ಷಿತವಾಗಿ ದುಃಖದಾಯಕ ವಾರ್ತೆ ಯೊಂದು ವಜ್ರಪಾತದಂತೆ ಮನುಷ್ಯನ ಹೃದಯದ ಮೇಲೆ ಬಂದು ಅಪ್ಪಳಿ ಸಿದರೆ, ಹೃದಯವು ಕಲ್ಲಾಗಿ ಬಿಡುವದು. ದುಃಖವನ್ನು ಹೊರಚಿಮ್ಮಲು ಬೇಕಾದ ಸಂವೇದನ ಶಕ್ತಿಯೇ ಅದರಲ್ಲಿ ಉಳಿಯುವದಿಲ್ಲ. ಹೊರಗೆ ನೋಡಲು ಮಾತ್ರ ಆ ಮನುಷ್ಯನು ನಿರ್ವಿಕಾರಿಯಾಗಿ ಶಾಂತನಾಗಿ ಕಾಣು ವನು. ಶಕುಂತಲೆಯ ಸ್ಥಿತಿ ಆ ವೇಳೆಗೆ ಹೀಗೆಯೇ ಆಗಿತ್ತೆನ್ನುವದನ್ನು ಭಾವೂ ಕಂಡುಹಿಡಿದರು. 'ತಾಯಿ, ಕುಳಿತುಕೋ' ಎಂದು ಅವಳ

ಭುಜದ ಮೇಲೆ ಕೈಯಿಟ್ಟು ಅವಳನ್ನು ಕುಳ್ಳಿರಿಸಿದರು; ಅವಳೆದುರು ತಾವೂ ಕುಳಿತರು. 'ಇನ್ನು ಹೇಗೆ ಮಾಡುವದು' ಎಂದು ಅವಳನ್ನು ಕೇಳುವದ ರಲ್ಲಿ ಅರ್ಥವಿರಲಿಲ್ಲ. ಅವಳು ಯಾವದೇ ರೀತಿಯಲ್ಲಿ ವಿಚಾರ ಮಾಡುವದು ಸಾಧ್ಯವಿರಲಿಲ್ಲ. ಭಾವೂ ತಮ್ಮಷ್ಟಕ್ಕೆ ತಾವೇ ಬಹಳ ಹೊತ್ತಿನ ವರೆಗೆ ವಿಚಾರಮಾಡಿ ನುಡಿದರು, "ಇಂದೇ ರಾತ್ರಿ ನಾನು ಮುಂಬಯಿಗೆ ಹೋಗಿ ಅವರನ್ನು ಇಲ್ಲಿಯೇ ಕರೆತರುವೆ."

ಭಾವೂಸಾಹೇಬರು ಬಾಳಾಸಾಹೇಬರನ್ನು ಕರೆದುಕೊಂಡು ಬಂದಬಳಿಕ ಅವರನ್ನು ತಾನು ಮೊದಲ ಸಲ ಕಾಣುವ ಪ್ರಸಂಗ ಬಂದಾಗ, ಹೇಗೆ ನಡೆದು ಕೊಳ್ಳಬೇಕು, ಏನು ಮಾತಾಡಬೇಕು ಎಂಬುದೇ ಶಕುಂತಲೆಗೆ ಒಂದು ಸಮಸ್ಯೆ ಯಾಗಿ ಬಿಟ್ಟಿತ್ತು. ಬಾಳಾಸಾಹೇಬರ ಕಡೆಗೆ ಇನ್ನೆಂದೂ ಹೋಗುವಂತಿಲ್ಲ ವೆಂದೇ ನಿಶ್ಚಯಿಸಿ ಅವಳಿಲ್ಲಿಗೆ ಬಂದಿದ್ದಳು. ಆ ಮಾತಿಗೀಗ ಒಂಬತ್ತು ತಿಂಗಳುರುಳಿದವು. ಆದರೆ ಇಂದು ಅವರಾಗಿಯೇ ಅವಳೆಡೆಗೆ ಬರುವವರಿ ದ್ದರು, ಅದೂ ಅಸಹಾಯ ಸ್ಥಿತಿಯಲ್ಲಿ! ಎರಡು ಮೂರು ವರುಷಗಳ ನಂತರ ಯುದ್ಧ ಮುಗಿದ ಮೇಲೆ ಸುದೃಢಕಾಯರಾಗಿಯೇ ಬಾಳಾಸಾಹೇಬರು ಅವ ಳೆಡೆಗೆ ಬಂದು 'ಹೀಗೆಲ್ಲ ಬಿಟ್ಟು ಬರಬೇಡ, ನಡೆ' ಎಂದು ಹೇಳಿದ್ದರೆ, ಅವಳು ಸ್ಪಷ್ಟವಾಗಿ 'ಇನ್ನು ನಾನು ನಿಮ್ಮೆಡೆಗೆ ಬರುವದಿಲ್ಲ' ಎಂದು ತನ್ನ ಮನಸ್ಸಿನ ನಿಶ್ಚಯವನ್ನು ಹೇಳಿಬಿಡುತ್ತಿದ್ದಳು. 'ಬಾಳಾಸಾಹೇಬರು ಹಟ ವಾದಿ; ತನ್ನ ಪರಿವೆ ಅವರಿಗಿಲ್ಲವೇ ಇಲ್ಲ, ತಾನು ಕಡೆತನಕ ತವರುಮನೆಯ ಲ್ಲುಳಿದರೂ ಅವರಿಗೇನು ಅಡ್ಡಿಯಿಲ್ಲ' ಎಂದು ಅವಳ ತರ್ಕ; ಒಂದುವೇಳೆ ತಮ್ಮ ಕಠಿಣ ಹೃದಯವನ್ನು ಬಿಟ್ಟುಕೊಟ್ಟು ಅವಳನ್ನು ಕರೆದೊಯ್ಯಲು ಬಂದರೂ, 'ನಾನು ಬರುವದಿಲ್ಲ' ಎಂದೇ ಅವಳು ಉತ್ತರವನ್ನು ಹೇಳುವ ವಳಿದ್ದಳು. ಬಾಳಾಸಾಹೇಬರು ನಡಕೊಂಡ ರೀತಿಯನ್ನೇ ಸ್ವಾಭಿಮಾನ ಪೂರ್ವಕವಾಗಿ ಅನುಕರಿಸುವದಾದರೆ, ಅವಳಿಗೆ ಹೀಗೆಯೇ ಮಾಡಬೇಕಾ ಗುತ್ತಿತ್ತು. ಆದರೆ ಇಂದು ಆವರು ಬೇರೆಯೇ ಕಾರಣದಿಂದ ತೀರ ಅಸಹಾಯ ಸ್ಥಿತಿಯಲ್ಲಿ ಅವಳೆಡೆಗೆ ಮರಳುವವರಿದ್ದರು. ಅವರ ದೃಷ್ಟಿ ಮಾಯವಾಗಿತ್ತು. ಚಿಕ್ಕ ಮಗುವಿನಂತೆ ಅವರು ಅಸಹಾಯ ಸ್ಥಿತಿಯಲ್ಲಿದ್ದರು; ಅವರಿಗೆ ತಂದೆ ತಾಯಿಗಳಿರಲಿಲ್ಲ; ಆಪ್ತೇಷ್ಟರೆನ್ನುವವರು ಯಾರೂ ಇರಲಿಲ್ಲ; ಏನಾದರೂ

ಅವಳೊಬ್ಬಳೇ ಅವರಿಗೆ! ಮಾನಸಿಕ ದ್ರಷ್ಟಿಯಿಂದ ಅವರಿಬ್ಬರಲ್ಲಿ ಬಹಳ ಅಂತರವಿದ್ದರೂ ಕೂಡ, ಇನ್ನು ಮುಂದೆ ಅವರನ್ನು ನೋಡಿಕೊಳ್ಳುವದು ಅವಳದೇ ಕರ್ತವ್ಯವಾಗಿತ್ತಲ್ಲವೇ? ಅದನ್ನು ಅವಳು ತಪ್ಪಿಸಿಕೊಳ್ಳಬಹುದೇ? "ನೀವು ನನ್ನ ಮಾತನ್ನು ಕೇಳದೆ ಯುದ್ಧಕ್ಕೆ ಹೊರಟುಹೋದಿರಿ. ಆದ್ದರಿಂದ ಕೊನೆಯ ವರೆಗೂ ಇಲ್ಲಿಯೇ ಇರಬೇಕೆಂಬ ನಿಶ್ಚಯದಿಂದ ನಾನು ತವರು ಮನೆಗೆ ಹೊರಟುಬಂದಿದ್ದೇನೆ" ಎಂದು ಅವಳು ಇನ್ನುಮೇಲೆ ಅವರಿಗೆ ಹೇಳಬಹುದಾಗಿತ್ತೇ? ಒಂದುವೇಳೆ ಅವಳು ಹೀಗೆ ಹೇಳಿದಳೆಂದೇ ತಿಳಿ ಯುವಾ; ಆಮೇಲೂ ಅವರು 'ನನ್ನನ್ನು ಬಿಡಬೇಡ' ಎಂದು ಹೇಳಿಕೊಂಡಿ ದ್ದರೆ ಅವಳೇನು ಉತ್ತರ ಕೊಡುತ್ತಿದ್ದಳು? ಮನಸ್ಸಿನಿಂದಲ್ಲದಿದ್ದರೂ ಶರೀರದಿಂದ ಅತ್ಯಂತ ಕೃಶರಾಗಿ ಬಾಳಾಸಾಹೇಬರು ಅವಳೆಡೆಗೆ ಬರುವವ ರಿದ್ದರು. ಬಳಿಕ ಕಠೋರತನದಿಂದ ಅವರೊಡನೆ ಅವಳು ಹೇಗೆ ವರ್ತಿಸ ಬಲ್ಲಳು!........

ಭಾವೂ ಬಾಳಾಸಾಹೇಬರನ್ನು ಕರೆದುಕೊಂಡು ಮುಂದೆರಡು ದಿನಗಳಿಗೆ ಬಂದರು. ಅವರ ಮುಖವೇನೂ ಬಹಳವಾಗಿ ವಿದ್ರೂಪಗೊಂಡಿರಲಿಲ್ಲ; ಆದರೂ ಸುಟ್ಟ ಕಲೆಗಳು ಅಲ್ಲಲ್ಲಿ ಕಾಣುತ್ತಿದ್ದವು. ಕಣ್ಣುಗಳು ತೆರೆದಿ ದ್ದರೂ ದೃಷ್ಟಿಯ ಶಕ್ತಿಯಿಲ್ಲದ್ದರಿಂದ ನಿಸ್ತೇಜವಾಗಿ ಕಾಣುತ್ತಿದ್ದವು. ಶಕುಂ ತಲೆ ಮೊದಲು ಅವರ ಹತ್ತಿರ ಹೋಗಿ ಕುಳಿತಾಗ, ಅವಳ ಬಾಯಿಂದ ಮಾತು ಗಳೇ ಹೊರಡಲಿಲ್ಲ. ಆದರೆ ಅವಳಾಗಿಯೇ ಅವರ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡಾಗ, ಅವರು ಆ ಸ್ಪರ್ಶವನ್ನು ಗುರುತಿಸಿ, ಮೆಲ್ಲಗೆ ಅವಳ ಹೆಸರು ಗೊಂಡು, "ನೀನೇ ಅಲ್ಲವೇ?" ಎಂದು ಕೇಳಿದರು. ಶಕುಂತಲೆ "ಅಹುದು ನಾನೇ" ಎಂದಂದು ಸುಮ್ಮನಾದಳು. ಒಮ್ಮೆಲೆ ಅವಳ ಮನಸ್ಸು ಅವಳಿಗೇ ಶೂನ್ಯವಾದಂತೆನಿಸಿತು. ಒಂದು ಶಬ್ದವೂ ಅವಳ ಮುಖ ದಿಂದ ಹೊರಡಲಿಲ್ಲ. ಮುಂದೆ ಐದಾರು ದಿನಗಳಲ್ಲಿಯೇ ಬಾಳಾಸಾಹೇಬ ಶಕುಂತಲೆಯರ ನಡುವೆ ಅಲ್ಪಸ್ವಲ್ಪ ಸಂಭಾಷಣೆ ನಡೆಯುತ್ತಿತ್ತು. ಆದರೆ ಅವರ ಬಳಿಯಲ್ಲಿ ತಾನೊಬ್ಬಳೇ ಕುಳಿತುಕೊಳ್ಳುವ ಪ್ರಸಂಗವನ್ನು ಅವಳು ಬೇಕೆಂದೇ ತಪ್ಪಿಸುತ್ತಿದ್ದಳು.

ಬಾಳಾಸಾಹೇಬರ ಬಗ್ಗೆ ಶಕುಂತಲೆಯಲ್ಲಿ ಕರುಣೆ ಉತ್ಪನ್ನವಾಗಿತ್ತು.

ಅವರಿಂದ ಅವಳ ಮನಸ್ಸಿನ ಮೇಲಾದ ಪ್ರಹಾರವನ್ನೂ ಅವರ ಕಠೋರ ವರ್ತನವನ್ನೂ ಮರೆತುಬಿಡುವದು ತನ್ನ ಕರ್ತವ್ಯವೆಂಬ ಭಾವನೆ ಅವಳಲ್ಲಿ ಉತ್ಪನ್ನವಾಗತೊಡಗಿತ್ತು. ಆದರೆ ಅವರೊಡನೆ ಏಕಾಂತದಲ್ಲಿ ಕುಳಿತು ಮಾತನಾಡಬೇಕೆಂದು ಅವಳಿಗೆನಿಸುತ್ತಿರಲಿಲ್ಲ. ಅವರ ಬಗ್ಗೆ ಅವಳ ಅಂತಃ ಕರಣ ಮೃದುವಾಗಿತ್ತು, ಅದರಲ್ಲಿ ಕ್ಷಮೆಯಿತ್ತು; ಆದರೆ ಏಕಾಂತದಲ್ಲಿ ಕುಳಿತು ಮಾತನಾಡಲು ಪ್ರೇರೇಪಿಸುವ ಪ್ರೇಮದ ಭಾವನೆ ಅದರಲ್ಲಿರಲಿಲ್ಲ. ಮತ್ತೆ ಅವಳ ಚಿತ್ತ ಇನ್ನೂ ಒಂದು ಕಾರಣದಿಂದ ಅಸ್ವಸ್ಥವಾಗಿತ್ತು.

ಆ ಕಾರಣವೆಂದರೆ ಪದ್ಮಾಕರನ ಖಟ್ಲೆ ಮುಗಿಯುತ್ತ ಬಂದಿತ್ತು; ಇನ್ನು ಮೂರು ನಾಲ್ಕು ದಿನಗಳಲ್ಲಿಯೇ ಅದರ ಪರಿಣಾಮ ಹೊರಬೀಳುವದಿತ್ತು. ಪದ್ಮಾಕರನಿಗೆ ದೀರ್ಘಾವಧಿ ಶಿಕ್ಷೆಯಾಗುವದೆಂದು ಜನರು ಆಡುತ್ತಿದ್ದರು. "ಶಿಕ್ಷೆಯ ಆ ಸುದ್ದಿಯನ್ನು ಕೇಳಿ ನಾನು ಸಹನಮಾಡಿಕೊಳ್ಳಬಲ್ಲೆನೇ ?" ಎಂದು ಶಕುಂತಲೆಗೆನಿಸುತ್ತಿತ್ತು. "ಅದನ್ನು ಕೇಳುವದಕ್ಕಿಂತ ಮೊದಲೇ ಮರಣ ಬಂದರೆ ಎಷ್ಟು ಒಳ್ಳೆಯದಾದೀತು ! ಈ ಜೀವಿತಕ್ಕೆ ಇನ್ನು ಮೇಲೆ ದೊರೆಯತಕ್ಕ ಸುಖ ಇನ್ನಾವುದುಳಿದಿದೆ? ಸುಖ ದುಃಖಗಳ ಹೆಚ್ಚು ಕಡಿಮೆ ಬೆರಕೆ ಪ್ರತಿ ಜೀವದ ಪಾಲಿಗೂ ಬಂದೇ ಬರುತ್ತದೆ, ಹಾಗೆ ನನ್ನ ಪಾಲಿಗೂ ಬಂತು. ನನ್ನ ಮತ್ತು ಪದ್ಮಾಕರನ ಪ್ರೇಮ ಲೌಕಿಕ ದೃಷ್ಟಿಯಿಂದ ಸಫಲ ವಾಗಲೆಂದು ಮೊದಲಿದ್ದ ಹವ್ಯಾಸ ಇಂದು ಮೂರ್ಖತನದ್ದೆಂದು ನಿಶ್ಚಿತವಾಗಿ ಹೋಗಿದೆ. ಆದರೆ ಆ ಬಳಿಕಾದರೂ ಪದ್ಮಾಕರನು—ಲೌಕಿಕ ದೃಷ್ಟಿಯಿಂ ದಲ್ಲನಾದರೆ ಬಿಡಲಿ—ಮಾನಸಿಕವಾಗಿ ನನ್ನವನೇ ಆಗಿದ್ದನು; ಮಾತೃ ಭೂಮಿಯ ಸ್ವಾತಂತ್ರ್ಯದ ತರುವಾಯ ನನ್ನ ಪ್ರೇಮವನ್ನೇ ಪವಿತ್ರವೆಂದು ತಿಳಿದಿದ್ದನು." ಈ ಮಾತುಗಳನ್ನು ಅವನೇ ನುಡಿದಿರಲಿಲ್ಲವೇ? ಕಾರ್ಯದ ನೆವದಿಂದ ಅವನ ಸಹವಾಸದಲ್ಲಿದ್ದು ಜೀವನದಲ್ಲುಂಟಾದ ನಿರಾಶೆಯನ್ನು ದೂರ ಮಾಡಬೇಕೆಂದು ಶಕುಂತಲೆಯ ಆಶೆಯಾಗಿತ್ತು; ಆದರೆ ಇಂದು ದೀರ್ಘ ಕಾಲದ ಶಿಕ್ಷೆಯನ್ನನುಭವಿಸಲು ಅವನು ಅವಳಿಂದ ದೂರ ಹೋಗು ವವನಿದ್ದನು. ಅವನು ಹೋದ ಬಳಿಕ ಸುಖದುಃಖಗಳನ್ನು ವಿಂಗಡಿಸುವ ಸಂವೇದನಶೀಲತೆಯಾದರೂ ಅವಳ ಹೃದಯದಲ್ಲಿ ಉಳಿದೀತೇ? ಪದ್ಮಾ ಕರನಿಲ್ಲದೆ ಅವಳ ಜೀವನ ಉನ್ನತಿ, ನೆರಳು, ಶೀತಲತೆಗಳಿಲ್ಲದ ಮರುಭೂಮಿ

ಯಾಗುವದಿತ್ತು. ಬಳಿಕ ಬದುಕಿ ಏನು ಪ್ರಯೋಜನ? ಆ ಜೀವನ್ಮರಣಕ್ಕಿಂತ ಪ್ರತ್ಯಕ್ಷ ಮರಣಕ್ಕೆ ತಲೆಯೊಡ್ಡುವದು ಒಳಿತಲ್ಲವೇ? ಹಾಗಾದರೆ, ಪದ್ಮಾಕರನ ಶಿಕ್ಷೆಯ ಸುದ್ದಿಯನ್ನು ಕೇಳುವ ದುಃಖವಾದರೂ ದೂರವಾದೀತು......! ಅವಳ ತಲೆಯಲ್ಲಿ ಹಗಲೆಲ್ಲ ಇದೇ ವಿಚಾರ. ರಾತ್ರಿಯ ಸಮಯದಲ್ಲಂತೂ ಹುಚ್ಚು ಎಲ್ಲಿ ಹಿಡಿಯುವದೋ ಎಂದು ಅಂಜಿಕೆಯವಳಿಗೆ! ಮರಣವನ್ನಪ್ಪಲು ಇಷ್ಟೊಂದು ಆತುರತೆಯೆಂದರೆ ನಿಜವಾಗಿಯೂ ಆಶ್ಚರ್ಯ! ಎಂತಹ ಆಶ್ಚರ್ಯವಿದ್ದರೂ ಆ ಉತ್ಸುಕತೆಯ ಪ್ರತ್ಯಕ್ಷ ಅನುಭವ ಅವಳಿಗೆ ಆಗುತ್ತಿತ್ತು.

ಮರುದಿನ ಪದ್ಮಾಕರನ ಖಟ್ಲೆಯ ಪರಿಣಾಮ ಹೊರಬೀಳುವದಿತ್ತು. ಅಂದಿನ ರಾತ್ರಿ ಮಾತ್ರ ತೀರ ಅಸಹ್ಯವಾಗಿತ್ತು; ಭೀಕರ ವಿಚಾರಗಳು ಅವಳನ್ನು ತಿನ್ನುತ್ತಿದ್ದವು; ಮಧ್ಯರಾತ್ರಿ ಮುಗಿದಿರಬೇಕು, ಎಲ್ಲೆಡೆಗೂ ಶಾಂತತೆ ಪಸರಿಸಿತ್ತು; ಆದರೆ ಅವಳ ಮನಸ್ಸಿನಲ್ಲಿ ಅದೆಂತಹ ಜ್ವಾಲೆ, ಅದೆಂತಹ ಅಶಾಂತಿ!

ಕೊನೆಗೆ ತನ್ನ ಕೋಣೆಯ ಹಿಂಬದಿಯ ಬಾಗಿಲನ್ನು ತೆರೆದು ಹಿತ್ತಲಿನಲ್ಲಿ ಬಂದು ಕುಳಿತಳು. ವಿದ್ಯುದ್ದೀಪಗಳ ಪ್ರಕಾಶ ಮಾಯವಾಗಿತ್ತು; ಎಲ್ಲಿ ನೋಡಿದಲ್ಲಿ ಕತ್ತಲೆಯೋ ಕತ್ತಲೆ; ಶಕುಂತಲೆಗೆ ಮಾತ್ರ ಈ ಕತ್ತಲೆಯೇ ಸುಖದಾಯಕವೆನಿಸಿತು, ಅವಳು ಮೆಟ್ಟಲಿನ ಮೇಲೆ ಹಾಗೇ ಕುಳಿತುಬಿಟ್ಟಳು; ಇಬ್ಬರು ಪೋಲೀಸರು ಬಡಿಗೆಯನ್ನು ಅಪ್ಪಳಿಸುತ್ತ ಗಸ್ತಿ ತಿರುಗುತ್ತಿದ್ದರು. ಅಲ್ಲಿಲ್ಲ ಅಡ್ಡಾಡಿ ಅವರು ಬದಿಯ ರಸ್ತೆಗೆ ಹೊರಟುಹೋದರು. ಅವರ ಧ್ವನಿಯೂ ಕೇಳಬರದಂತಾಯಿತು. ಬಳಿಕ ಶಕುಂತಲೆಗೆನಿಸಿತು, 'ಇನ್ನು ಒಳಗೆ ಹೋಗಿ ಹಾಸಿಗೆಯಮೇಲೆ ಬಿದ್ದುಕೊಳ್ಳೋಣವೇ?' ಎಂದು. ಹಾಗೇ ಯೋಚಿಸುತ್ತ ಬಾಗಿಲ ಮೇಲೆ ಹಬ್ಬಿದ ಬಳ್ಳಿಯಲ್ಲಿಯ ಒಂದೆರಡು ಹೂಗಳನ್ನು ಹರಿದೊಯ್ಯೋಣವೆಂದು ಆ ಬಳ್ಳಿಯ ಬಳಿ ಹೋದಳು; ಹೂ ಹರಿದುಕೊಂಡು ತಿರುಗುವದರಲ್ಲಿದ್ದಳು, ಆದರೆ ಅಷ್ಟರಲ್ಲಿ ಯಾರೋ ಅವಳನ್ನು ಪಿಸುಗುಟ್ಟುವ ಧ್ವನಿಯಲ್ಲಿ ಕೂಗಿದಂತಾಯಿತು; ಬೆಚ್ಚಿಬಿದ್ದು ಹಿಂದಿರುಗಿ ನೋಡಿದಳು; ಗೇಟಿನ ಬಳಿ ಯಾರೋ ನಿಂತಂತೆ ಕಾಣಿಸಿತು.

ಅಂಜಿಕೆಯಿಂದ ಮೈಯಲ್ಲಿ ನಡುಕ ತುಂಬಿತು; ಮನೆಯೊಳಗೆ ಓಡ

ಬೇಕೆಂದು ಯೋಚಿಸಿದಳು; ಆದರೆ ಆ ಮನುಷ್ಯನು ಮತ್ತೆ ಅವಳ ಹೆಸರಿನಿಂದ ಕರೆದನು; ಆಗ ಶಕುಂತಲೆ ಧ್ವನಿಯನ್ನು ಗುರುತಿಸಿದಳು.

ಒಮ್ಮೆಲೇ ಮುಂದೆ ಬಂದು ಅವನನ್ನು ಕರೆದಳು, " ಶ್ಯಾಮೂ........ ? ಒಳಗೆ ಬಾ, ಅಲ್ಲೇಕೆ ನಿಂತಿದ್ದೀ ? "

" ನಿಮ್ಮನ್ನು ಇಲ್ಲಿ ಕಾಣದಿದ್ದರೆ ಒಳಗೆ ಬರುವವನೇ ಇದ್ದೆ....; ಆದರೆ ಈಗ ಬೇಡ; ಪ್ರತಿಕ್ಷಣವೂ ಈಗ ಮಹತ್ವದ್ದಿದೆ; ಪದ್ಮಾಕರನು ನಿಮಗೊಂದು ಮಾತನ್ನು ಹೇಳಿಕಳಿಸಿದ್ದಾನೆ, ಅದನ್ನಷ್ಟು........ "

" ಮಾತನ್ನು ಹೇಳಿ ಕಳಿಸಿದ್ದಾನೆ? ಅದೇನು ? " ಶಕುಂತಲೆ ಅಧೀರಳಾಗಿ ಕೇಳಿದಳು.

ಶ್ಯಾಮೂ ಹೇಳಿದನು, " ನೀವು ಎಳ್ಳಷ್ಟೂ ಚಿಂತೆ ಮಾಡುವ ಕಾರಣ ವಿಲ್ಲ. ನನಗೆ ಶಿಕ್ಷೆ ಆಗುವದೇ ಇಲ್ಲ ಎಂದು. "

" ಹಾಗೆಂದರೇನು ? "

" ಅಂದರೆ, ಈಗೆರಡು ತಾಸುಗಳ ಹಿಂದೆಯೇ ಪದ್ಮಾಕರನು ಸೆರೆಮನೆ ಯಿಂದ ಪಾರಾಗಿ ಹೋದನು. "

" ಹಾಂ, ಇದು ನಿಜವೇ ಶ್ಯಾಮೂ ? " ಎಂದವಳು ಶ್ಯಾಮೂನ ಕೈ ಯನ್ನು ಗಟ್ಟಿಯಾಗಿ ಹಿಡಿದಳು.

" ಹೌದು, ಪದ್ಮಾಕರನು ಪಾರಾಗಿ ಹೋದನು. ಈಹೊತ್ತಿಗೆ ಅವನು ಸುರಕ್ಷಿತ ಸ್ಥಳವನ್ನು ಕೂಡ ಮುಟ್ಟಿರಬಹುದು. ಯೋಗ್ಯ ಸಮಯ ದೊರೆ ತೊಡನೆಯೇ ಅವನು ನಿಮ್ಮನ್ನು ಕಾಣುವನಂತೆ; ಅಲ್ಲಿಯ ವರೆಗೆ ನೀವು ಸಂತೋಷದಿಂದಿರಬೇಕೆಂದು ಹೇಳಿದ್ದಾನೆ. "

" ಶ್ಯಾಮೂ ! " ಇನ್ನೂ ಅವಳೇನು ಮಾತಾಡುವವಳಿದ್ದಳೋ ಯಾರಿಗೆ ಗೊತ್ತು; ಅಷ್ಟರಲ್ಲಿ ಶ್ಯಾಮೂ ತನ್ನ ಕೈಯನ್ನು ಬಿಡಿಸಿಕೊಂಡು ಹೇಳಿದ, " ನನಗೆ ಇಲ್ಲಿ ಹೆಚ್ಚು ಹೊತ್ತು ನಿಲ್ಲಲು ಬರುವಂತಿಲ್ಲ; ನಾನು ಹೋಗು ತ್ತೇನೆ, ವಂದೇ ಮಾತರಮ್. "

ಅವಳೆಂದಳು, " ವಂದೇ ಮಾತರಮ್ ಶಾಮೂ, ಪದ್ಮಾಕರನಿಗೆ ನಾನು ಸಂತೋಷದಲ್ಲಿಯೇ ಇದ್ದೇನೆಂದು ಹೇಳು. "

ಮರುಕ್ಷಣದಲ್ಲಿ ಶ್ಯಾಮೂ ಅವಸರವಸರವಾಗಿ ಹೊರಟುಹೋದನು.

ಆದರೆ ಶಕುಂತಲೆ ಗೇಟಿನ ಬಾಗಿಲಿಗೆ ಆತು ನಿಂತವಳು ಹಾಗೆಯೇ ನಿಂತುಬಿಟ್ಟಿದ್ದಳು. ಅವಳ ಮನಸ್ಸು ಯಾವುದೋ ಒಂದು ಬಗೆಯ ಸುಖ ಸಮಾಧಾನಗಳನ್ನು ಅನುಭವಿಸುತ್ತಿತ್ತು. ಈಗ ಕೆಲವೇ ನಿಮಿಷಗಳ ಹಿಂದೆ ಅವಳು ಮೃತ್ಯುವನ್ನು ಆದರದಿಂದ ಸ್ವಾಗತಿಸುತ್ತಿದ್ದಳು. ಅವಳಿಗೆ ಜೀವ ಬೇಸರವಾಗಿತ್ತು. ಆ ದಾಹ ಈಗ ಒಮ್ಮೆಲೇ ಇಲ್ಲದಂತಾಯಿತು. ತುಂಬಿ ಹರಿಯುತ್ತಿರುವ ಶಾಂತವಾದ ಸರೋವರದಂತೆ ಅವಳ ಮನಸ್ಸು ಶಾಂತ ವಾಗಿತ್ತು; ಪದ್ಮಾಕರನು ಬಂಧನವನ್ನು ದಾಟಿಹೋದದ್ದರಿಂದ ಅವಳ ಜೀವ ನಕ್ಕೆ ಬೆಲೆ ಬಂದಿತ್ತು; ಬದುಕಬೇಕೆಂಬ ಅವಳ ಆಶೆಯಲ್ಲಿ ಅರ್ಥವಿತ್ತು. ಪದ್ಮಾಕರನನ್ನು ಅವಳಿಂದು ಕಾಣುವದು ಶಕ್ಯವಿರಲಿಲ್ಲ ನಿಜ; ಆದರೂ ಈ ಹೋರಾಟದ ಕಾಲ, ಅಡಗಿ ಕೂಡುವ ಕಾಲ ಒಂದಿಲ್ಲೊಂದು ದಿನ ಮುಗಿದು ದೇಶಕ್ಕೆ ಸ್ವಾತಂತ್ರ್ಯ ದೊರೆತೇ ದೊರೆಯುವದಲ್ಲ !

ಅವಳಿಗೀಗ ಬದುಕಬೇಕೆನಿಸುತ್ತಿತ್ತು.

ಅವಳ ಅಂತಃಕರಣದಲ್ಲಿ ಪ್ರಣಯದ ಭಾವನೆ ಮೊದಲು ಅಂಕುರಿಸಿ ದಾಗ ಜೀವಿತದ ಬಗ್ಗೆ ಅವಳೊಂದು ಸ್ವಪ್ನಮಂದಿರವನ್ನು ಕಟ್ಟಿದ್ದಳು. ಆದರೆ ಅದು ಮುಂದೆ ಕುಸಿದುಬಿದ್ದಿತು. ಜೀವನದಲ್ಲಿ ನಿರಾಶೆ ಮೂಡಿತು; ಈ ನಿರಾಶೆಯನ್ನು ಮರೆಯಲು ಸಾಧ್ಯವಾಗಲೆಂದು ಅವಳು ವಿವಾಹದ ಉಪಾಯ ವನ್ನು ಕೈಕೊಂಡಳು; ಆದರೆ ಆ ಉಪಾಯ ಅವಳನ್ನು ಸರಿಯಾದ ದಾರಿಗೆ ಕರೆದೊಯ್ಯಲಿಲ್ಲ. ಇನ್ನು ದಾರಿತಪ್ಪಿದ ಪಥಿಕನಂತೆಯೇ ನನ್ನ ಉಳಿದ ಜೀವ ನದ ಪ್ರಯಾಣ ಸಾಗತಕ್ಕದ್ದೆಂದು ಅವಳ ಮನಸ್ಸಿಗೆ ನಂಬಿಕೆಯಾಗಿಬಿಟ್ಟಿತು. ಆದರೆ ಆಶ್ಚರ್ಯ ! ಹೀಗೆ ಹೋಗುವಾಗಲೇ ಅವಳಿಗೆ ಇಚ್ಛಿಸಿದ ಪ್ರೇಮ ದೊರೆತಿತು. ಪದ್ಮಾಕರನು ಸೆರೆಮನೆಯಿಂದ ತಪ್ಪಿಸಿಕೊಂಡು ಹೋದುದೆಂ ದರೆ, ತನ್ನ ಪ್ರೇಮ ಇನ್ನುಮುಂದೆಯೂ ತನಗೆ ಸಂಗಾತಿಯಾಗಿಯೇ ಉಳಿಯು ವದೆಂದು ಅರ್ಥವಾಯಿತು; ಆ ಪ್ರೇಮ ಸತತವಾಗಿ ಅವಳಿಗೆ ದೊರೆಯುವ ದಿತ್ತು. ಅದಕ್ಕಾಗಿ ಅವಳಿಗೆ, ' ಇರಬೇಕು ಇನ್ನೂ ಇರಬೇಕು ' ಎಂದೆ ನಿಸುತ್ತಿತ್ತು.

ಬಾಳಾಸಾಹೇಬರ ವಿಚಾರವನ್ನು ಅವಳು ಮರೆಯುವಂತಿರಲಿಲ್ಲ. ಇನ್ನು ಅವರನ್ನವಳು ಬಿಟ್ಟುಬಿಡುವದೂ ಸಾಧ್ಯವಿರಲಿಲ್ಲ. " ಅವರಿಗೆ ನನ್ನ

ಭಾವನೆಗಳಿಗೆ ಬೆಲೆಯಿದೆಯೆಂದೆನಿಸದಿದ್ದರೆ, ನನ್ನ ಮೇಲೆ ಪತಿ ಎಂದು ಅವರ ಅಧಿಕಾರವೂ ನಡೆಯಲಾರದು" ಎಂದು ಎಲ್ಲ ಸಂಬಂಧವನ್ನು ಮಾನಸಿಕ ವಾಗಿ ಹರಿದೊಗೆಯುವದು ಸುಲಭವಲ್ಲದಿದ್ದರೂ ಒಂದು ಕಾಲದಲ್ಲಿ ಸಾಧ್ಯ ವಿತ್ತು. ಈಗ ಅದೂ ಸಾಧ್ಯವಿರಲಿಲ್ಲ. ಅದಕ್ಕೆ ವಿರುದ್ಧವಾಗಿ ಅವಳು ಅವರಿಗಾಗಿ ತನ್ನ ಪಾಲಿನ ಕರ್ತವ್ಯವನ್ನು ಮಾಡಲೇಬೇಕಾಗಿತ್ತು; ಅವರೀಗ ಪೂರ್ಣವಾಗಿ ಅವಳನ್ನೇ ನಂಬಿದ್ದರು.

ಮಾತಿನ ಭರದಲ್ಲಿ ನಿನ್ನೆ ಬಾಳಾಸಾಹೇಬರು ಅವಳಿಗೆಂದಿದ್ದರು, "ನಿನ್ನನ್ನು ಬಿಟ್ಟು ನನಗೆ ಬೇರಾರಿದ್ದಾರೆ?"

ಈ ಮಾತು ಅವರ ಮುಖದಿಂದ ಹೊರಬೀಳುವಾಗಿನ ಅವರ ಕಣ್ಣು ಗಳನ್ನೂ ದೀನ ಮುಖಮುದ್ರೆಯನ್ನೂ ನೋಡಿ ಶಕುಂತಲೆಯ ಹೃದಯದಲ್ಲಿ ಕರುಣೆಯ ಸೆಲೆಯೊಡೆದಿತ್ತು. "ನಿನ್ನನ್ನು ಬಿಟ್ಟರೆ ನನಗೆ ಬೇರಾರಿದ್ದಾರೆ?" ಎಂಬ ಮಾತನ್ನು ಆಡುವದಕ್ಕಿಂತ ಮೊದಲು ಅವರು ಹೇಳಿದ ಅನೇಕ ಸಂಗ ತಿಗಳನ್ನು ಕೇಳಿ ಅವಳಿಗೆ ಆಶ್ಚರ್ಯವೆನಿಸಿತ್ತು, ಸಮಾಧಾನವೂ ಆಗಿತ್ತು. ರಣಾಂಗಣದಿಂದ ಬಂದ ಅವರ ಎರಡನೆಯ ಪತ್ರದಲ್ಲಿ ತಿಳಿಯದೆ ಹೋದ ಹರಕು ಮುರಕು ವಾಕ್ಯಗಳ ಅರ್ಥ ಅವಳಿಗೀಗ ಆಯಿತು. ಯುದ್ಧದ ಬಗ್ಗೆ ಬಾಳಾಸಾಹೇಬರಲ್ಲಿ ತಿರಸ್ಕಾರ ಉಂಟಾಗಿತ್ತು. ಈ ಮಹಾಯುದ್ಧ ಯಾರಿ ಗಾಗಿ? ಏನನ್ನು ಸಾಧಿಸುವದಕ್ಕಾಗಿ? ಯುದ್ಧಭೂಮಿಯ ಮೇಲೆ ಪ್ರತ್ಯಕ್ಷ ಕಂಡಾಗ, ಅವರಿಗೆ ಇದರ ಅರಿವಾಯಿತು. ಮಾತಾಡುತ್ತ ಮಾತಾಡುತ್ತ ಅವರೇ ನುಡಿದಿದ್ದರು, "ಶಕುಂತಲಾ, ಬೇಕಾದರೆ ಭಾವೂಸಾಹೇಬರ ಎದು ರಿಗೇ ಒಪ್ಪಿಕೊಳ್ಳುತ್ತೇನೆ, ನಿನ್ನ ಮಾತನ್ನು ಅಲ್ಲಗಳೆಯಲು ಪ್ರೇರೇಪಿಸಿದ ವಿಚಾರಗಳನ್ನೀಗ ನಾನು ಬಿಟ್ಟುಕೊಟ್ಟಿದ್ದೇನೆ. ನಾನು ಹಿಡಿದ ಮಾರ್ಗ ದೇಶಸೇವೆಯ ಮಾರ್ಗವೆಂದು ತಿಳಿದೇ ನಾನು ಹಟವನ್ನು ಸಾಧಿಸಿದೆನು. ಅದು ತಪ್ಪು ಎಂಬುದು ನನಗೀಗ ಹೊಳೆಯಿತು. ನನ್ನ ದೃಷ್ಟಿ ಹೋಗಿದೆ, ನಾನು ಕುರುಡನಾಗಿದ್ದೇನೆ, ಆದರೆ ನಿಜವನ್ನೇ ಹೇಳುವದಾದರೆ ನನ್ನ ಒಳ ಗಿನ ಕಣ್ಣುಗಳು ಈಗ ತೆರೆದಿವೆ. ಅದಕ್ಕೆಂದೇ ಹೇಳುತ್ತೇನೆ, ನಾನು ಮೊದಲು ಕುರುಡನಾಗಿದ್ದೆ, ಈಗಲ್ಲ; ಈಗ ನಾನು ಎಲ್ಲವನ್ನೂ ನೋಡಬಲ್ಲೆ; ಆ ಕಣ್ಣುಗಳನ್ನು ಪಡೆದೇ ನಾನು ನಿನ್ನ ಬಳಿಗೆ ಬಂದಿದ್ದೇನೆ. ಹಟವೆಂಬುದು

ನನ್ನಲ್ಲೀಗ ಎಳ್ಳಷ್ಟೂ ಉಳಿದಿಲ್ಲ; ನೀನಾದರೂ ಮೊದಲಿದ್ದ ನಿನ್ನ ಮನಸ್ಸಿನ ಸಂಕೋಚವನ್ನು ನೂಕಿ ಬಿಡು. ನನ್ನನ್ನು ನೋಡಿಕೊಳ್ಳುವವಳು ನೀನೇ ಅಲ್ಲವೇ ? ನಿನ್ನ ಹೊರತು ನನಗೆ ಬೇರೆ ಯಾರಿದ್ದಾರೆ ?........"

ಬಾಳಾಸಾಹೇಬರ ಈ ಮಾತುಗಳೆಲ್ಲ ಶಕುಂತಲೆಗೆ ನೆನಪಾದವು; ಅಹುದು ನಿಜ, ಅವರಿಗೆ ಬೇರೆ ಯಾರಿದ್ದಾರೆ ?

ತನ್ನ ಜೀವನದ ಬಗ್ಗೆ ಶಕುಂತಲೆಗೆ ಆಶ್ಚರ್ಯವೆನಿಸಿತು. ಕೆಲ ದಿನಗಳ ಹಿಂದೆ ಹೀಗೆಯೇ ವಿಚಾರ ಮಾಡುತ್ತ ಕುಳಿತಾಗ ಅವಳಿಗೆ ಹೊಳೆಯಿತು, "ಇತ್ತ ಪದ್ಮಾಕರನು ಶಿಕ್ಷೆಯ ದಾರಿಯನ್ನು ಕಾಯುತ್ತ ಸೆರೆಮನೆಯಲ್ಲಿ ದ್ದಾನೆ, ಅತ್ತ ಬಾಳಾಸಾಹೇಬರು ರಣರಂಗದಲ್ಲಿ ಯುದ್ಧ ಮಾಡುತ್ತಿದ್ದಾರೆ, ನಾನು, ನಾ....ನು ಪದ್ಮಾಕರನ ಪತ್ನಿಯಲ್ಲ, ಬಾಳಾಸಾಹೇಬರ ಪತ್ನಿ!" ಆ ವಿಚಾರವೇ ಅವಳಿಗೆ ಸಹಿಸದಾಯಿತು. ಈಗಾದರೂ ಪದ್ಮಾಕರ ಬಾಳಾ ಸಾಹೇಬರಿಬ್ಬರ ವಿಚಾರಗಳೂ ಅವಳ ತಲೆಯಲ್ಲಿ ಬರುತ್ತಿದ್ದವು; ಆದರೆ ಅಂದಿಗೂ ಇಂದಿಗೂ ಅಂತರವಿತ್ತು. ಪದ್ಮಾಕರನು ಆ ಕ್ಷಣಕ್ಕೆ ಎಲ್ಲಿದ್ದನೆಂ ಬುದು ಅವಳಿಗೆ ಗೊತ್ತಿರದಿದ್ದರೂ, ಅವನು ಸುರಕ್ಷಿತನಾಗಿದ್ದನು, ಸ್ವತಂತ್ರ ನಾಗಿದ್ದನು. ಬಾಳಾಸಾಹೇಬರು ಶರೀರದಿಂದ ಕ್ಷೀಣರಾಗಿದ್ದರೂ ಮನಸ್ಸಿ ನಿಂದ ಶುಚಿರ್ಭೂತರಾಗಿ ಅವಳ ಬಳಿ ಬಂದಿದ್ದರು. ಈ ಈರ್ವರು ಪುರು ಷರ ಜೀವನದಲ್ಲಿ ಅವಳ ಜೀವನ ಸಿಲುಕಿಕೊಂಡಿತ್ತು. ಇವರಲ್ಲಿ ಯಾರನ್ನು ಬಿಡುವದೂ ಸಾಧ್ಯವಿದ್ದಿರಲಿಲ್ಲ. ಪದ್ಮಾಕರ ಮತ್ತು ಬಾಳಾಸಾಹೇಬ! ಮಾನಸಿಕ ಪ್ರೀತಿಯ ದೃಷ್ಟಿಯಿಂದ ನೋಡಿದರೆ ಪದ್ಮಾಕರನೇ ಅವಳ ಹೃದ ಯದ ಸ್ವಾಮಿಯಾಗಿದ್ದನು. ಅವನ ಪತ್ನಿಯೇ ಅವಳಾಗಿದ್ದಳು!.......... 'ಪತ್ನಿ' ಎಂಬರ್ಥ ಅವಳ ಮನಸ್ಸಿಗೆ ಹೊಳೆದುಹೋದರೂ ಅವಳು ಬೆಚ್ಚಿ ಬೀಳಲಿಲ್ಲ; ಅವಳ ಮನಸ್ಸು ಮಾತ್ರ ಅವಳನ್ನು ಕೇಳಿತು "ಹಾಗಾದರೆ ಬಾಳಾಸಾಹೇಬರೊಡನೆ ನಿನ್ನ ಸಂಬಂಧವೇನು?"

ಅವಳು ಕೂಡಲೇ ಉತ್ತರ ಕೊಟ್ಟಳು "ಚಿಕ್ಕ ಮಗುವಿನಂತೆ ನನ್ನ ಪಾಲನೆ ಪೋಷಣೆಯನ್ನೇ ಅವಲಂಬಿಸಿ ಅವರಿದ್ದಾರೆ; ನಾನು ಅವರನ್ನು ವಾತ್ಸಲ್ಯದಿಂದ ನೋಡಿಕೊಳ್ಳುವ ಪರಿಚಾರಿಕೆ ಮಾತ್ರ........"

ಈ ವಿಚಾರದಿಂದ ಅವಳ ಮನಸ್ಸು ಶಾಂತವಾಯಿತು. ಅಂಜಿಕೆ,

ಸಂಶಯ ಇತ್ಯಾದಿಗಳೊಂದೂ ಅವಳ ಅಂತಃಕರಣದಲ್ಲಿ ಉಳಿಯಲಿಲ್ಲ; ನಿರಾಶೆ, ದುಃಖ, ಬೇಸರ, ತಿರಸ್ಕಾರಗಳೆಲ್ಲ ಹೇಳಹೆಸರಿಲ್ಲದಂತೆ ಮಾಯವಾಗಿದ್ದವು; ಬದುಕಬೇಕೆಂಬ ಆಶೆ ಅವಳಲ್ಲಿ ತೀವ್ರವಾಗಿತ್ತು.

ಅವಳು ತನ್ನ ದೃಷ್ಟಿಯನ್ನು ಆಕಾಶದ ಕಡೆಗೆ ತೂರಿದಳು; ಮೇಲೆಲ್ಲ ಬೆಳ್ದಿಂಗಳು ಹರಹಿತ್ತು. ಆಕಾಶದಲ್ಲಿ ಅವಳಿಗೆ ಗೊತ್ತಿಲ್ಲದ ಎರಡು ಗ್ರಹಗಳು ಒಂದರ ಬಳಿ ಒಂದು ಪ್ರಕಾಶಮಾನವಾಗಿ ಶೋಭಿಸುತ್ತಿದ್ದವು. ಚಂದಿರನ ಮತ್ತು ಆ ಗ್ರಹಗಳ ಪ್ರಕಾಶವು ಭೂಮಿಯನ್ನೆಲ್ಲ ಆವರಿಸಿಬಿಟ್ಟಿತ್ತು. ಕೆಳಗಡೆ ಅವಳಿದ್ದಲ್ಲಿ ಕತ್ತಲೆ ಕವಿದಿದ್ದರೂ ಗೇಟಿನ ಬಾಗಿಲ ಮೇಲೆ ಕೈಯಿಟ್ಟು ಅವಳು ಪ್ರಕಾಶವನ್ನು ನೀಡುವ ಆಕಾಶದಲ್ಲಿಯ ಆ ಅಸಂಖ್ಯ ತೇಜಃಪುಂಜ ನಕ್ಷತ್ರಗಳನ್ನು ನೋಡುತ್ತ ಅದೆಷ್ಟೋ ಹೊತ್ತು ನಿಂತುಬಿಟ್ಟಿದ್ದಳು. ಅವಳಿಗೆನಿಸುತ್ತಿತ್ತು "ನನ್ನ ಮಾತೃಭೂಮಿಯ ಸ್ವಾತಂತ್ರ್ಯದ ಬಗ್ಗೆ ನಿರಾಶಳಾಗುವ ಕಾರಣವೇನು ? ಈ ಅನಂತ ವಿಶ್ವದಲ್ಲಿ ದಬ್ಬಾಳಿಕೆ ಕೆಲಕಾಲ ಬಲಿಷ್ಠವೆನಿಸಿದರೂ, ಕೊನೆಗೆ ಅದರ ನಾಶವಾಗಲೇ ಬೇಕು; ನಮ್ಮ ಈ ಮಾತೃಭೂಮಿ ತೇಜಃಪುಂಜವಾದ ಅಸಂಖ್ಯ ತಾರಕೆಗಳಿಂದ, ಗ್ರಹಗಳಿಂದ ಪ್ರಕಾಶದ ಪ್ರಸಾರವನ್ನು ಸಂತತವೂ ಪಡೆಯುತ್ತಿದೆ. ಇಂತಹ ಭೂಮಿಯನ್ನು ಪಾಶವೀ ಅತ್ಯಾಚಾರದ ಕತ್ತಲೆಯು ಮುತ್ತಿದರೆ ಅದೆಷ್ಟು ದಿನಗಳವರೆಗೆ ತಾನೇ ನಿಲ್ಲಬಲ್ಲದು ? ಸತ್ಯಪ್ರಕಾಶದಲ್ಲಿ ಸ್ವಾತಂತ್ರ್ಯದ ಉದಯವಾಗಲೇ ಬೇಕು !!!"



ಪ್ರತಿಭಾ ಗ್ರಂಥಮಾಲೆಯಲ್ಲಿ ಬಂದ

ಪ್ರೊ. ನಾ. ಸೀ. ಫಡಕೆಯವರ

ಇನ್ನೊಂದು ಕೃತಿ

# ಬಿರುಗಾಳಿ

ಜರ್ಮನ್ ಕ್ರಾಂತಿಕಾರನಾದ

ಜಾನ್ ವಾಲ್ಟಿನ್ನನ ಆತ್ಮಚರಿತ್ರೆಯ

ಕಾದಂಬರಿರೂಪ

ಅನುವಾದಕರು:

ಶ್ರೀ. ರಘುನಾಥ ಮೋಡಿ.

ಶ್ರೀ. ಭಾಲಚಂದ್ರ ಘಾಣೇಕರ.

ಬೆಲೆ: ೩—೮—೦

*